"ಅರ್ಥಶಾಸ್ತ್ರಿಯು ಮಾನವ ಜನಾಂಗದ
ಮುಂದಿನ ಪೈಗಂಬರನು"

*"The players of the great game of economics of the future will have to be philosophers dealing with human conduct and destiny in the largest sense, international as well as national. The field of the political economist will be life and his instrument will be literature. The prophet of the race will be a political economist."*

— *G. B. Shaw.*

---

**ಅ ರ್ಪ ಣೆ :**

ಮದರಾಸು ಕ್ರಿಶ್ಚನ್ ಕಾಲೇಜಿನ

ನನ್ನ

ಗುರುಗಳಿಗೆ, ಗೆಳೆಯರಿಗೆ.

---

# ನಿವೇದನೆ

ಮದರಾಸು ವಿಶ್ವವಿದ್ಯಾನಿಲಯದ ಪ್ರೇರಣೆ, ಸಹಾಯ ಇವು ಈ ಪುಸ್ತಕಕ್ಕೆ ಮುಖ್ಯ ಅವಲಂಬನ. ಸುಮಾರು ಎಸ್. ಎಸ್. ಎಲ್. ಸಿಯ ವರೆಗೆ ಓದಿರುವ ಅಥವಾ ಓದದಿರುವ ಜನಸಾಮಾನ್ಯಕ್ಕೆ ಅರ್ಥವಾಗುವ ರೀತಿಯಲ್ಲಿ ಅರ್ಥಶಾಸ್ತ್ರದ ಮೂಲತತ್ತ್ವಗಳನ್ನು ವಿವರಿಸಬೇಕೆಂದು ಅವರು ಅಪ್ಪಣೆ ಕೊಡಿಸಿದ ಪ್ರಕಾರ ೧೯೫೨ರಲ್ಲಿ ಈ ಗ್ರಂಥದ ರಚನೆಯಾಯಿತು. ಇದನ್ನೂ, ಇದೇ ಬಗೆಯ ಇತರ ಹಸ್ತಪ್ರತಿಗಳನ್ನೂ ತೂಗಿನೋಡಿ ವಿಶ್ವ ವಿದ್ಯಾನಿಲಯದ ವಿದ್ವಾಂಸರುಗಳು ಇದಕ್ಕೇ ಬಹುಮಾನವು ಸಲಬೇಕೆಂಬ ತೀರ್ಮಾನಕ್ಕೆ ಬಂದರು ಇದಕ್ಕೋಸ್ಕರ ನಾನು ವಿಶ್ವವಿದ್ಯಾನಿಲಯಕ್ಕೆ ಕೃತಜ್ಞನಾಗಿದ್ದೇನೆ.

ಕನ್ನಡದಲ್ಲಿ ಶಾಸ್ತ್ರಗ್ರಂಥಗಳು ವಿರಳ. ಅವನ್ನೋದುವವರೂ ವಿರಳ. ಇಂಗ್ಲಿಷ್ ಬಲ್ಲವರಿಗೆ ಇವು ಅನಗತ್ಯ, ಸಾಮಾನ್ಯರಿಗೆ ಇವು ಬೇಕೆಂಬ ಜ್ಞಾನವೇ ಇಲ್ಲದಿರುವುದರಿಂದ ಹಾಗೂ ಇವು ಅನಗತ್ಯ ಎನಿಸಲು ಕಾರಣ ವಿದೆ. ಆದುದರಿಂದ ಇಂಥ ಪ್ರಕಟನೆಗಳಿಗೆ ಸರಕಾರದ, ವಿಶ್ವವಿದ್ಯಾನಿಲ ಯಗಳ ಸಹಾಯಧನವಾದರೂ ಇನ್ನಷ್ಟು ಹೆಚ್ಚು ಪ್ರಮಾಣದಲ್ಲಿ ಒದಗಿ ದರೆ ಚೆನ್ನಾಗಿರುತಿತ್ತು. ಈ ದಿಶೆಯಲ್ಲಿ ಸ್ವಲ್ಪವಾದರೂ ಶ್ರಮಿಸುತ್ತಿರುವ ಮೈಸೂರು ಮತ್ತು ಮದರಾಸು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ಕನ್ನಡಿಗರೆಲ್ಲ ಚಿರಋಣಿಗಳು.

ಅರ್ವಾಚೀನ ಅರ್ಥಶಾಸ್ತ್ರವು ಬಹಳ ವೇಗದಿಂದ ಬೆಳೆಯುತ್ತಿರುವ ಶಾಸ್ತ್ರ. ಈ ವರೆಗಿನ ಪ್ರಗತಿಯನ್ನೇ ಆದರೂ ೩೦೦ ಪುಟಗಳಲ್ಲಿ ಹಿಡಿಸು ವುದು ಸಾಹಸದ ಕೆಲಸ. ಆದರೆ ಒಂದು ಸಮಾಧಾನ. ಇದು ಅರ್ಥಶಾ ಸ್ತ್ರದ ಪಂಡಿತರ ಸಲುವಾಗಿ ಬರೆದದ್ದಲ್ಲ, ಜನಸಾಮಾನ್ಯರ ತಿಳಿವಳಿಕೆಗಾಗಿ, ಆದುದರಿಂದ ಸ್ಥೂಲಪರಿಚಯವೇ ಇಲ್ಲಿ ತೋರಬೇಕಾದ ಗುಣ—ಎಂಬುದು. ಇಷ್ಟಾದರೂ ಇದರಲ್ಲಿ ಅಗತ್ಯವಾಗಿ ಸೇರಿಸಬೇಕಾದ ಅಂಶಗಳೂ, ನಿವಾರಿಸ

ಬಹುದಾದ ಸ್ಖಾಲಿತ್ಯಗಳೂ ಯಾವುವೆಂದು ಸುಜ್ಞ ವಿಮರ್ಶಕರು ಸೂಚಿಸಿದರೆ ಮುಂದಿನ ಮುದ್ರಣದಲ್ಲಿ ತಿದ್ದಿಕೊಳ್ಳುತ್ತೇನೆ.

ಈ ಪುಸ್ತಕದ ಹಸ್ತಪ್ರತಿಯನ್ನು ಸಿದ್ಧಪಡಿಸುವಾಗಲೂ, ಅಕಾರಾದಿ ಸೂಚಿಯನ್ನು ತಯಾರಿಸುವಾಗಲೂ ನನಗೋಸ್ಕರ ಅವಿರತವಾಗಿ ಶ್ರಮಿಸಿದ ಗೆಳೆಯರು ವಿದ್ವಾನ್ ಶ್ರೀನಿವಾಸಭಟ್ಟ ಮತ್ತು ವಾಸುಸೇರೆಗಾರರಿಗೂ, ಇಷ್ಟು ಮುದ್ದಾಗಿ ಮುದ್ರಣವನ್ನು ಹೊಂದಿಸಿಕೊಟ್ಟ ಮಣಿಪಾಲ ಪವರ್ ಪ್ರೆಸ್ಸಿನ ಮೆನೇಜರರಾದ ಶ್ರೀ ಬಿ ಕೃಷ್ಣಯ್ಯನವರಿಗೂ, ಪ್ರಕಾಶನ ಕಾರ್ಯದಲ್ಲಿ ನೆರವಾಗಿ ಪ್ರೋತ್ಸಾಹಿಸಿದ ಕಾವ್ಯಾಲಯದ ಒಡೆಯರಾದ ಶ್ರೀ ಕೂಡಲಿ ಚಿದಂಬರಂ ಅವರಿಗೂ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ ನನ್ನಲ್ಲಿ ಅರ್ಥಶಾಸ್ತ್ರದ ಬಗ್ಗೆ ಅಭಿರುಚಿಯನ್ನು ಹುಟ್ಟಿಸಿದ ನನ್ನ ಗುರುಗಳಾದ ಶ್ರೀ ಜಗತ್ಪತಿ, ಎಂ ಎ., ಐ. ಎ. ಎಸ್ ಅವರನ್ನು ಇಲ್ಲಿ ಸ್ಮರಿಸಿ ಮತ್ತೊಮ್ಮೆ ಅವರ ಆಶೀರ್ವಾದವನ್ನೂ, ಕನ್ನಡಿಗರ ಆದರ, ಅಭಿಮಾನಗಳನ್ನೂ ಕೋರುತ್ತೇನೆ

ಇತಿ

ಕುಂಜಬೆಟ್ಟು, ಉಡುಪಿ, ೧೯೫೭. **ಕು. ಶಿ. ಹರಿದಾಸ ಭಟ್ಟ.**

# ಪರಿವಿಡಿ

# ಸಂದರ್ಭ ಸಾಮಗ್ರಿ


1 Economics ... Benham

2. Substance of Economics Silverman

3. Economic Analysis .. Kenneth Boulding

4 ಹಣಪ್ರಪಂಚ ... ವಿ. ಸೀತಾರಾಮಯ್ಯ

5. General Theory . . Keynes

6. Social Framework .. Hicks

7. Supply and Demand . Henderson

8. Control of Industry . . Robertson

9. Wages .. Maurice Dobb.

10. Risk, Uncertainty, Profit Frank H. Knight

11. Eastern Economist · Annual Numbers

12. World Economic Development ... Eugene Staley

ಶ್ರೀಃ

# ಏನಿದು ಅರ್ಥಶಾಸ್ತ್ರ?

ನಮ್ಮ ಊರಿನಲ್ಲಿ ಪುಣ್ಯಾತ್ಮನೊಬ್ಬನು ವಿದ್ಯಾಲಯ ಕಟ್ಟಿಸುತ್ತಾ ಇದ್ದಾನೆ ಅದು ಸರಕಾರವು ಕೊಟ್ಟ ಬಯಲುಭೂಮಿಯ ಮೇಲೆ ನಿಂತಿದೆ ಅಲ್ಲಿ ಹಲವು ಜನ ಕೂಲಿಕಾರರು ದಿನಾಲೂ ನಿರ್ಮಾಣಕಾರ್ಯದಲ್ಲಿ ನಿರತರಾಗಿದ್ದಾರೆ. ಅವರಿಗೆ ಕೂಲಿ ತೆರಲು ಪುಣ್ಯಾತ್ಮನ ಹತ್ತಿರ ಬಂಡವಾಳವಿದೆ ಬಂಡವಾಳವು ಕಡಿಮೆಯಾದರೆ ಆತ ಬ್ಯಾಂಕಿಗೆ ಹೋಗಿ ನಂಬಿಕೆಸಾಲವನ್ನು ಪಡೆಯಬಹುದು ಬಂಡವಾಳವನ್ನು ಹೂಡಿ ಕೆಲಸವನ್ನು ಸುವ್ಯವಸ್ಥಿತವಾಗಿ ನಡೆಯಿಸಲು ಪುಣ್ಯಾತ್ಮನು ಸ್ವತಃ ನಿಂತರೆ ಆಗ ಅವನು ತನ್ನ ಸಂಚಾಲಕತನವನ್ನೂ ಉಪಯೋಗಿಸಿದಂತಾಯಿತು ಹೀಗೆ ಒಂದು ವಿದ್ಯಾಲಯವು ಉತ್ಪನ್ನವಾಗಬೇಕಾದರೆ ಭೂಮಿ, ಕೂಲಿ, ಬಂಡವಾಳ, ಸಂಚಾಲಕತನ ಎಂಬ ನಾಲ್ಕು ಅವಯವಗಳು ಮೇಳವಿಸಬೇಕು

ವಿದ್ಯಾಲಯವು ನಿರ್ಮಾಣವಾಗುವ ಸುದ್ದಿ ಕೇಳಿದೊಡನೆ ಮುರಕಲ್ಲಿಗೆ ಬೇಡಿಕೆಯು ಏರುವುದೆಂದು ಬಗೆದು, ಕಲ್ಲಣೆಯ ಗುರಿಕಾರರು ಮುರಕಲ್ಲಿನ ಧಾರಣೆಯನ್ನು ಹೆಚ್ಚಿಸಿದರು. ಬೇಡಿಕೆ ಅಧಿಕವಾದರೆ ಪೂರೈಕೆಯ ಧಾರಣೆಯು ಏರುವುದು ಸಹಜವೇ. ಆದರೆ ಸಂಚಾಲಕನು ಕೂಡಲೆ ಆ ಹೆಚ್ಚು ದರದ ಕಲ್ಲನ್ನು ಬಿಟ್ಟು ಕಡಮೆಧಾರಣೆಯ ಶಿಲೆಕಲ್ಲನ್ನು ತರಿಸಿ ಅದರಿಂದಲೇ ಗೋಡೆ ಕಟ್ಟಿಸತೊಡಗಿದನು ಮುರಕಲ್ಲಿನ ತದ್ಗುಣವು ಶಿಲೆಯಲ್ಲಿ ಇಲ್ಲದೆ ಹೋಗಬಹುದು ಆದರೂ ಇದ್ದ ಹಣದ ಪರಮಾವಧಿ ಪ್ರಯೋಜನವನ್ನು ಪಡೆಯಬೇಕೆಂಬುದು ಸಂಚಾಲಕನ ಆಸೆಯಾದುದರಿಂದ ಪ್ರತಿನಿಧಾನವು ಅಪರಿಪೂರ್ಣವಾದರೂ ಚಿಂತಿಲ್ಲವೆಂದು ಆತ ಬಗೆದರೆ ತಪ್ಪಾಗಲಾರದು ಉತ್ಪಾದನೆಯ ಅವಯವಗಳ ಸಂಯೋಜನೆಯಲ್ಲಿ ಹೆಚ್ಚು ಕಡಮೆ ಮಾಡಿ ಪರಮಾವಧಿ ಫಲಿತಾಂಶವು ಬರುವಂತೆ ಮಾಡುವುದರಲ್ಲಿಯೇ ಸಂಚಾಲಕನ ಬುದ್ಧಿವಂತಿಕೆ ಇರುವುದು. ಹೊರುವ, ಕೊಯ್ಯುವ,

ಕಟ್ಟುವ, ಕುಟ್ಟುವ—ಯಾವ ಶಾರೀರಿಕ ಕ್ರಮದಲ್ಲಿ ಅವನು ಭಾಗವಹಿಸ ದಿದ್ದರೂ ಕೂಡ ಈ ಬುದ್ಧಿವಂತಿಕೆಗಾಗಿ ಅವನಿಗೆ ಪ್ರತಿಫಲವು ಸಲಬೇಕು.

ಕೆಲಸಮಾಡುವ ಕೂಲಿಕಾರರಲ್ಲಿ ಅನೇಕರು ನಮ್ಮೂರಿನವರಾದರೂ ಕೆಲವುಂದಿ ಕೊಯಮುತ್ತೂರಿನಿಂದ ಇಲ್ಲಿಗೆ ಬಂದವರಿದ್ದಾರೆ. ಪರಿಶ್ರಮ, ಕೂಲಿ, ಎಂಬುದು ಉತ್ಪಾದನೆಯ ಒಂದು ಅವಯವ ಅದು ಈಗ ಕೊಯಮುತ್ತೂರಿನಿಂದ ಇಲ್ಲಿಗೆ ಚಲಿಸಿತಲ್ಲವೆ? ಇಂಥ ಸ್ಥಳಾಂತರವು ಪ್ರಪಂಚದಲ್ಲಿ ಅತ್ಯಾವಶ್ಯಕವಾದ ಒಂದು ಘಟನೆಯಾಗಿದೆ. ಇದಕ್ಕೆ ಅವ ಯವಗಳ ಸಂಚಲನೆ ಎನ್ನುತ್ತಾರೆ. ಕೂಲಿಕಾರರಿಗೆ ಕೂಲಿಯನ್ನು ತೆರು ವುದು ಹಣದ ರೂಪದಲ್ಲಿ. ಅವರು ಹಣವನ್ನೇಕೆ ಸ್ವೀಕರಿಸುತ್ತಾರೆ ಗೊತ್ತೆ? ಹಣವಿದ್ದರೆ ಯಾವ ಸರಕನ್ನೂ ಕೊಂಡುಕೊಳ್ಳಬಹುದು. ಒಂದು ರುಪಾ ಯಿಗೆ ಎರಡುಸೇರು ಅಕ್ಕಿ ಬರುತ್ತದೆ. ಹಣದ ಉಬ್ಬರ ಇಲ್ಲದಾಗ ಆರು ಸೇರು ಬಂದೀತು. ಒಂದು ಸೇರು ಅಕ್ಕಿ, ಒಂದು ತುಂಡು ಬಟ್ಟೆ, ಒಂದು ತುಣುಕು ಸಾಬೂನು ಮುಂತಾದುವನ್ನು ರುಪಾಯಿ ಕೊಟ್ಟು ಪಡೆಯು ಲಾಗುವುದು. ಕೂಲಿಯುವನ ಉದ್ದೇಶವು ಬರಿಯ ರುಪಾಯಿ ಅಲ್ಲ ವೆಂಬುದೂ, ತಿನ್ನುವ, ಉಡುವ, ತೊಡುವ ಇಂಥ ಸರಕುಗಳನ್ನು ಕೊಳ್ಳುವ ಸಾಮರ್ಥ್ಯವು ರುಪಾಯಿಗಿರುವುದರಿಂದಲೇ ಅವನು ಅದನ್ನು ಸ್ವೀಕರಿಸುವ ನೆಂಬುದೂ ಇದರಿಂದ ಖಚಿತವಾಗುವುದು. ಸಕಲ ಉತ್ಪಾದನೆಯ ಚರಮ ಲಕ್ಷ್ಯವೂ ಅನುಭೋಗವಲ್ಲವೆ?

ಸಂಚಾಲಕನ ದೃಷ್ಟಿಯಲ್ಲಿ ಕಚ್ಚಾ ಮಾಲಿಗೂ, ಕೂಲಿಗೂ ಕೊಡ ಬೇಕಾದ ಹಣವು ವೆಚ್ಚ ಎನಿಸುವುದು; ಹಣವನ್ನು ಪಡೆಯುವವರ ದೃಷ್ಟಿ ಯಲ್ಲಿ ಅದೇ ವರಮಾನವಾಗುವುದು. ಈ ವರಮಾನದ ಸ್ವಲ್ಪ ಅಂಶವನ್ನು ಅವರು ಪರೋಕ್ಷವಾಗಿ ಅಕ್ಕಿ ಬೆಳೆಯುವ ಕೃಷಿಕನಿಗೋ, ಸಾಬೂನು ಕಾರ್ಖಾನೆಯ ಕೂಲಿಗೋ ತೆರುತ್ತಾರೆ. ಕೃಷಿಕನಿಗೂ ಉಪ್ಪಾರನಿಗೂ ನಡುವೆ ವ್ಯಾಪಾರಿಯು ಬಂದು ಮಧ್ಯಸ್ಥಿಕೆ ವಹಿಸುವನು. ಇಂಥ ಮಧ್ಯ ಸ್ಥಿಕೆಯಿಂದ ಅವನಿಗೆ ಲಾಭ ಬರುವುದು. ತನ್ನ ಪರಿಶ್ರಮಕ್ಕೆ ಯೋಗ್ಯ ವಾದ, ನ್ಯಾಯೋಚಿತವಾದ ಲಾಭದಿಂದ ವ್ಯಾಪಾರಿಯು ತೃಪ್ತಿಪಡಬಹುದು; ಅಥವಾ ಆಹಾರ ದವಸದ ಬೆಲೆಯು ಏರಿಳಿತದ ಸಟ್ಟದಲ್ಲಿ ಲಾಭ ಪಡೆಯಲು

ಎಳೆಸಬಹುದು. ಲಾಭಕ್ಕಾಗಿಯೇ ಅವನು ಪೇಟೆಯಲ್ಲಿರುವನು. ಕೃಷಿಕನಿಗೆ ಸ್ವಂತ ಭೂಮಿ ಇಲ್ಲದಿದ್ದರೆ ಅವನು ಅಕ್ಕಿ ಬೆಳೆಯುವ ಭೂಮಿಯ ಬಗ್ಗೆ ಧನಿಗೆ ಗೇಣಿ ಕೊಡಬೇಕು. ಧನಿ ಉದಾರಿಯಾಗಿದ್ದರೆ ಒಕ್ಕಲಿಗೆ ಕಡಿಮೆ ದರದಲ್ಲಿ ಸಾಲ ಒದಗಿಸಬಹುದು. ಧನಿಯು ಭೂಮಿಯನ್ನು ಕೊಡುವುದು ಗೇಣಿಗಾಗಿ, ಸಾಲ ಕೊಡುವುದು ಬಡ್ಡಿಗಾಗಿ ವಿದ್ಯಾಲಯ ನಿರ್ಮಿಸುವ ಕೂಲಿಕಾರನ ಪರಿಶ್ರಮಕ್ಕೆ ಹಣ ತೆತ್ತಂತೆಯೇ ಭೂಮಿ ಮತ್ತು ಸಾಲದ ಉಪಯೋಗ ಪಡೆಯಬೇಕಾದರೂ ಹಣದ ಸಲುವಳಿಯಾಗಬೇಕು.

ಸಾಮಾನ್ಯವಾಗಿ ನಮ್ಮ ದೇಶದಲ್ಲಿ ಖಾದಿ ತೊಡುವ 'ಛಲದಂಕ ಮಲ್ಲ'ರನ್ನು ಬಿಟ್ಟರೆ ಉಳಿದ ಬಹ್ವಂಶ ಜನ ಮುಂಬಯಿಯ ಕಾರ್ಖಾನೆಗಳಲ್ಲಿ ತಯಾರಾದ ಬಟ್ಟೆಯನ್ನೇ ಬಳಸುತ್ತಾರೆ ಹಿಂದಿನ ಕಾಲದಲ್ಲಿ ಪ್ರತಿಯೊಬ್ಬನೂ ತನಗೆ ಬೇಕಾದುದನ್ನು ತನ್ನ ಹಳ್ಳಿಯಲ್ಲೇ ಉತ್ಪಾದಿಸಿಕೊಳ್ಳುತ್ತಿದ್ದನಂತೆ. ಆದರೆ ಆಗಲೂ ಕೂಡ ಒಂದು ಗ್ರಾಮದಲ್ಲಿ ಬೇಸಾಯಗಾರ, ನೇಕಾರ, ಉಪ್ಪಾರ ಮುಂತಾದ ಶ್ರಮವಿಭಾಗ ಉಂಟಾಗಿರಲೇಬೇಕು ಈ ನವಯುಗದಲ್ಲಿ ಶ್ರಮವಿಭಾಗವು ಬಹಳ ಮುಂದುವರಿದಿದೆ, ಜಟಿಲವೂ ಆಗಿದೆ. ಬಟ್ಟೆಯ ತಯಾರಿಯೇ ನಡೆಯದ ಹಳ್ಳಿಗಳೂ ಈಗ ಇವೆ ಅಗ್ಗದ ಬೆಲೆಯ ಬಟ್ಟೆ ಕಾರ್ಖಾನೆಗಳಲ್ಲಿ ತಯಾರಾಗುವುದು ಏಕೆ ಎಂಬುದನ್ನು ಪರಿಶೀಲಿಸೋಣ. ಕಾರ್ಖಾನೆಯಲ್ಲಿ ಯಂತ್ರಗಳಿವೆ. ಯಂತ್ರಗಳೆಂದರೆ ಉತ್ಪಾದನೆಯನ್ನು ಕಡಮೆ ವೆಚ್ಚದಲ್ಲಿ ಶೀಘ್ರವಾಗಿ ನಡೆಯಿಸುವ ಸಲಕರಣೆಗಳು. ಆದರೆ ಇಂಥಾ ಯಂತ್ರಗಳು ಬರಬೇಕಾದುದು ಪರದೇಶಗಳಿಂದ. ನಮ್ಮ ದೇಶದ ನೂರಾರು ಗಿರಣಿಗಳಿಗೆ ಸಾವಿರಾರು ಯಂತ್ರಗಳು ಇಂಗ್ಲೆಂಡ್ ಮುಂತಾದ ಔದ್ಯಮಿಕ ರಾಷ್ಟ್ರಗಳಿಂದ ಬರುವುವು. ಗಿರಣಿಗಳ ಮಾಲಕರು ಯಂತ್ರಗಳ ಮೊಬಲಗನ್ನು ರುಪಾಯಿಗಳಲ್ಲಿ ಸಲ್ಲಿಸಿದರೆ ಅಮೇರಿಕದವನಿಗೆ ಯಾವ ಪ್ರಯೋಜನವೂ ಇರಲಾರದು. ಆದುದರಿಂದ ಯಂತ್ರದ ವೆಚ್ಚವನ್ನು ಹೇಗೆ ತೀರಿಸುವುದು ಎಂಬ ಪ್ರಶ್ನೆ ಆವಿರ್ಭವಿಸುವುದು. ನಮ್ಮ ಹಣಕ್ಕೂ, ವಿಲಾಯತಿಯ ಹಾಗೂ ಪಶ್ಚಿಮದ ಡಾಲರು, ಸ್ಟರ್ಲಿಂಗ್ ಹಣಗಳಿಗೂ ಇಂತಿಷ್ಟೇ ಮಾರುವೆ ದರ ಎಂದು ಸರಕಾರವು ನಿರ್ಣಯಿಸುತ್ತದೆ. ಈ ಮಾರುವೆ ದರವು ಇಂದು ಇದ್ದಹಾಗೆಯೇ

ನಾಳೆಯೂ ಇರಬೇಕೆಂದಿಲ್ಲ. ಸರಕಾರವು ಒಂದೇ ಒಂದು ಶಾಸನದಿಂದ ನಾಣ್ಯದ ಬೆಲೆಯನ್ನು ಏರಿಸಬಹುದು, ಇಳಿಸಬಹುದು ಏನೇ ಇರಲಿ. ಅಂತರರಾಷ್ಟ್ರೀಯ ವ್ಯಾಪಾರ ನಡೆಯುವುದಕ್ಕೆ ನಾಣ್ಯದ ದರವು ಸಹಾಯ ವಾಗುವುದೆಂಬುದನ್ನು ಕಂಡೆವು ಕಾರ್ಖಾನೆಯ ಯಂತ್ರವನ್ನು ಇಂಗ್ಲೆಂಡಿ ನಿಂದ ಮುಂಬಾಯಿಗೆ ಸಾಗಿಸಲು ಸ್ಟೀಮರ್ ಬೇಕು; ಅಲ್ಲಿಂದ ನಮ್ಮೂರಿಗೆ ಬಟ್ಟೆ ಮುಟ್ಟಲು ರೈಲುಬಂಡಿ ಬೇಕು ಹೀಗೆ ಅಂತರರಾಷ್ಟ್ರೀಯ ವ್ಯಾಪಾರದಲ್ಲಿಯೂ, ಆಂತರಿಕ ವ್ಯಾಪಾರದಲ್ಲಿಯೂ ಸಾಗುವಾಡಿನ ವೆಚ್ಚ ಒಂದು ಮುಖ್ಯ ಅಂಶವಾಗಿದೆ. ನಮ್ಮ ವಿದೇಶೀಯ ವ್ಯಾಪಾರವನ್ನೇ ತೆಗೆ ದುಕೊಂಡರೆ ವಿದೇಶದಿಂದ ತರುವ ವಸ್ತು ಒಡವೆಗಳಿಗೂ, ಸಾಗುವಾಡಿನ ಏರ್ಪಾಟಿಗೂ, ಅಲ್ಲಿಂದ ನಾವು ಸಾಲ ತೆಗೆದಿದ್ದ ಪಕ್ಷದಲ್ಲಿ ಸಾಲದ ಮೊಬಲ ಗಿನ ಬಡ್ಡಿಗೂ, ನಾವು ಹಣ ತೆರಬೇಕಾಗುತ್ತದೆ ವಿದೇಶೀಯರು ನಮ್ಮ ಲ್ಲಿಂದ ಒಯ್ಯುವ ಸಾಮಾನಿಗೆ ಇದೇ ರೀತಿಯಾಗಿ ಹಣ ಸಲಾಯಿಸಬೇಕು ನಮ್ಮ ಆಮದು ಮತ್ತು ರಫ್ತಿನ ಮೊಬಲಗನ್ನು ಸಮತೂಕವಾಗಿರಿಸುವುದೋ, ಅಥವಾ ವಾಣಿಜ್ಯದ ಇಲ್ಲವೇ ಪಾವತಿಯ ಸಿಲ್ಕು ನಮಗೆ ಸುಲಲಿತವಾಗಿ ದೊರೆಯುವಂತೆ ಮಾಡುವುದೋ, ಜಾಣತನದ ಕೆಲಸ

ಸಾರ್ವಜನಿಕ ಕ್ಷೇತ್ರದ ಇಂತಹ ಕಾರ್ಯಗಳು ನಡೆಯಬೇಕಾದರೆ ದೇಶವನ್ನು ರಕ್ಷಿಸಿ, ಪಾಲಿಸಲು ಸರಕಾರವು ಇದ್ದೇ ತೀರಬೇಕು ಸರಕಾರ ವು ಈ ಕೆಲಸವನ್ನು ಪುಕ್ಕಟೆಯಾಗಿ ಮಾಡಲು ಸಿದ್ಧವಾಗಿಲ್ಲ ನಮ್ಮಿಂದ ತೀರ್ವೆಯ ರೂಪದಲ್ಲಿಯೂ, ಕರ, ತೆರಿಗೆಗಳ ರೂಪದಲ್ಲಿಯೂ ದುಡ್ಡು ಕಿತ್ತು ಕೊಂಡೇ ಅದು ಸೈನ್ಯ, ವಿಮಾನಪಡೆ, ಪೋಲೀಸರು, ಕೋರ್ಟು–ಕಛೇರಿ ಮುಂತಾದುವನ್ನು ನಡೆಯಿಸುವುದು ಕಷ್ಟ ಬಂದಾಗ ಸರಕಾರವು ಜನ ತೆಯ ಹತ್ತಿರ ಸಾಲ ಕೇಳುವುದೂ ಉಂಟು ಸರಕಾರದ ಸಾಲವು ಬಹಳ ಭದ್ರವಾದ ಸಾಲ. ಏತಕ್ಕೆಂದರೆ ಸರಕಾರಕ್ಕೆ ಅಳಿಗಾಲವಿಲ್ಲ ಈ ನಮ್ಮ ಸರಕಾರವು, ಜನರಿಗೆ ಹಣವನ್ನು ಉಳಿಸಿರಿ, ಸೇವಿಂಗ್ಸ್ ಸರ್ಟಿಫಿಕೇಟು ಗಳನ್ನು ಕೊಳ್ಳಿರಿ ಎಂದು ಹೇಳುತ್ತದಲ್ಲವೆ? ಅಂದರೆ, ಜನತೆಯ ಉಳಿ ತಾಯದಿಂದ ಸರಕಾರವು ತಾನು ಕೈಕೊಂಡ ಹಲವಾರು ಯೋಜನೆಗಳಿಗೆ ಬಂಡವಾಳ ಒದಗಿಸುವ ಹಂಚಿಕೆ ಹೂಡಿದೆ ಎಂದರ್ಥ. ನಮ್ಮ ಉಳಿತಾ

ಯುವು ಸಾಕಾಗದೆ ಹೋದರೆ ಪರದೇಶಗಳಿಂದ ಯಂತ್ರ ಸಾಮಗ್ರಿ ಮಾತ್ರವೇ ಅಲ್ಲ, ಡಾಲರು, ಸ್ಟರ್ಲಿಂಗುಗಳನ್ನು ಅವರು ಹೇಳಿದ ದರದಲ್ಲಿ ಬಡ್ಡಿ ತೆತ್ತು ತರಬೇಕಾದ ಸಂದರ್ಭ ಒದಗಿಬರುತ್ತದೆ ಹೇಗಿದ್ದರೂ ನಮ್ಮ ತಲಾ ಒಂದರ ರಾಷ್ಟ್ರೀಯ ವರಮಾನವು ಅತಿ ಕಡಿಮೆಯಾಗಿರುವು ದರಿಂದ ಪರದೇಶೀಯ ಬಂಡವಾಳವಿಲ್ಲದ ನಮ್ಮ ಯೋಜನೆಗಳು ಕಾರ್ಯ ರೂಪಕ್ಕೆ ಬಾರವು. ಯುದ್ಧಾನಂತರದ ಈ ಕಾಲದಲ್ಲಿ ಪಾಶ್ಚಾತ್ಯ ದೇಶ ಗಳಿಂದ, ಅವುಗಳಲ್ಲೂ ಮುಖ್ಯವಾಗಿ ಅಮೇರಿಕದಿಂದ, ಬಂಡವಾಳದ ಹರಿದಾಟ ಬಹಳವಾಗಿದೆ. ಈ ಸಂಚಲನೆ ಕೂಡ ಧಾರಣೆಯ ಮೇಲ ಅವಲಂಬಿಸಿಕೊಂಡಿದೆ ಎಲ್ಲಿ ಬಡ್ಡಿ (ಬಂಡವಾಳಿನ ಧಾರಣೆ) ಅಧಿಕ ದೊರೆಯುವುದೋ, ಅಲ್ಲಿಗೆ ಬಂಡವಾಳವು ಹರಿಯುವುದು. ಬೇಡಿಕ ಹೆಚ್ಚಿ ದ್ದಲ್ಲಿ ಧಾರಣೆಯೂ ಹೆಚ್ಚು. ಹಿಂದುಳಿದ ಏಶಿಯದ ದೇಶಗಳಿಗೆ ವಿದೇಶೀ ಯ ಬಂಡವಾಳ ಹಿಮಾಲಯದಷ್ಟಿದ್ದರೂ ಸಾಲದು. ಆದುದರಿಂದ ಇನ್ನು ಕೆಲವು ದಶಕಗಳ ಮಟ್ಟಿಗೆ ಏಶಿಯದ ನಾಡವರು ವಿದೇಶೀಯ ಬಂಡವಾಳಕ್ಕೆ ಅಲ್ಲಿ ಸಿಗುವುದಕ್ಕಿಂತ ಅಧಿಕ ಬಡ್ಡಿ ತೆರಲು ಸಿದ್ಧರಾಗಿದ್ದಾರೆ.

ವಿದೇಶೀಯರು ತಮ್ಮ ಬಂಡವಾಳವನ್ನು ನೇರವಾಗಿ ನಮ್ಮ ಕಿಸೆ ಯೊಳಗೆ ತುರುಕುವುದಿಲ್ಲ. ಎಲ್ಲ ಕಾರ್ಯಗಳೂ, ನಮ್ಮ-ಅವರ ಬ್ಯಾಂಕು ಗಳ ಮುಖಾಂತರ ನಡೆಯಬೇಕು ನಮ್ಮ ಲೆಕ್ಕದ ಹಣವನ್ನು ವಿದೇಶೀ ಯರ ಲೆಕ್ಕಕ್ಕೆ ಜಮೆ ಮಾಡುವುದಕ್ಕೂ, ಅವರು ಕೊಟ್ಟುದನ್ನು ನಮ್ಮ ಲೆಕ್ಕಕ್ಕೆ ಸೇರಿಸುವುದಕ್ಕೂ, ಹುಂಡಿ ವಟಾಯಿಸುವುದಕ್ಕೂ, ಬ್ಯಾಂಕು ನಮ್ಮಿಂದ 'ಛಾರ್ಜು' ಬೇಡುತ್ತದೆ ನಾವು ಆಂತರಿಕ ವ್ಯಾಪಾರದಲ್ಲಿ ನಿರತ ರಾದ ವೇಳೆ 'ಓವರ್ ಡ್ರಾಫ್ಟ್' ಸೌಕರ್ಯಗಳನ್ನು ಒದಗಿಸುವುದೂ, ನಮ್ಮ ಡಿಪಾಸಿಟ್ಟಿಗೆ ಬಡ್ಡಿಕೊಟ್ಟು ಉಪಕರಿಸುವುದೂ, ಜನರ ಡಿಪಾಸಿಟ್ಟುಗಳಿಂದ ಉಂಟಾದ ಒಟ್ಟು ಬಂಡವಾಳವನ್ನು ಪ್ರಯೋಜಕ ಕಾರ್ಯಕ್ರಮಗಳಲ್ಲಿ ಹೂಡುವುದೂ, ಬ್ಯಾಂಕಿನ ಕರ್ತವ್ಯ

ಈ ಎಲ್ಲ ವಹಿವಾಟೂ, ಹಣದ ಮೂಲಕವೇ ನಡೆಯುತ್ತದೆ. ಹಣದ ಸೃಷ್ಟಿ, ಸ್ಥಿತಿ, ಲಯ ಎಲ್ಲವೂ ಸರ್ವಶಕ್ತವಾದ ರಾಷ್ಟ್ರವನ್ನು ಹೊಂದಿ

ಕೊಂಡಿದೆ ನಾಣ್ಯ, ನೋಟುಗಳನ್ನು ಹೊರಡಿಸುವುದೂ, ಅವುಗಳ ಬೆಲೆ
ಯನ್ನು ನಿರ್ಣಯಿಸುವುದೂ, ಅವನ್ನು ಕಡ್ಡಾಯವಾಗಿ ಜನರು ಬಳಸಿಕೊಳ್ಳ
ಬೇಕೆಂದು ಒತ್ತಾಯಪಡಿಸುವ ಶಾಸನಗಳನ್ನು ರಚಿಸುವುದೂ, ರಾಷ್ಟ್ರದ,
ಅಂದರೆ ಸರಕಾರದ ಕರ್ತವ್ಯವಾಗಿದೆ

ನಾವು ಉಟ್ಟು ಉಣಲು ಬೇಕಾದ ಸಾಮಗ್ರಿಗಳನ್ನು ಕೊಳ್ಳುವುದೂ;
ವಣಿಜನು ಅವನ್ನು ನಮಗೆ ಮಾರುವುದೂ; ಕೂಲಿಯವನು ದುಡಿಯು
ವುದೂ; ಚಾಲಕನು ಆವನ ಶ್ರಮಕ್ಕೆ ತಕ್ಕ ದುಡ್ಡು ತೆರುವುದೂ, ಮುಂಬ
ಯಿಯ ಗಿರಣಿ ಮ್ಹಾಲಕನು ವಿದೇಶೀಯ ಯಂತ್ರ ಸಾಮಗ್ರಿಗಳನ್ನು ತರಿಸು
ವುದೂ, ಬಟ್ಟೆ ಉತ್ಪಾದಿಸುವುದೂ; ಬ್ಯಾಂಕುಗಳು ನಮ್ಮ ಇಡುಗಂಟು
ಗಳನ್ನು ಇರಿಸಿಕೊಳ್ಳುವುದೂ, ಸಂಚಿತ ಬಂಡವಾಳವನ್ನು ವ್ಯವಹಾರದಲ್ಲಿ
ಹೂಡುವುದೂ, ನಮಗೆ ಓವರ್ ಡ್ರಾಫ್ಟ್ ಸೌಕರ್ಯಗಳನ್ನು ವಿಶ್ವಾಸ
ದಿಂದ ಒದಗಿಸುವುದೂ; ಸರಕಾರವು ನಮ್ಮಿಂದ ಕರ, ತೆರಿಗೆ ವಸೂಲುಮಾಡಿ
ಸೈನಿಕರಿಗೆ ತಿನಿಸುವುದೂ, ಅಂಚೆ, ನ್ಯಾಯಾಲಯಗಳನ್ನೊದಗಿಸುವುದೂ;
ನಾಣ್ಯ ಹೊರಡಿಸುವುದೂ. ಆದರ ಅಂತರ ರಾಷ್ಟ್ರೀಯ ವಿನಿಮಯ ಧಾರಣೆ
ಯನ್ನು ನಿರ್ಧರಿಸುವುದೂ— ಇವೆಲ್ಲವೂ ಮನುಷ್ಯನ ನಿತ್ಯ ಜೀವನದ
ಹವ್ಯಾಸಗಳು. ಇಂಥ ಹವ್ಯಾಸಗಳನ್ನು ವಿಶ್ಲೇಷಿಸುವ, ವಿವರಿಸುವ
ಶಾಸ್ತ್ರವೇ ಅರ್ಥಶಾಸ್ತ್ರ

# ಅರ್ಥಶಾಸ್ತ್ರದ ರೂಪರೇಷೆ

## ಅರ್ಥಶಾಸ್ತ್ರ ಎಂದರೇನು?

ಅರ್ಥಶಾಸ್ತ್ರ ಎಂದರೆ ಸಂಪತ್ತಿನ ಶಾಸ್ತ್ರ! 'ಅರ್ಥಶಾಸ್ತ್ರದ ತಾತ' ಎಂದು ಹೆಸರಾಂತ ಆಂಗ್ಲದೇಶದ ಆ್ಯಡಂ ಸ್ಮಿಥ್ ಮಹಾಶಯನು ತಾನು ಬರೆದ ಮೊಟ್ಟಮೊದಲನೆಯ ಅರ್ಥಶಾಸ್ತ್ರದ ಹೊತ್ತಗೆಗೆ 'ರಾಷ್ಟ್ರಗಳ ಸಂಪತ್ತು' ಎಂದೇ ಹೆಸರಿಟ್ಟಿದ್ದನು. ಅನೇಕ ಹಳೆಯ ಅರ್ಥಶಾಸ್ತ್ರಿಗಳು ಸ್ಮಿಥ್ ಮಾರ್ಗವನ್ನೇ ಅನುಸರಿಸಿ, ಅರ್ಥಶಾಸ್ತ್ರವನ್ನು ಸಂಪತ್ತಿನ ಕುರಿತಾದ ವಿಜ್ಞಾನ ಎಂದು ಕರೆದರು ದೈನಂದಿನ ಜೀವನದಲ್ಲಿ ನಿರತನಾದ ಮನುಷ್ಯನ ಬಗ್ಗೆ ವಿಚಾರ ಮಾಡುವುದೇ ಅರ್ಥಶಾಸ್ತ್ರ ಎಂದು ಮಾರ್ಶಲ್ ಹೇಳಿದ್ದಾನೆ ಇದು ಬಹಳ ವಿಶಾಲವಾದ ಪದಲಕ್ಷಣ. ಬೇರೆ ಬೇರೆ ಲಕ್ಷಣಗಳುಳ್ಳ ವಿರಳವಾದ ಸಾಧನಗಳಿಗೂ, ಉದ್ದೇಶಗಳಿಗೂ ಸಂಬಂಧವನ್ನು ಕಲ್ಪಿಸುವಲ್ಲಿ ಮನುಷ್ಯನು ಹೇಗೆ ವರ್ತನೆ ಮಾಡುತ್ತಾನೆ ಎಂಬುದನ್ನು ಪರೀಕ್ಷಿಸುವ ಶಾಸ್ತ್ರವೇ ಅರ್ಥಶಾಸ್ತ್ರ ಎಂದು ರಾಬಿನ್ಸ್ ಹೇಳಿದ ಮಾತನ್ನು ಒಪ್ಪೋಣವೇ? ಎಂದರೆ ಅರ್ಥವ್ಯಾಪ್ತಿಯು ಬಹಳ ವಿಶಾಲವಾಗುವುದು. ಅರ್ಥಶಾಸ್ತ್ರವು 'ವ್ಯಕ್ತಿಯು ಮಾಡುವ ಮೌಲ್ಯ ಮತ್ತು ಆಯ್ಕೆಗಳ ಪರಿಶೀಲನೆ' ಎಂದು ಹೇಳಿದರೆ ಬರುವ ಅರ್ಥವು ಎಷ್ಟು ವ್ಯಾಪಕವೋ, 'ಹಣದ ಅಳತೆಗೋಲಿಗೆ ಒಳಪಟ್ಟ ಮನುಷ್ಯ ವ್ಯಾಪಾರ ವಿಶೇಷ' ಎಂದರೆ ಅಷ್ಟೇ ಸಂಕುಚಿತವಾದ ಅರ್ಥ ಹೊರಡುವುದು.

## ಆರ್ಥಿಕ ಘಟನೆಗಳು:

ಮನುಷ್ಯ ಜೀವನದ ಕೆಲವು ಘಟನೆಗಳನ್ನು 'ಆರ್ಥಿಕ'ವೆಂದು ಕರೆಯದೆ ಉಪಾಯವಿಲ್ಲ. ಉತ್ಪಾದನೆ, ಅನುಭೋಗ, ವಿನಿಮಯ—ಈ ಮೂರು ಅರ್ಥಶಾಸ್ತ್ರದ ಸೀಮೆಗೆ ಒಳಗಾದುವು ಎಂಬುದನ್ನು ಎಲ್ಲರೂ ಒಪ್ಪಲೇ ಬೇಕು. ಹತ್ತಿಯು ಒಂದು ಕಚ್ಚಾ ಮಾಲು. ಆದರಿಂದ ಬಟ್ಟೆ ತಯಾರಿಸುವುದೂ, ತಯಾರಿಸಿದ ಬಟ್ಟೆಯನ್ನು ಉಟ್ಟು ಜೀರ್ಣಿಸುವುದೂ,

ಬಟ್ಟೆಯನ್ನು ಮಾರಿ ಬರುವ ರೊಕ್ಕದಿಂದ ಹೊಟ್ಟೆಗೆ ಬೇಕಾದ ದವಸಗಳನ್ನು ಕೊಳ್ಳುವುದೂ, ಖಂಡಿತವಾಗಿ ಧರ್ಮ ಶಾಸ್ತ್ರದ ವಿಷಯಗಳಲ್ಲ. ಈ ಘಟನೆಗಳು ನಡೆಯುವ ಮಧ್ಯೆ ಒಬ್ಬನಿಂದ ಇನ್ನೊಬ್ಬನಿಗೆ ಹಣವು ಕೈ ಬದಲಿಸಲಿ, ಇಲ್ಲದಿರಲಿ, ಇದುವೆ ಅರ್ಥಶಾಸ್ತ್ರ. ಅಂತೂ ಮನುಷ್ಯ ವ್ಯಾಪಾರದ ಕುರಿತು ಏನನ್ನೋ ವಿವರಿಸುವುದಕ್ಕೆ ಅರ್ಥಶಾಸ್ತ್ರ ಎನ್ನುತ್ತಾರೆ. ಪ್ರತಿಯೊಂದು ಮನುಷ್ಯ ವ್ಯಾಪಾರದಲ್ಲಿಯೂ ಆಯ್ಕೆಯ ತತ್ವ ಅಡಕವಾಗಿದೆ. ನಾವು ಒಂದು ಕೆಲಸವನ್ನು ಮಾಡುತ್ತಿದ್ದರೆ, ಉಳಿದ ಕೆಲಸಗಳಿಗಿಂತ ಇದಕ್ಕೆ ಅಧಿಕ ಪ್ರಾಶಸ್ತ್ಯವನ್ನು ಕೊಟ್ಟಿದ್ದೇವೆ ಎಂದು ಒಡನೆ ಹೊಳೆಯುವುದಿಲ್ಲವೆ? ಈ ಕ್ಷಣ ನಾನು ಬರೆಯುತ್ತಿದ್ದೇನೆ, ಆಡುತ್ತಿಲ್ಲ ಇಡಿ ದಿನ ನಾನು ಬರೆಯಲಾರೆ, ಶಕ್ತಿ ನಾಲದು ಇಡಿ ದಿನ ಆಡಲಾರೆ, ಏಕೆಂದರೆ ನನ್ನ ಬೇರೆ ಕೆಲಸಗಳಿಗೆ ಅವಕಾಶ ಸಿಗಲಾರದು. ನಮಗೆ ದೊರೆಯುವ ಸಮಯ, ಶಕ್ತಿ, ಹಣ ಮುಂತಾದುವುಗಳಿಗೆ ಒಂದು ಮಿತಿಯಿರುವುದರಿಂದಲೇ ನಾವು ಕೊಳ್ಳುವ ವಸ್ತುಗಳನ್ನೂ, ಮಾಡುವ ವೃತ್ತಿಗಳನ್ನೂ ಆಯ್ದುಕೊಳ್ಳಬೇಕಾಗುವುದು. ಇಂಥ ಆಯ್ಕೆ ಪ್ರಾಪಂಚಿಕ ವ್ಯವಹಾರದ ಬಹು ಮುಖ್ಯ ಭಾಗ. ವ್ಯಕ್ತಿಯಾಗಲಿ, ಸಂಸ್ಥೆಯಾಗಲಿ, ಆಯ್ಕೆಗೆ ಮನ್ನಣೆ ಕೊಡಲೇ ಬೇಕು.

ಆರ್ಥಿಕ ಘಟನೆ ನಡೆಯಬೇಕಾದರೆ ನಾಲ್ಕು ಕಾರಣಗಳಿವೆ.

೧ ಮೂಲ ಸಾಮಾಗ್ರಿಗಳ ವಿರಳತ್ವ.

೨. ಮನುಷ್ಯನಿಗೆ ಅಗಣಿತ ಇಚ್ಛೆಗಳಿರುವುದು

೩ ಒಂದೇ ಒಡವೆಯನ್ನು ವಿಕಲ್ಪವಾಗಿ ಹಲವು ವಿಧವಾಗಿ ಉಪಯೋಗಿಸಬರುವುದು.

೪ ಇಚ್ಛೆಗಳನ್ನು ಅವುಗಳ ಮಹತ್ವಕ್ಕನುಸಾರವಾಗಿ ಅನುಕ್ರಮಿಸಲಾಗುವುದು.

ಇಚ್ಛೆಗಳನ್ನು ಅನುಕ್ರಮವಾಗಿ ಇಡಬಹುದು, ಇಚ್ಛೆಗಳು ಅನೇಕವಾಗಿವೆ. ಮೂಲ ಸಾಮಗ್ರಿಗಳು ವಿರಳವಾಗಿವೆ, ಅವುಗಳಲ್ಲಿ ಒಂದೊಂದಕ್ಕೂ ಹಲವಾರು ಪ್ರಯೋಜನಗಳಿವೆ. ಈ ಎರಡು ಪರಿಸ್ಥಿತಿಯ ಮಧ್ಯೆ ಮನುಷ್ಯ

ಹೇಗೆ ವರ್ತಿಸುವನೆಂಬುದನ್ನು ಪರಿಶೀಲಿಸುವುದು ಅರ್ಥಶಾಸ್ತ್ರದ ಕೆಲಸ.

**ನೀತಿಯ ಸೋಂಕಿಲ್ಲ:**

ಆರ್ಥಿಕ ವಿಜ್ಞಾನ ಅಥವಾ ಅರ್ಥಶಾಸ್ತ್ರವು ಜನರ ಇಚ್ಛೆಗಳನ್ನೂ, ಬೇಡಿಕೆಗಳನ್ನೂ ಇದ್ದಕ್ಕಿದ್ದಹಾಗೆ ಸ್ವೀಕರಿಸಿ, ವಿವರಿಸುವುದು. ಸೆರೆ ಕುಡಿಯುವುದು ಧರ್ಮವೆ? ನ್ಯಾಯ ಸಮ್ಮತವೆ? ನೀತಿಯುಕ್ತವೆ? ಎಂಬ ಧರ್ಮ ಸಂಕಟದ ಗೊಡವೆಗೆ ಅರ್ಥಶಾಸ್ತ್ರಿ ಹೋಗುವುದೇ ಇಲ್ಲ. ಒಬ್ಬನ ರಾಜಕೀಯ ಧೋರಣೆಯೂ, ಆಧ್ಯಾತ್ಮಿಕ ಅನುಭಾವವೂ ಅರ್ಥಶಾಸ್ತ್ರದ ಮಟ್ಟಿಗೆ ಅಪ್ರಸ್ತುತ. ತೈಮೂರನು ಕುಂಟನೆಂಬುದು ರಾಜಕೀಯ ಸತ್ಯ ಹೌದಷ್ಟೆ. ಆದರೆ ಕುಂಟ ತೈಮೂರನು ತನ್ನ ಊನದ ಚಿಕಿತ್ಸೆಗಾಗಿ ದುಡ್ಡು ಕೊಟ್ಟು ಔಷಧಿ ಕೊಂಡರ ಮಾತ್ರ ಅವನೊಂದು 'ಸಾರ್ಥಿಕ' ಕೆಲಸ ಮಾಡಿದಂತಾಗುತ್ತಿತ್ತೇ ಹೊರತು, ಆ ವರಗೆ ತೈಮೂರನು ಕುಂಟನಾದರೂ, ಕುರುಡನಾದರೂ, ನಮಗೆ ಸಂಬಂಧವಿಲ್ಲ. ನಾಲ್ಕು ಕುದುರೆಗಳ ಸಾಕಣೆಗಿಂತ ವೈದ್ಯನ ಶುಶ್ರೂಷ ಪ್ರಶಸ್ತವಾದುದು ಎಂದು ಭಾವಿಸಿ, ವೈದ್ಯನನ್ನು ಆರಿಸಿದುದು ತೈಮೂರನು ನೆರವೇರಿಸಿದ ಆರ್ಥಿಕ ಘಟನೆ. ಹೀಗೆ ಮಾಡುವಾಗ ಅವನು ಎಂತೆಂತಹ ಧ್ಯೇಯಗಳನ್ನಿಟ್ಟುಕೊಂಡರೂ ಅವಕ್ಕೂ, ಅರ್ಥಶಾಸ್ತ್ರಕ್ಕೂ ಸಂಬಂಧವಿಲ್ಲ. ಯಾವುದೇ ಉದ್ದೇಶ ಸಾಧನೆಗೆ ವಿರಳವಾದ ಸಾಧನಗಳನ್ನು ಬಳಸುವ ಸಂದರ್ಭದಲ್ಲಿ ಅರ್ಥಶಾಸ್ತ್ರಿಯು ಕೂಡಲೆ ಪ್ರತ್ಯಕ್ಷನಾಗುವನು.

**ಆಯ್ಕೆಯ ಒರೆಗಲ್ಲು:**

ಸಮಯವನ್ನೂ, ಶಕ್ತಿಯನ್ನೂ ಹೇಗೆ, ಎಲ್ಲಿ ಮತ್ತು ಯಾವ ಪ್ರಮಾಣದಲ್ಲಿ ಉಪಯೋಗಿಸಬೇಕು ಎಂಬ ನಿರ್ಧಾರವನ್ನು ಜನರು ಹಗಲಿರುಳೂ ಮಾಡುತ್ತಿರುತ್ತಾರೆ. ಒಬ್ಬ ತಂದೆ ಸಿನೆಮಾ ನೋಡುವ ನಿರ್ಧಾರ ಮಾಡಿದಾಗ ಮಗುವಿಗೆ ಹೊಸ ಅಂಗಿಯೊಂದನ್ನು ತರುವ ಯೋಚನೆ ಬಿಟ್ಟಿರಬಹುದು. ಮನೆಯಾಕೆ ಒಂದು ತಿಂಗಳು ಕಟ್ಟಿಗೆಯ ಬದಲು ಇದ್ದಲಿ ಉಪಯೋಗಿಸಬಹುದು. ಮಜೂರನು ದುಡಿಯುವುದನ್ನು ಬಿಟ್ಟು ಪೇಟೆ ಅಡ್ಡಾಡಬಹುದು. ಒಂದನ್ನು ಬಿಟ್ಟು ಇನ್ನೊಂದನ್ನು ಅಪೇಕ್ಷೆಯಿಂದ

ಮಾಡುವುದು ಆರ್ಥಿಕವಾದ ಆಯ್ಕೆ. ರೈತನು ಅಕ್ಕಿಯನ್ನು ಬೆಳೆಸುವಲ್ಲಿ ಕಬ್ಬನ್ನು ಬೆಳೆಸಿದರೆ, ಕಬ್ಬು ಬೆಳೆಯುವ ವೆಚ್ಚವು ಅವನು ಈಗ ಬೆಳೆಯಿಸದ ಅಕ್ಕಿಯ ಬೆಲೆಯಷ್ಟಾದರೂ ಕನಿಷ್ಟಾವಧಿ ಇರಬೇಕೆಂದು ಕಟ್ಟಿಕೊಳ್ಳ ಬಹುದು. ಗಳಿಸಿದ ಸಂಬಳವನ್ನು ಮೂರೇ ದಿನಗಳಲ್ಲಿ ಅಳಿಸಬಹುದು, ವರ್ಷಗಟ್ಟಲೆ ಉಳಿಸಬಹುದು, ಗಾಡಿ ಹೊಡೆಯುವುದನ್ನು ಮರೆತು ಮೋ ಟಾರು ಬಿಡಬಹುದು. ಈ ಎಲ್ಲಾ ನಿದರ್ಶನಗಳಲ್ಲಿಯೂ ಸ್ಥಿರವಾದ ಒಂದು ಮೊಬಲಗನ್ನು—ಸಮಯ, ಸಂಬಳ ಇತ್ಯಾದಿ ವಿತರಣೆ ಮಾಡಬೇಕಾದ ಪ್ರಮೇಯವು ಕಂಡು ಬರುತ್ತದೆ. ನಮ್ಮ ನಮ್ಮ ಅಭಿರುಚಿಗನುಗುಣವಾಗಿ ನಾವು ಒಂದು ಸ್ಥಿರವಾದ ಮೊಬಲಗನ್ನು ಆಯ್ಕೆಯಿಂದ ವಿನಿಯೋಗಿಸು ತ್ತೇವೆ ಆಯ್ಕೆಯು ಅಭ್ಯಾಸಬಲದಿಂದ ಬರಬಹುದು, ಇಲ್ಲವೆ ಭಾವನಾ ವೇಗದ ದೆಸೆಯಿಂದ ಬರಬಹುದು—ಅಡುಗೆಗೆ ಬೇಕೆಂದು ಮಡಕೆ ಬಂತು, ಅಂದವನ್ನು ನೋಡಿ ಗಡಿಗೆ ಬಂತು—ಒಂದನೆಯದು ಅಭ್ಯಾಸ, ಎರಡ ನೆಯದು ಉತ್ಸಾಹ. ಹೇಗಿದ್ದರೂ, ನಡೆದ ಕ್ರಿಯೆಯು ಒಂದು ಆರ್ಥಿಕ ನಿರ್ಧಾರ.

ವ್ಯಕ್ತಿಪರ ನಿರ್ಧಾರಗಳನ್ನು ದಾಟಿ, ಸಂಸ್ಥೆಗಳನ್ನು ತೆಗೆದುಕೊಂಡರೂ, ಸ್ಥಿರವಾದ ಮೊಬಲಗನ್ನು ಅಥವಾ ವಿರಳವಾದ ಸಾಧನಗಳನ್ನು ಯಾವು ದಾದರೂ ಒಂದು ಉಪಯೋಗಕ್ಕೆ ಬಳಸಿಕೊಳ್ಳುವಲ್ಲಿ ಆರ್ಥಿಕ ಆಯ್ಕೆಯ ಪ್ರಾಬಲ್ಯವಿರುವುದನ್ನು ನಾವು ಕಾಣುವೆವು. ಬಂಡವಾಳವನ್ನು ಬಸ್ಸು ಕಂಪೆನಿಗೆ ಹಾಕೋಣವೇ? ಕಾಗದ ಕಾರ್ಖಾನೆಯಲ್ಲಿ ಹೂಡೋಣವೆ? ಕಾಗದದ ಕಾರ್ಖಾನೆಯಾದರೆ ಅದನ್ನು ಎಲ್ಲಿ ಸ್ಥಾಪಿಸೋಣ? ಯಾವ ಯಂತ್ರವನ್ನು ತರಿಸೋಣ? ಅದನ್ನು ಯಾವ ದೇಶದಿಂದ ತರಿಸೋಣ? ವರ್ಷಕ್ಕೆಷ್ಟು ಟನ್ ಕಾಗದ ಹೊರಡಿಸೋಣ? ಎಂಬ ನಿರ್ಧಾರಗಳನ್ನು ಚಾಲಕನು ತನ್ನ ಅಭಿರುಚಿಯ ಮೇಲಿಂದಲೇ ನಿರ್ಧರಿಸುವುದಿಲ್ಲ. ಯಾವ ಮಾರ್ಗದಿಂದ ಅತಿಶಯವಾದ ಪರಮಾನ ಗಿಟ್ಟುವುದೋ, ಅದನ್ನೇ ಅವನು ಅನುಸರಿಸುವನು ಎಂದು ಸ್ಥೂಲವಾಗಿ ಹೇಳಬಲ್ಲೆವು.

ಏನನ್ನು ತಯಾರಿಸಬೇಕು ಎಂಬುದು ಸಮಾಜದ ಸಮಸ್ಯೆ. ಅನು ಭೋಗದ ಸಾಮಾನುಗಳನ್ನೇ ನಿರಂತರವಾಗಿ ತಯಾರಿಸಿ ಕೆಲವು ವರ್ಷ

ಜನತೆಯ ಬಾಳಿನ ಮಟ್ಟವನ್ನು ಊರ್ಜಿತದಲ್ಲಿಡಬಹುದು. ಆದರೆ ಆ ಅನುಭೋಗದ ಸಾಮಗ್ರಿಯನ್ನು ಉತ್ಪಾದಿಸುವ ಮಹಾಯಂತ್ರಗಳು ಜೀರ್ಣಿಸುತ್ತ, ನಶಿಸುತ್ತ, ಬಂದಹಾಗೆ ಅವುಗಳ ಉತ್ಪಾದಕ ಶಕ್ತಿ ಕುಂದು ವುದೊಂದೇ ಅಲ್ಲ, ಅವು ಕೆಲಸಕ್ಕೆ ಬಾರದಾಗ ಸಮಾಜವು ಏನು ಮಾಡ ಬೇಕು? ಭೂಮಿ, ಕೂಲಿ, ಯಂತ್ರ ಮುಂತಾದ ಉತ್ಪಾದನೆಯ ಅವಯ ವಗಳ ಪರಿಮಾಣಕ್ಕೆ ಒಂದು ಮಿತಿ ಇರುವುದರಿಂದ ಮನಸ್ವಿಯಾಗಿ ನಮಗೆ ಬೇಕಾದ ಸರಕು ಸಿದ್ಧಮಾಡುವುದು ಬಹು ಕಷ್ಟ. ಭಾರತದಂಥ ಬಡ ರಾಷ್ಟ್ರಗಳಲ್ಲಿ ಭೋಗ ಸಾಮಾಗ್ರಿಗಳು ಕಡಿಮೆಯಾಗಿರುವುದಕ್ಕೆ, ಉತ್ಪಾದಕ ಅವಯುವಗಳ ಅಭಾವವೇ ಕಾರಣ ದೇಶವು ವಿಶಾಲವಾಗಿದ್ದರೂ ಉಳು ನೆಲ ಅತಿಯಾಗಿಲ್ಲ, ಜನ ಕೋಟ್ಯಂತರ ಇದ್ದರೂ ಯೋಗ್ಯರಾದವರು ವಿರಳ. ಇಡಿಯ ಪ್ರಪಂಚವನ್ನೇ ತೆಗೆದುಕೊಂಡರೂ, ಇರುವ ಬಂಡವಲು, ಶ್ರಮ, ಯಂತ್ರ ಯಾವುವೂ ಅಪಾರವಾಗಿರುವುದಿಲ್ಲ. ಆದುದರಿಂದ ಪ್ರತಿ ಯೊಂದು ಸಮಾಜವೂ ಕೆಲವೊಂದು ಇಚ್ಛೆಗಳನ್ನು ಈಡೇರಿಸಿದರೆ, ಇನ್ನು ಕೆಲವನ್ನು ನಿರಾಕರಿಸಲೇ ಬೇಕು. ಸ್ವೀಕಾರದ ಬೆನ್ನಹಿಂದೆ ನಿರಾಕರಣೆ ಇದ್ದೇ ಇರುವುದು ಸಹಜವಾಗಿದ

**ಕ್ಷೇಮ ಸೂತ್ರ:**

ನೀತಿ ಬೇಡ, ಧರ್ಮ ಬೇಡ ಎಂಬ ಶಾಸ್ತ್ರವು ಹಾಗಾದರೆ ಹೃದಯ ಹೀನವಾದುದೆ? ಬರಿಯ ಆರ್ಥಿಕ ಪರಿಮಾಣಗಳನ್ನು ವಿವೇಶದಿಂದ ವಿತರಣೆ ಮಾಡುವುದಿಷ್ಟೆ ತನ್ನ ಕರ್ತವ್ಯವೆಂದು ಬಗೆಯುವುದು ಕಟುಕತನವಲ್ಲವೆ? ಧಾರಣೆ, ಕೂಲಿ, ಬಡ್ಡಿ, ವರಮಾನ ಹೀಗೆಲ್ಲ ತೀರ ನಿಷ್ಠುರವಾದ ಸತ್ಯಾಂಶ ಗಳನ್ನು ವಿವರಿಸುವ ತತ್ವವನ್ನು 'ಕ್ರೂರ ವಿಜ್ಞಾನ' ಎಂದು ಕಾರ್ಲೈಲ್ ಕರೆದುದರಲ್ಲಿ ತಪ್ಪೇನು? ಎಂದು ಕೆಲವರು ನಿರಾದರಿಸಬಹುದು. ಇದು ನಿಜ. ಅರ್ಥಶಾಸ್ತ್ರದ ಮೂಲಗುರಿ ಸಂಪತ್ತಿನ ಮೂಲವನ್ನು ಶೋಧಿ ಸುವುದೆ? ಅಥವಾ ಜನಕ್ಷೇಮದ ಹೊಲಬನ್ನು ಮಾಡಿಸಿಕೊಡುವುದೆ? ಎಂದು ಪ್ರಶ್ನಿಸುವುದು ಸೂಕ್ತವಾಗಿದೆ. ರಾಬಿನ್ಸ್ ಅವರ ಪದಲಕ್ಷಣದಲ್ಲಿ ಕ್ಷೇಮಕ್ಕೆ ಎಡೆಯಿಲ್ಲ. ಆ್ಯಡಂ ಸ್ಮಿಥ್‌ನಿಂದ ಹಿಡಿದು ಮಿಲ್, ಮಾರ್ಶಲ್,

ಪಿಗೂ ಮುಂತಾದ ಆಧುನಿಕರವರೆಗೂ ಅರ್ಥಶಾಸ್ತ್ರವು ಸಂಪತ್ತನ್ನೂ, ಜನಕ್ಷೇಮವನ್ನೂ, ಜಂಟಿಯಾಗಿಯೇ ಪರಿಶೀಲಿಸಿರುವುದು ಕಂಡುಬರುತ್ತದೆ. ಕ್ಷೇಮವೇ ತನ್ನ ಧ್ಯೇಯವೆಂದು ಬೊಬ್ಬಿಡದಿದ್ದರೂ, ಅರ್ಥಶಾಸ್ತ್ರದಲ್ಲಿ ಕ್ಷೇಮ ಚಿಂತನೆಯು ಇದ್ದೇ ಇದೆ ಅದಿಲ್ಲದ ಅರ್ಥಶಾಸ್ತ್ರದಿಂದ ಕ್ಷೇಮವಿಲ್ಲ.

ಧಾರಣೆ ನಿರ್ಣಯವಾಗುವ ಸರಳ ತತ್ತ್ವವನ್ನೇ ನಾವು ಒಪ್ಪಿಕೊಂಡರೆ ಅಲ್ಲಿಯೂ ಕ್ಷೇಮದ ಕಲ್ಪನೆ ಉಂಟೇ ಉಂಟು. ಹಣವನ್ನು ಹಣದ ಸಲುವಾಗಿಯೇ ಅಪೇಕ್ಷಿಸುವಂಥ ಮಿದಾಸನಂತಹ ಕಡುಲೋಭಿಗಳು ಬಲು ವಿರಳ. ನಮ್ಮ ಇಚ್ಛಾತೃಪ್ತಿಗೆ ಹಣ ಬೇಕಲ್ಲದೆ, ಆಟಕ್ಕಲ್ಲ, ನೋಟಕ್ಕಲ್ಲ. ಮಳೆಗಾಳಿಯಿಂದ ರಕ್ಷಿಸಿಕೊಳ್ಳಲು ಬಟ್ಟೆಯು ಅಗತ್ಯವಲ್ಲದೆ 'ಬಟ್ಟೆಗಾಗಿ ಬಟ್ಟೆಯಲ್ಲ' ಸರಕುಗಳಿಂದ ನಮಗೆ ದೊರೆಯುವ ತೃಪ್ತಿಯನ್ನಳೆಯಲು ಅವುಗಳ ಧಾರಣೆಯನ್ನು ಅಳತೆಗೋಲಾಗಿರಿಸಬಹುದು. ಒಂದೇ ಬೆಲೆಯ ಬಾಟಾ ಮತ್ತು ಫ್ಲೆಕ್ಸ್ ಬೂಟುಗಳಲ್ಲಿ ಶ್ರೀಮತಿ ಧನಲಕ್ಷ್ಮಿಯವರು ಬಾಟಾವನ್ನು ಪ್ರೋತ್ಸಾಹಿಸಿದ ಪಕ್ಷಕ್ಕೆ ಅವರ ದೃಷ್ಟಿಯಲ್ಲಿ ಅದು ಹೆಚ್ಚು ತೃಪ್ತಿಕರವೆಂದು ಎಣಿಸಬೇಕು. ಶ್ರೀಮತಿಯವರಿಗೆ ಬಾಟಾ ಬೂಟಿನಲ್ಲಿ ಏನೋ ವಿಶೇಷ ಗುಣವು ಕಂಡಿದೆ. ಯಥಾರ್ಥವಾಗಿ ಅಂತಹುದೇನೂ ಇಲ್ಲದಿರಬಹುದು. ಎರಡೂ ಒಂದೇ ಬಾಳಿಕೆಯವೂ, ರೂಪದವೂ ಆಗಿರಬಹುದು.

**ಅರ್ಥಶಾಸ್ತ್ರದ ಎಲ್ಲೆ:**

ಆದುದರಿಂದ ಕ್ಷೇಮ, ತೃಪ್ತಿ ಇವನ್ನು ಅರ್ಥಶಾಸ್ತ್ರದ ಎಲ್ಲೆಯೊಳಗೆಯೆ ಇಡಬೇಕಾಗುವುದು. ಇದರಿಂದ ತುಸು ತೊಂದರೆಯುಂಟು. ಮಾನವ ಜಾತಿಯ ಉದ್ಧಾರಕ್ಕೆ ಅರ್ಥಶಾಸ್ತ್ರದ ಸೂತ್ರಗಳು ದಾರಿಮಾಡಿ ಕೊಡಲಾರವು. ಯಾವುದು ನ್ಯಾಯ, ಯಾವುದು ಅನ್ಯಾಯ? ಯುದ್ಧ ಮಾಡಬೇಕೆ, ಬೇಡವೆ? ವಿವಾಹ ಪದ್ಧತಿ ಒಳ್ಳೆಯದೇ, ಕೆಟ್ಟದೇ? ಎಂದು ಮುಂತಾಗಿ ವಿವೇಚಿಸಿ, ಮೌಲ್ಯ ಕಟ್ಟುವುದು, ಅರ್ಥಶಾಸ್ತ್ರದ ಎಲ್ಲೆಯ ಹೊರಗಿನ ವಿಷಯಗಳು. ಅರ್ಥಶಾಸ್ತ್ರಕ್ಕೆ ಘನವಾದ ಇಂಥ ತತ್ತ್ವಗಳನ್ನು ತೂಗುವ ಶಕ್ತಿಯಿಲ್ಲ. ಇಲ್ಲವೆಂದರೆ ಸಂಪೂರ್ಣ ಅಯೋಗ್ಯವೆಂದು ತಿಳಿಯ

ಲಾಗದು  ವಿನಿಮಯ, ಧಾರಣೆ ಮೊದಲಾದ ಆರ್ಥಿಕ ಸೂತ್ರಗಳನ್ನು ಅಚಿಂತ್ಯವಾದ ಸನ್ನಿವೇಶಗಳಿಗೂ ಅನ್ವಯಿಸಬಹುದು. ಮನುಷ್ಯನಾದರೇನು? ಆತನಿಗೂ ಬೆಲೆಯಿದೆ. ಮಹಾತ್ಮರಿಗೆ ಅಪಾರವಾದ ಬೆಲೆ, ಸಾಮಾನ್ಯನಿಗೆ ಕಡಿಮೆ ಅಷ್ಟೆ. ಒಬ್ಬ ವ್ಯಕ್ತಿ ಬೆಣ್ಣೆ ಬಿಟ್ಟು ತುಫಾಕಿ ತರಿಸಿಕೊಂಡಂತೆ ಇನ್ನೊಬ್ಬನು ವಿಲಾಸವನ್ನು ಬಿಟ್ಟು ಕೀರ್ತಿಯನ್ನು ಅಂಟಿಸಿಕೊಳ್ಳಲಾರನೆ? ಅಂದರೆ, ಇಲ್ಲಿಯೂ ಆಯ್ಕೆಯ ಸೂತ್ರವು ನಡೆಯಬಲ್ಲುದು ಆದರೆ ಅರ್ಥಶಾಸ್ತ್ರಿ ಆಯ್ಕೆಗಳ ನ್ಯಾಯಾನ್ಯಾಯ ಪರಾಮರ್ಶೆ ಮಾಡುವುದಿಲ್ಲ, ಮಾಡಲಾರ. ಏಕೆಂದರೆ ಅದು ಅವನ ಕಸುಬಲ್ಲ  ಅಭ್ಯಾಸ, ಪೃಥಕ್ಕರಣ, ವಿಶ್ಲೇಷಣೆ, ಇಷ್ಟರಲ್ಲಿಯೇ ಅರ್ಥಶಾಸ್ತ್ರವು ತನ್ನ ಮಿತಿಯನ್ನು ಕಂಡುಕೊಂಡಿದೆ  ಅರ್ಥಶಾಸ್ತ್ರಿಯು ತೃಪ್ತನಾಗಿದ್ದಾನೆ

## ಎರಡನೆಯ ಅಧ್ಯಾಯ

# ಸರಕು, ಪ್ರಾವೀಣ್ಯ, ವಿನಿಮಯ

ಮಕ್ಕಳ ಕಥೆಯೊಂದರಲ್ಲಿ ''ಕಾಳುಕೊಟ್ಟು ಬಾಳು ತಂದೆ, ಥೈತಕ್ಕ ಥೈ,'' ಎಂದು ಕೋತಿ ಹೇಳುವಹಾಗೆ ಆರ್ಥಿಕ ಪ್ರಪಂಚದಲ್ಲಿ ಒಂದನ್ನು ಕೊಟ್ಟು ಇನ್ನೊಂದನ್ನು ಕೊಳ್ಳುವುದು, ದಿನವಹಿ ನಡೆಯುತ್ತದೆ. ವಿನಿಮಯವು ಮನುಷ್ಯನ ಆರ್ಥಿಕ ವ್ಯವಹಾರದ ಒಂಭತ್ತು ಹತ್ತನೆಯ ಅಂಶವೆಂದು ಹೇಳಲು ಅಡ್ಡಿಯಿಲ್ಲ. ವಿನಿಮಯ ಮಾಡುವವರು ಯಾರು? ಅವರು ಏನನ್ನು ವಿನಿಮಯ ಮಾಡುವರು? ಈ ವಿನಿಮಯವು ಏತಕ್ಕಾಗಿ?– ಈ ಪ್ರಶ್ನೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಪರಿಶೀಲಿಸುವ.

**ವಿನಿಮಯ ಯಾರು ಮಾಡುವರು? 'ಆರ್ಥಿಕ ಸಂಘಗಳು':**

ವ್ಯಕ್ತಿ ತನ್ನ ಸ್ವಂತದ ಸಲುವಾಗಿ ಕೊಳ್ಳುವ ಸರಕೂ, ಮಾರುವ ಸರಕೂ ಬರೇ ಅಲ್ಪ ಕಡಿಮೆ ಪಕ್ಷ ತನ್ನ ಕುಟುಂಬದ ಸಲುವಾಗಿ ಆತನು ವಿನಿಮಯಕ್ಕಿಳಿಯುವುದು ಹೆಚ್ಚು. ಹಾಗೆಯೇ, ಮುಂಬಯಿಯ ದಳ್ಳಾಳಿಯ ವ್ಯಾಪಾರ ಅವನ ಕುಳಗಳ ಸಲುವಾಗಿ ನಡೆಯುತ್ತದೆ ಅಂಗಡಿ ದೊಡ್ಡದಾಗುತ್ತ ಹೋದಂತೆ, ಅಲ್ಲಿಯೂ ವಿನಿಮಯದ ಕೆಲಸಕ್ಕೆ ನೌಕರರನ್ನು ಹಚ್ಚುತ್ತಾರೆ. ಮನೆವಾರ್ತೆಯ ಬಗ್ಗೆ ವಿನಿಮಯವು ಸರ್ವಸಾಮಾನ್ಯರಿಗೆ ಕಟ್ಟಿಟ್ಟದ್ದು ಹೆಚ್ಚಿನ ಜನ ಇತರ ಉದ್ಯೋಗಳಲ್ಲೇ ವಿನಿಮಯ ಮಾಡುವರು. ಕುಟುಂಬ, ಅಂಗಡಿ, ಫರ್ಮು ಇವು ವಿನಿಮಯದ ಘಟಕಗಳು ಇವನ್ನು ಆರ್ಥಿಕ ಘಟಕಗಳು ಎಂದೂ ಕರೆಯಬಹುದು.

ಹಣ್ಣಿನಂಗಡಿಯಿಂದ ನಾವು ನಮ್ಮ ಮನೆಗಾಗಿ ಹಣ್ಣು ಕೊಳ್ಳುತ್ತೇವೆ. ಹಣ್ಣನ್ನು ಮನೆಗೆ ಕೊಂಡುಹೋಗಿ, ಮಕ್ಕಳಿಗೆ ಕೊಟ್ಟು ತಿನ್ನುವವರು ನಾವೇ. ನಮಗಿಂತ ಮೊದಲು ಅಂಗಡಿಗಾರನು ಆ ಹಣ್ಣುಗಳನ್ನು

ಕೊಂಡಿದ್ದಾನೆ; ಆದರೆ ತಿನ್ನುವದಕ್ಕಲ್ಲ, ವಿನಿಮಯಕ್ಕಾಗಿ. ನಮಗೆ ಮಾರಿದ ಧಾರಣೆಯು ಅಂಗಡಿಗಾರನ ವೆಚ್ಚಕ್ಕಿಂತ ತುಸು ಹೆಚ್ಚಾಗಿರಬೇಕು. ಇದಕ್ಕೆ ಕಾರಣವೇನು? ಅವನು ಸ್ವತಃ ತನ್ನ ಪರಿಶ್ರಮ ಅಥವಾ ಸೇವಾ ಕಾರ್ಯಕ್ಕಾಗಿ ನಮ್ಮ ಕೈಯಿಂದ ನಾಲ್ಕು ಕಾಸು ವಸೂಲು ಮಾಡಿದ್ದಾನೆ. ಹಣ್ಣಿನ ವಿನಿಮಯದಲ್ಲಿ ನಾವು ಮೂರು ಬಗೆಯ ಆರ್ಥಿಕ ಘಟಕಗಳನ್ನು ಗುರುತಿಸಬಹುದು:

೧. ಚಿಲ್ಲರೆ ಅಂಗಡಿ, ರಕಮಿನ ಅಂಗಡಿ, ತಯಾರಿಸುವ ಕಂಪೆನಿ ಅಥವಾ ಉದ್ಯಮಗಳು.

೨. ಅಂತ್ಯಾನುಭೋಗಿಗಳು—ಹಣ್ಣು ತಿನ್ನುವುದೇ ಸಾರ್ಥಕ ಎಂದು ಕೊಂಡು ತಿಂದವರು.

೩. ಮೂಲೋತ್ಪಾದಕರು—ತನ್ನ ಪರಿಶ್ರಮವನ್ನು ನೇರಾಗಿ ಒಡೆಯನಿಗೆ ಮಾರುವ ಕಾಮಗಾರ; ಭೂಮಿಯ ಅಥವಾ ಗನಿಯ ಉಪಯೋಗವನ್ನು ಗೇಣಿಗೆ ಕೊಡುವ ಮಾಲಕರು.

## ಸರಕು ಎಂದರೇನು?

ವಿನಿಮಯಕ್ಕೆ ಒಳಗಾಗುವ ವಸ್ತು ಒಂದು ಕಡೆಯಿಂದ ಸರಕುಗಳು, ಸಂದ ಸೇವೆಗಳು; ಇನ್ನೊಂದು ಕಡೆಯಿಂದ ಹಣ—ರುಪಾಯಿ, ಡಾಲರು ಇತ್ಯಾದಿ ಇಕ್ಕಡೆಯಿಂದಲೂ ಸರಕು ಸೇವೆಗಳೇ ವಿನಿಮಯಗೊಂಡರೆ ಅದನ್ನು ಅದಲಾ ಬದಲಿ ಮಾರುವೆ ಎನ್ನ ಬಹುದು. ಹಣದ ಚಲುವಣೆಗಿಂತ ಪೂರ್ವದಲ್ಲಿ ಪ್ರಚಾರದಲ್ಲಿದ್ದ ಅದಲಾ ಬದಲಿಗೆ, ಇಂದಿನ ಈ ಹಣ ಪ್ರಪಂಚದಲ್ಲಿ ಮಹತ್ವವಿಲ್ಲ. ಕಣ್ಣಿಗೆ ಒಡೆದು ತೋರುವ ಹಾಗೆ, ಸರಕುಗಳನ್ನು ಕೊಟ್ಟು ಅಷ್ಟೇ ಧಾರಣೆಯ ಬೇರೆ ಸರಕುಗಳನ್ನು ಪಡೆದುಕೊಳ್ಳುವುದು ಈಗ ಬಹಳ ಅಪೂರ್ವ. ಎಲ್ಲರೂ ವಿನಿಮಯಕ್ಕಾಗಿ ಹಣವನ್ನೇ ಬಳಸುವುದರಿಂದ ನಿಜವಾದ ಸೌಕರ್ಯ ಅಪಾರವಾಗಿದ್ದರೂ ಹಣದ ಮುಸುಕಿನ ತೆರೆಯಲ್ಲಿ ಸರಕು ಎಂದರೇನೆಂದು ತಟ್ಟನೆ ಹೇಳುವುದು ಕಷ್ಟವಾಗಿದೆ.

ಸಾಧಾರಣವಾಗಿ 'ಸರಕು' ಎಂಬ ಒಂದು ಪದವನ್ನು ನಾವು ಸರಕುಗಳ ವರ್ಗಕ್ಕೇ ಉಪಯೋಗಿಸುವುದು ರೂಢಿ. ಸಾಬೂನು ಒಂದು ಸರಕು. ಇದರಲ್ಲಿ ಹಮಾಮು, ಗೋದ್ರೇಜ್, ವಿನೋಲಿಯಾ, ಕಾಂತಿ—ಎಷ್ಟು ಪ್ರಭೇದಗಳಿಲ್ಲ? ರಾಮನಿಗೆ ಹಮಾಮಿನಲ್ಲಿ ಪ್ರೀತಿ; ಲಕ್ಷ್ಮಣನಿಗೆ ಕಾಂತಿಯಲ್ಲಿ ಭಕ್ತಿ. ಹಮಾಮು ಸಿಗದೇ ಇದ್ದಾಗ ರಾಮನು ವ್ರತಭಂಗವನ್ನೆಸಗಿ ಗೋದ್ರೇಜನ್ನು ನಂಬಬಹುದು. ಅವನಿಗೆ ಸಂಪೂರ್ಣ ನಂಬುಗೆಯುಂಟಾಗಿ ಹಮಾಮ್, ಗೋದ್ರೇಜ್ ಒಂದೇ ಎಂಬುದವನಿಗೆ ಖಚಿತವಾಗಿ, ಯಾವುದಾದರೇನು? ಎಂದು ಅವನು 'ಉದಾಸೀನ ಭಾವ' ತಾಳಿದನೋ, ಆಗ ನಾವು 'ಹಮಾಮ್' 'ಗೋದ್ರೇಜ್'ಗಳು ಒಂದಕ್ಕೊಂದು ಪರಿಪೂರ್ಣ ಪ್ರತಿನಿಧಾನಗಳೆಂದೂ. ಗೋದ್ರೇಜಿನ ವಾಸನೆ ಅತಿಯಾಗಿ ರಾಮನ ಮೂಗು ತಲ್ಲಣಿಸಿ ಅವನಿಗೆ ಕೊಂಚ ಖೇದವೆನಿಸಿದರೆ, ಅಪರಿಪೂರ್ಣ ಪ್ರತಿನಿಧಾನಗಳೆಂದೂ ತಿಳಿಯಬೇಕು ಸಾಬೂನು ಒಂದೇ ಸರಕಲ್ಲವೆಂದು ಗಿರಾಕಿಗಳನ್ನು ಭ್ರಮಿಸಲು ಕಂಪನಿಯವರು ಬಣ್ಣ ಬೇರೆ ಹಾಕಿ, ಟ್ರೇಡ್‌ಮಾರ್ಕ್ ಹಚ್ಚಿ ಅನುಪಮವಾದ ನಾಮಕರಣಗಳನ್ನು ಮಾಡಿ, ಜಾಹೀರಾತಿನ ಮೂಲಕ ನಮ್ಮ ಮನವೊಲಿಸಿಕೊಂಡು, ಸರಕನ್ನು ಮಾರ್ಕೆಟಿಗೆ ತರುತ್ತಾರೆ ಜನಪ್ರಿಯತೆ ಬಂದಹಾಗೆ ಆರುಕಾಸು ಬೆಲೆ ಹೆಚ್ಚಿಸಿದರೂ ಸರಿಯೆ ಹೀಗೆ ಸಾಬೂನಿನ ಒಂದೊಂದು ಪ್ರಭೇದವನ್ನೂ ಬೇರೆ ಬೇರೆ ಸರಕೆಂದು ಪರಿಗಣಿಸಬೇಕಾಗುವುದು.

ಆಸ್ಟಿನ್ ಕಾರಿನ ಉತ್ಪಾದಕರು ಆ ಕಾರನ್ನು ಇಲ್ಲಿ ಮಾರಲಿಕ್ಕಿಟ್ಟಾಗ ಕಾರು ಅಲ್ಲೇ ತಯಾರಾದುದು ನಿಜವಾದರೂ ಇಲ್ಲಿ ಅದು ಇನ್ನೊಂದೇ ಸರಕು. ಬೇರೆತನವು ಹೆಚ್ಚಾಗಿ ಕಾಣಬರುವುದು ಧಾರಣೆಯಲ್ಲಿ—ಅಲ್ಲಿ ಆಸ್ಟಿನ್‌ಗೆ—೫೫೦೦ ರೂಪಾಯಿಯಾದರೆ ಇಲ್ಲಿ ೮೫೦೦ ರೂಪಾಯಿಗಳು. ಸಾಗುವಾಡು ವಿಮೆಗಳ ವೆಚ್ಚವೂ ಇಲ್ಲಿನ ಮಾರ್ಕೆಟ್ಟಿನ ಆಸ್ಟಿನ್‌ನಲ್ಲಿ ಸೇರಿರುವುದರಿಂದ ಅದೊಂದು ಹೊಸ ಸರಕು ಆಯಿತು

ಸರಕಿನಲ್ಲಿ ವೈವಿಧ್ಯಬರಲು ಸಮಯವೂ ಒಂದು ಕಾರಣವಾಗುವುದು. ನಮ್ಮೂರಲ್ಲಿ ಅಕ್ಟೋಬರ್ ತಿಂಗಳಲ್ಲಿ ತಯಾರಾದ ಬೆಲ್ಲವನ್ನು ದಾಸ್ತಾನು ಮಾಡಿ ಮೇ ತಿಂಗಳಲ್ಲಿ ನಮಗೆ ಒದಗಿಸುವ ವ್ಯಾಪಾರಿಯು ತನ್ನ ಮಧ್ಯ

ಸ್ಪಿಕೆಯನ್ನು ಧರ್ಮಾರ್ಥವಾಗಿ ನಿರ್ವಹಿಸುವುದಿಲ್ಲ. ಆದುದರಿಂದ ಮೋ-ಬೆಲ್ಲದಲ್ಲಿ ಅವನ ಸೇವೆಯ ವೆಚ್ಚವೂ ಒಡಗೂಡಿದೆ. ಮೋ ಬೆಲ್ಲ ಅಕ್ಟೋಬರ-ಬೆಲ್ಲಕ್ಕಿಂತ ಬೇರೆಯೇ ಒಂದು ಸರಕು

**ಸರಕುಗಳ ಪ್ರಭೇದವು ಹೇಗೆ?**

(೧) 'ಸರಕು' ಎಂದರೆ ಸ್ಪರ್ಶನೀಯವಾದ ವಸ್ತುಗಳು ಮತ್ತು ದರ್ಶನೀಯವಲ್ಲದ ಸೇವೆಗಳು. ಅನುಭೋಗಿಯ ನಾಲಗೆಗೆ ಬ್ರೂಕ್ ಬಾಂಡ್ ಚಹವೂ, ಲಿಪ್ಟನ್ ಚಹವೂ ಬೇರೆ ಬೇರೆಯಾಗಿ ತೋರುವುದರಿಂದ ಅವು ಎರಡು ಬೇರೆ ಬೇರೆ ಸರಕುಗಳು. ಪ್ರತಿಯೊಂದು ಸರಕನ್ನೂ ಜಾತಿ, ಕಾಲ, ದೇಶ, ಭೇದಗಳಿಗನುಗುಣವಾಗಿ ವಿಂಗಡಿಸಬಹುದು. ಪರಿಪೂರ್ಣ ಪ್ರತಿನಿಧಾನದ ಗುಣ ಎರಡು ಸರಕುಗಳಿಗಿದ್ದರೆ ಮಾತ್ರ ಅರ್ಥಶಾಸ್ತ್ರದ ಪ್ರಕಾರ ಅವು ಒಂದು ಸರಕು ಎಂದು ಎನಿಸಿಯಾವು.

(೨) ಪ್ರತಿನಿಧಾನದ ಮೂಲಕ ಎರಡು ಸರಕುಗಳನ್ನು ಜೋಡಿಸಬಹುದು. ಅನುಭೋಗಿಗಳು ಚಹ ಸಿಗದೆ ಇದ್ದಾಗ ಕಾಫಿಗೆ ಒಲಿದರೆ, ಚಹ-ಕಾಫಿಗಳನ್ನು ಪ್ರತಿನಿಧಾನಗಳೆಂದು ಕರೆಯ ಬಹುದು. ಕಾಮಗಾರರು ಸಿಗದ ಸ್ಥಳದಲ್ಲಿ ಯಂತ್ರಗಳನ್ನು ಉಪಯೋಗಿಸಿದರೆ ಅಲ್ಲಿಯೂ ಪ್ರತಿನಿಧಾನ ಮೂಡುವುದು ಚಹ-ಕಾಫಿ; ಕಾಮಗಾರ-ಯಂತ್ರ ಇವು ಒಂದೇ ಸರಕಲ್ಲವಾದರೂ ತಕ್ಕಮಟ್ಟಿಗೆ ತದ್ರೂಪದ ಸರಕುಗಳು ಎನ್ನಲಡ್ಡಿಯಿಲ್ಲ ಪ್ರತಿನಿಧಾನತ್ವವು ಆಳವಾಗುತ್ತಾ ಹೋದ ಹಾಗೆ ತದ್ರೂಪತೆಯು ತಾದಾತ್ಮ್ಯವನ್ನು ಸಮೀಪಿಸುವುದು.

(೩) ಸರಕುಗಳನ್ನು ನಿರ್ದಿಷ್ಟವಾದ ಉಪಯೋಗಕ್ಕೆ ಬರುವವುಗಳೆಂದೂ, ವಿವಿಧೋಪಯೋಗಿಗಳೆಂದೂ ಇರ್ತೆರನಾಗಿ ವಿಭಜಿಸಬಹುದು. ಸಾಧಾರಣವಾಗಿ ಏಕೋಪಯೋಗಿ ಸರಕುಗಳು ಕಡಿಮೆ. ಬರೆಯಲು ತಂದ ಕಾಗದದಿಂದ ಬೆಂಕಿಯನ್ನೂ ಹಚ್ಚಬಹುದು. ಸಿಮೆಂಟಿನಿಂದ ಗೋಡೆ ಕಟ್ಟಬಹುದು, ರಸ್ತೆಗೆ ಹಾಸಬಹುದು, ಮೋಜು ಮಾಡಬಹುದು. ನಿತ್ಯಜೀವನದ ಸರಕುಗಳಲ್ಲಿ ಹೆಚ್ಚಿನವು ನಿರ್ದಿಷ್ಟವೂ ಅಲ್ಲ ಅನಿರ್ದಿಷ್ಟವೂ ಅಲ್ಲ.

(೪) ಇನ್ನೂ ಕೆಲವು ಸರಕುಗಳು ಜತೆಜತೆಯಾಗಿಯೇ ಉಪಯೋಗಿಸಲ್ಪಡುವುವು: ಶಾಯಿ ಮತ್ತು ಲೆಕ್ಕಣಿ; ಫಿಲ್ಮು ಮತ್ತು ಕೆಮರಾ; ಕೋವಿ ಮತ್ತು ತುಫಾಕಿ.

**ಸರಕು: 'ಸೇವೆಗಳ ಗೊಂಚಲು'**

ರಾಮನು ಹಮಾಮು ಸಾಬೂನಿಗೆ ಆರಾಣೆಕೊಟ್ಟು ಸಾಬೂನು ಎಂಬ ಒಂದು ಸರಕನ್ನು ಪಡೆದುಕೊಂಡನಷ್ಟೆ. ಇದರಲ್ಲಿ ಎಲ್ಲ ಮೊತ್ತವೂ ತಾತಾ ಕಂಪೆನಿಯವರ ಕಿಸೆಗೆ ಬೀಳುವುದಿಲ್ಲ. ರಾಮನ ಆರಾಣೆಯಲ್ಲಿ ಒಂದಾಣೆ ಚಿಲ್ಲರೆಯಂಗಡಿಯವನಿಗೂ,ಒಂದಾಣೆ ರಕಮಿನಂಗಡಿಯವನಿಗೂ, ಅರ್ಧಾಣೆ ದಳ್ವಾಳಿಗೂ ಹೋಗಿ ೩|| ಆಣೆ ದೊರೆಯುವುದು. ಅವರು ಇದನ್ನು ಕೂಡಲೇ ಬ್ಯಾಂಕಿಗೆ ಒಯ್ಯುವಹಾಗಿಲ್ಲ. ಅದರಲ್ಲಿ ಅರ್ಧಾಣೆಯನ್ನು ಕೊಚ್ಚಿಯ ಎಣ್ಣೆಗೂ, ಒಂದರ್ಧಾಣೆಯನ್ನು ಬ್ಯಾಂಕಿನ ಬಡ್ಡಿಗೂ, ಅರ್ಧಾಣೆಯನ್ನು ನಾಗುವಾಡಿನ ಖರ್ಚಿಗೂ, ಮತ್ತೆ ಅರ್ಧಾಣೆಯನ್ನು ಯಂತ್ರಗಳಿಗೂ, ಉಳಿದುದನ್ನು ಕೂಲಿಗೂ ತೆತ್ತರೆ, ರಾಮನ ಆರಾಣೆ ಆಕಾಶಕ್ಕೆ ಹಾರುವುದಿಲ್ಲವೆ? ಒಂದೊಂದು ಆರ್ಥಿಕ ಘಟಕವೂ ಮಾಡುವ ಸೇವೆಗೆ ಹಣವು ಸಂದಿತು. ಆರಾಣೆಕೊಟ್ಟಾಗ ಸರಕು ಬಂತು ಎಂದರೆ ಬರಿಯ ಸಾಬೂನಿನ ಗಟ್ಟಿಯಲ್ಲ. ಈ ಎಲ್ಲ ಸೇವೆಗಳ ಮೊತ್ತವೂ ಒಂದಾಗಿ ಬಂತು ಎಂದು ತಿಳಿಯತಕ್ಕುದು. ಸರಕಿಗೆ ತೆರುವ ಹಣ ಎಂದರೆ ಸೇವೆಗೆ ತೆರುವ ಹಣ. ಅನೇಕ ಸೇವೆಗಳ ಗೊಂಚಲೇ ಸರಕು.

ರಾಮನ ಆರಾಣೆ ಎಲ್ಲಿಂದ ಬಂತು? ಎಂಬುದನ್ನು ವಿಚಾರಿಸಿದರೆ ಅದು ಕೂಡ, ನಿನ್ನೆ ಅವನು ಬಾವಿತೋಡಿದ ಪರಿಶ್ರಮಕ್ಕೆ ದೊರೆತ ಕೂಲಿ ಎಂದು ಉತ್ತರಬರುವುದು. ಅವನದೂ ಒಂದು ಬಗೆಯ ಸೇವೆ. ಇದು ಇತ್ತೀಚೆಗೆ ಮಾಡಿದ ಸೇವೆ. ಆದ್ದರಿಂದ ಅದರ 'ಸೇವಾಂಶ ಸಂಭೂತಿ'ಯನ್ನು ಅರಿಯಲು ಕಷ್ಟವಾಗುವುದಿಲ್ಲ. ಅಂತೆಯೇ ಕೊಂಡಾಗ ನಡೆದ ತಕ್ಷಣ ಸೇವೆಯಾಗಲೀ, ಹಲವು ವಾರಗಳ ಹಿಂದೆ ನಡೆದ ಸೇವೆಯೇ ಆಗಲಿ, ಅಥವಾ ವರ್ಷ ದಶಕಗಳ ಹಿಂದೆ ಜರಗಿದ ಸೇವೆ ಇರಲಿ, ಕಟ್ಟಕಡೆಗೆ ವಿನಿಮಯವಾಗುವುದು ಸರಕು >< ಹಣ; ಅಲ್ಲ, ಸೇವೆ >< ಸೇವೆ.

ಅನೇಕ ಮಧ್ಯಸ್ಥರನ್ನು ಕಟ್ಟಿಕೊಂಡು ಮೂಲೋತ್ಪಾದಕರು ನಡೆಯಿಸುವ ವಿನಿಮಯವು ಒಂದು ಬಗೆಯ ಅದಲಾಬದಲಿ. ಸೇವೆಯ ಅದಲಾಬದಲಿ. ಇದು ನಮಗೆ ಸ್ಪಷ್ಟವಾಗಿ ಗೋಚರವಾಗದಂತೆ ಮಾಡುವ 'ವಿಘ್ನೇಶ್ವರ'ಕ್ಕೆ 'ಹಣ' ಎಂದು ಕರೆಯುತ್ತಾರೆ. ಹಣದ ಮುಸುಕನ್ನು ತುಸುವೇ ಓಸರಿಸಿದರೆ ನಮ್ಮ ಆರ್ಥಿಕ ಸಂವಿಧಾನದ ನಿಜ ಸ್ವರೂಪವು ಬಯಲಾಗುವುದು

**ವರ್ಗೀಕರಣ:**

ಸರಕುಗಳನ್ನು 'ಅನುಭೋಗಿಗಳ ಸರಕೆ'ಂದೂ, 'ಉತ್ಪಾದಕರ ಸರಕೆ'ಂದೂ ಎರಡು ಮುಖ್ಯ ವರ್ಗವಾಗಿ ಕಾಣಬಹುದು

**(೧) 'ಅನುಭೋಗಿಯ ಸರಕುಗಳು':-**

ಇವು ಮನುಷ್ಯರ ಇಷ್ಟಾರ್ಥಗಳನ್ನು ಕೂಡಲೇ ನೇರವಾಗಿ ತೃಪ್ತಿಗೊಳಿಸುವ ಸರಕುಗಳು. ಉದಾ: ಮೋಟಾರು, ಆಹಾರ ಧಾನ್ಯ, ವೈದ್ಯರು, ನಾಟಕ ಗೃಹ, ಸೂಳೆಗೇರಿ. ಅನುಭೋಗಿಗಳಿಗೆ ಬೇಕಾಗುವ ಸರಕುಗಳನ್ನು ತಯಾರಿಸಿ ಮಾನವನ ಇಚ್ಛೆಗಳನ್ನು ಈಡೇರಿಸುವುದೇ ಆರ್ಥಿಕ ಚಟುವಟಿಕೆಗಳ ಪರಮ ಸಾರ್ಥಕ್ಯ ಎಂದು ಒಬ್ಬ ಅರ್ಥಶಾಸ್ತ್ರಿ ಸಾರಿದ್ದಾನೆ. ಆದರೆ ಉತ್ಪತ್ತಿಯಾದ ಅನುಭೋಗಿಗಳ ಸರಕುಗಳ ಒಟ್ಟು ಮೊಬಲಗಿಗೂ, ದೇಶದ ಸರ್ವ ವಹಿವಾಟಿನ ಮೊತ್ತಕ್ಕೂ ತುಂಬಾ ಅಂತರ ಬರುವುದುಂಟು. ಇಂಗ್ಲೆಂಡಿನಲ್ಲಿ ತಯಾರಾಗುವ ಅನುಭೋಗಿ ಸರಕುಗಳ ಒಟ್ಟು ಮೌಲ್ಯ £ ೫,೦೦೦ ಮಿಲಿಯಗಳಷ್ಟಾದರೆ, ದೇಶದ ವಹಿವಾಟಿನ ಮೌಲ್ಯ ಒಟ್ಟು £ ೫೦,೦೦೦ ಮಿಲಿಯವಂತೆ. ಈ ಸರಕು ಸಿದ್ಧವಾಗಿ ಅಂತ್ಯಾನುಭೋಗಿಯನ್ನು ತಲಪಬೇಕಾದರೆ, ಅನೇಕಾನೇಕ ವಹಿವಾಟು ನಡೆಯುವುದೇ ಇದಕ್ಕೆ ಕಾರಣ; ಪ್ರತಿ ವಹಿವಾಟಿನಲ್ಲಿಯೂ ಹಣದ ಲೇವಾದೇವಿ ಇರುವುದರಿಂದ ಮೊತ್ತ ಉಬ್ಬಿತು. ಅಷ್ಟು ಮಾತ್ರವಲ್ಲದೆ ನಾವು ಇತರ ಹಲವು ಸರಕುಗಳನ್ನು ಇಲ್ಲಿ ಸೇರಿಸಲಿಲ್ಲ.

(೨) ಒಂದನೆಯ ವರ್ಗದಲ್ಲಿ ಸೇರದ ಮುಖ್ಯ ಸರಕುಗಳಲ್ಲಿ 'ಉತ್ಪಾದಕರ ಸರಕು' ಒಂದಾಗಿದೆ. ಉತ್ಪಾದನೆಯ ಅಂತಿಮ ಪರಿಣಾಮವು ಅನುಭೋಗಿ ಸರಕು ಆದರೂ, ಉತ್ಪಾದನೆಯ ಕಾರ್ಯದಲ್ಲಿ ಯಂತ್ರ, ಕೂಲಿ

ಮುಂತಾದ ಸರಕುಗಳು ಅಗತ್ಯ ಬೀಳುವುವು. ಇವನ್ನು ನಾವು ಬಯಸು ವುದು, ಇವು ಸಲ್ಲಿಸುವ ಪರೋಕ್ಷವಾದ ಸೇವೆಗೋಸ್ಕರ. ಬೂಟನ್ನು ತಿಂದು ಯಾರೂ ಬದುಕುವುದಿಲ್ಲ. ಸೈಕಲಿನ ಮೇಲೆ ಸವಾರಿ ಮಾಡುವರೇ ಹೊರತು, ಅದನ್ನು ಹಸಿವೆ ಆದಾಗ ಹರಿದು ತಿನ್ನುವುದಿಲ್ಲ. ಆದರೆ ಬೂಟು ಇಲ್ಲದೆ ಶ್ರೀಮತಿ ಧನಲಕ್ಷ್ಮಿಯವರು ತಾವು ಲೆಕ್ಚರಿಣಿಯಾಗಿರುವ ಶಾಲೆಗೆ ಹೋಗಿ ಸಂಬಳ ತರುವಂತಿಲ್ಲ. ಸೈಕಲಿಲ್ಲದೆ ಪೇಪರ್ ಹುಡುಗ ದಿವಸ ತೆಗೆ ಯುವಂತಿಲ್ಲ. 'ಅನುಭೋಗಿಗಳ ಸರಕಿನ' ಸಿದ್ಧತೆಯಲ್ಲಿ ನೆರವಾಗುವುದ ರಿಂದಲೇ 'ಉತ್ಪಾದಕರ ಸರಕು' ಬೇಕಾಗುವುದು ಉತ್ಪಾದಕರ ಸರಕಿಗೆ ಇರುವ ಬೇಡಿಕೆ ಇನ್ನಾವುದೋ ಸರಕಿಗೆ ಇರುವ ಬೇಡಿಕೆಯಿಂದ ಬಂದುದು.

ಅನುಭೋಗಿಗಳ ಸರಕಿಗೂ, ಉತ್ಪಾದಕರ ಸರಕಿಗೂ ಇರುವ ವ್ಯತ್ಯಾಸವು ಶಾಶ್ವತವಾದುದೇನೂ ಅಲ್ಲ. ಕಚ್ಚಾ ರಬ್ಬರು, ಯುರೇನಿಯ ಮ್ ಅದುರು, ಅಭ್ರಕ ಮುಂತಾದುವು ಉತ್ಪಾದಕರ ಸರಕೆಂಬುದು ನಿರ್ವಿ ವಾದವಾದರೂ, ಇನ್ನು ಕೆಲವನ್ನು ಈ ರೀತಿ ನಿಷ್ಕೃಷ್ಟವಾಗಿ ವರ್ಗೀಕರಿಸಲು ಬರುವುದಿಲ್ಲ. ನಾವು ಮನೆಯಲ್ಲಿ ತಿನ್ನುವ ಕೊಬ್ಬರಿಯೆಣ್ಣೆ ಅನುಭೋಗಿ ಗಳ ಸರಕು. ಆದರೆ ಇದೇ ಎಣ್ಣೆಯ ಡಬ್ಬಿ ತಾತಾ ಸಾಬೂನು ಕಾರ್ಖಾನೆ ಯವರಿಗೆ ಉತ್ಪಾದಕರ ಸರಕು. ನಮ್ಮ ರಾಜ್ಯಾಧ್ಯಕ್ಷರು ಸ್ಪೆಶ್ಯಲ್ ರೈಲಿ ನಲ್ಲಿ ಬಂದರೆ ಆಗ ರೈಲು ಬಂಡಿಯ ಸೇವೆಯನ್ನು (೧) ಒಂದನೆಯ ದರ್ಜೆಗೂ, (೨) ಪ್ರವಾಸಿಕರು ದುಡ್ಡು ಕೊಟ್ಟು ಬಂದರೆ ಅದನ್ನು ಎರಡನೆಯ ದರ್ಜೆಗೂ ಸೇರಿಸಬೇಕು. ಉತ್ಪಾದನೆಯು ಕಾರ್ಯಗತಿಯಲ್ಲಿ ಹಿಂದೆ ಹಿಂದೆ ಸರಿದ ಹಾಗೇ ಈ ವ್ಯತ್ಯಾಸವು ಹೆಚ್ಚು ಹೆಚ್ಚು ಸ್ಪಷ್ಟವಾಗಿ ತೋರಬಲ್ಲುದು.

**(೩) ಕೂಲಿ ಸೇವೆ:**—ಮನೆಯೊಳಗದ ಹೆಣ್ಣನ್ನು (೧) ಒಂದನೆಯ ದರ್ಜೆಗೂ, ಸಾಮಾನ್ಯವಾಗಿ ಮಜೂರರು ಮಾಡುವ ಕೂಲಿಯನ್ನು (೨) ಎರಡನೆಯ ದರ್ಜೆಗೂ ಸೇರಿಸಬೇಕು. ಏಕಂದರೆ ಮಜೂರನ ಕೂಲಿ ಯಿಂದ ಬಾವಿಯ ಉತ್ಪಾದನೆಗೆ ನೆರವಾಯಿತು. ನಮಗೆ ಬೇಕಾಗಿರು ವುದು ಬಾವಿಯಾದುದರಿಂದ ಕೂಲಿಯ ಬೇಡಿಕೆ ಪರೋಕ್ಷವಾದ ಬೇಡಿಕೆ. ಎಲ್ಲ ಬೇಡಿಕೆಗಳೂ ಅತ್ಯಂತಃ ಅನುಭೋಗಿಗಳ ಸರಕುಗಳ ಬೇಡಿಕೆಯೇ ಆಗಿರುವುದರಿಂದ ಕೂಲಿ ಸೇವೆಗೆ ಪರೋಕ್ಷವಾದ ಬೇಡಿಕೆ ಇರುವುದೇ ಹೆಚ್ಚು.

**(೪) ಸ್ಥಿರ ಆಸ್ತಿ:—**ಈ ವರ್ಗಕ್ಕೆ ಮನೆ, ಹೊಲಗದ್ದೆಗಳನ್ನು ಸೇರಿಸುತ್ತಾರೆ. ಒಂದೊಂದು ಮನೆಯೂ, ಒಂದೊಂದು ಹೊಲವೂ ಒಂದೊಂದು ತೆರನಾಗಿರುವುದರಿಂದ ಧಾರಣೆಯೂ ಅಷ್ಟೇ ವಿವಿಧವಾಗಿರುವುದು ಸಹಜ.

**(೫) ಹಣದ ಸಾಲ:—**ಅಡಚಣೆಬಿದ್ದಾಗ ಖಾಸಗಿ ವ್ಯಕ್ತಿಗಳು ಬ್ಯಾಂಕಿನಿಂದ ಸಾಲ ಪಡೆಯುವುದು, ಬ್ಯಾಂಕುಗಳ ವ್ಯವಹಾರದ ಬಹಳ ಅಲ್ಪಾಂಶ. ವಹಿವಾಟಿನವರೂ, ವ್ಯಾಪಾರಿಗಳೂ, ಉದ್ದಿಮೆದಾರರೂ ಕಿರುವಾಯಿದೆಗೆ ಸಾಲ ಪಡೆಯುವುದು ಹೆಚ್ಚು. ಬಹುಶ್ರುತವಾದ ಫರ್ಮು ಆದರೆ ಸಾಲ ತೆಗೆಯುವುದು ಸುಲಭ ಹೊಸ ಸಂಸ್ಥೆಗಳನ್ನು ಸ್ಥಾಪಿಸುವಾಗ ಅದರ ಪೂರ್ವಾಪರವನ್ನು ತಿಳಿಯದವರ ಕೈಯಿಂದ ಸಾಲ ಎತ್ತುವುದು ಕಠಿಣ. ಸಾಲ ಎತ್ತುವ ಸಂಸ್ಥೆಯ ಭದ್ರತೆಯ ಮೇಲೂ, ಸಾಲವು ಬೇಕಾದ ವಾಯಿದೆಯ ಮೇಲೂ ಬಡ್ಡಿಯದರ ಅವಲಂಬಿಸಿರುವುದು. ಸಂಸ್ಥೆಗಳಲ್ಲಿಯೂ, ಉದ್ದಿಮೆಗಳಲ್ಲಿಯೂ ಹೂಡಲುದ್ಯುಕ್ತವಾದ ಬಂಡವಾಳಕ್ಕೆ ಸ್ವತಂತ್ರ ಬಂಡವಾಳ ಎನ್ನುತ್ತಾರೆ.

**(೬) ಹಕ್ಕುದಾರಿಯ ಪತ್ರಗಳು:—**ಇವುಗಳಲ್ಲಿ ಎರಡು ವರ್ಗ. ಸ್ಥಿರ ವರಮಾನವನ್ನು ತರುವಂಥವು, ಚಂಚಲ ವರಮಾನವನ್ನು ತರುವಂಥವು. ಮಾರುವೆ ಹುಂಡಿಗಳೂ, ಖಜಾನೆ ಹುಂಡಿಗಳೂ, (ಕಿರುವಾಯಿದೆಯ ಸಾಲದ), ಅಡವುಗಳೂ, ಡಿಬೆಂಚರುಗಳೂ, ಮೊದಲ ವರ್ಗಕ್ಕೆ ಸೇರುವುವು. ಸಾಮಾನ್ಯ ಕಂಪೆನಿಗಳ ಸ್ಟೋಕ್ ಮತ್ತು ಷೇರುಗಳ 'ಲಾಭಾಂಶ' ಅಂದರೆ ವರಮಾನಕಾಲಕ್ಕೆ ಬದಲಾಗುವುದರಿಂದ ಎರಡನೆಯ ವರ್ಗಕ್ಕೆ ಸೇರುವುವು.

**(೭) ಹಕ್ಕುಗಳು:—**ಹೊಸ ಬಗೆಯ ಯಂತ್ರವನ್ನೋ, ಹೊಸದೊಂದು ಕಾದಂಬರಿಯನ್ನೋ ಸೃಷ್ಟಿಸಿದ ಮನುಷ್ಯನಿಗೆ ಆ ಸೃಷ್ಟಿಯ ಮೇಲೆ ವಿಶಿಷ್ಟವಾದ ಹಕ್ಕುಂಟು. ಅದರ ಉಪಯೋಗವನ್ನು ಇತರರು ಪಡೆಯಬೇಕಾದರೆ ಬೆಲೆ ಕೊಟ್ಟೇ ಪಡೆಯತಕ್ಕದ್ದು.

**(೮) ವಿದೇಶೀಯ ಹಣ:—**ಒಂದೊಂದು ದೇಶಕ್ಕೆ ಒಂದೊಂದು ಹಣ. ಭಾರತಕ್ಕೆ ರೂಪಾಯಿ, ಫ್ರಾನ್ಸಿಗೆ ಫ್ರಾಂಕ್, ಅಮೇರಿಕಕ್ಕೆ ಡಾಲರು,

ಇಂಗ್ಲೆಂಡಿಗೆ ಸ್ಟರ್ಲಿಂಗ್. ರುಪಾಯಿ ಕೊಟ್ಟು ಈ ಪೈಕಿ ಯಾವು ದನ್ನೂ ಪಡೆಯಬಹುದು. ಒಂದು ಹಣವನ್ನು ಕೊಟ್ಟು ಇನ್ನೊಂದನ್ನು ಪಡೆಯುವ ಧಾರಣೆಗೆ 'ಮಾರುವೆ ದರ' ಎನ್ನುತ್ತಾರೆ.

## ವಿನಿಮಯಕ್ಕೆ ಮೊದಲು ಪ್ರಾವೀಣ್ಯ:—

ತಮಗೆ ಬೇಕಾದ ದವಸಧಾನ್ಯ, ಬಟ್ಟೆ ಬರೆಗಳನ್ನು ತಾವೇ ಉತ್ಪಾದಿಸಿ, ಸ್ವಸಂಪೂರ್ಣಗಳಾಗಿ ಬಾಳುವ ಸಮಾಜಗಳೂ, ಕುಟುಂಬಗಳೂ, ಆಧುನಿಕ ಕಾಲದಲ್ಲಿ ಕಾಣಸಿಗುವುದು ಕಷ್ಟ. ಗಾಣಿಗನು ಎಣ್ಣೆ ಮಾಡುವುದರಲ್ಲಿ ಪ್ರಾವೀಣ್ಯವನ್ನು ಪಡೆದು ಎಣ್ಣೆ ತಯಾರಿಸುವುದೊಂದನ್ನೇ ತನ್ನ ಜೀವನ ವೃತ್ತಿಯಾಗಿ ಇಟ್ಟುಕೊಂಡಿರುತ್ತಾನೆ. ತನಗೆ ಬೇಕಾದ ಬಟ್ಟೆಯನ್ನು ಅವನು, ನೆಯ್ಗೆಯಲ್ಲಿ ಪ್ರಾವೀಣ್ಯವನ್ನು ಪಡೆದ ನೇಕಾರನಿಂದ ಪಡೆಯುತ್ತಾನೆ. ಗಾಣಿಗನು ತಿಂಗಳ ಶುಕ್ಲ ಪಕ್ಷವನ್ನು ಎಣ್ಣೆ ಹಿಂಡುವುದಕ್ಕೂ, ಕೃಷ್ಣ ಪಕ್ಷವನ್ನು ಬಟ್ಟೆ ನೇಯುವುದಕ್ಕೂ ಉಪಯೋಗಿಸಿದ್ದರೆ ಎಷ್ಟು ಎಣ್ಣೆ ಬಟ್ಟೆಗಳು ತಯಾರಾಗುತ್ತಿದ್ದುವೋ, ಅದಕ್ಕಿಂತ ಗಾಣಿಗನು ಇಡೀ ತಿಂಗಳು ಎಣ್ಣೆ ಹಿಂಡುತ್ತಲೇ ಇದ್ದು, ನೇಕಾರನು ಬಟ್ಟೆ ನೇಯುತ್ತಲೇ ಇದ್ದರೆ, ಹೆಚ್ಚು ಎಣ್ಣೆ ಬಟ್ಟೆಗಳು ಉತ್ಪಾದನೆಯಾಗುವುವು ಒಂದೇ ಕೆಲಸದಲ್ಲಿ ವಿಶೇಷವಾದ ಅನುಭವವು ಇರುವುದಿಲ್ಲವೇ? ಪ್ರತಿಯೊಬ್ಬನ ಉತ್ಪಾದಕ ಶಕ್ತಿಯೂ ಅಧಿಕವಾಗುವುದಿಲ್ಲವೆ? ಒಟ್ಟು ಸಮಾಜದ ಸಂಪತ್ತು ವೃದ್ಧಿಯಾಗುವುದು ಹೀಗೆಯೇ

ಅರ್ವಾಚೀನ ನಾಗರಿಕತೆಯಲ್ಲಿ ಪ್ರಾವೀಣ್ಯ ತುಂಬಾ ಮುಖ್ಯವಾದುದು. ಹತ್ತೊಂಭತ್ತನೆಯ ಶತಮಾನದ ಸವೇಗ ಆರ್ಥಿಕ ಪ್ರಗತಿಯು ಪ್ರಾವೀಣ್ಯದ ಹೆಚ್ಚುಗಾರಿಕೆಯಿಂದಲೇ ಸಾಧ್ಯವಾಯಿತು ಗುಂಡುಸೂಜಿಯಂಥ ಚಿಕ್ಕ ಸರಕಿನ ಉತ್ಪಾದನೆಯಲ್ಲಿ ೧೯ ಭಿನ್ನ ಭಿನ್ನ ಕಾರ್ಯಭಾಗಗಳಿವೆಯಂತೆ. ಒಂದೊಂದರಲ್ಲಿಯೂ ಪ್ರಾವೀಣ್ಯ ಪಡೆದ ಕಾಮಗಾರರಿದ್ದಾರೆ. ಅಮೇರಿಕೆಯ ಸಂಯುಕ್ತ ರಾಷ್ಟ್ರದಂಥ ಮುಂದುವರಿದ ರಾಷ್ಟ್ರದಲ್ಲಿ ೨೦,೦೦೦ ವೃತ್ತಿ, ಉಪವೃತ್ತಿಗಳಿವೆಯಂತೆ! ನಮ್ಮ ಗ್ರಾಮದ ಆರ್ಥಿಕ ಸಂಘಟನೆಗೂ, ಔದ್ಯೋಗಿಕ ರಾಷ್ಟ್ರದ ಆರ್ಥಿಕ ಸಂಘಟನೆಗೂ,

ಇಷ್ಟೇ ವ್ಯತ್ಯಾಸ. ಆಯಾ ವೃತ್ತಿಯಲ್ಲಿ ತಲ್ಲೀನನಾಗಿ ಪ್ರಾವೀಣ್ಯ ಪಡೆಯುತ್ತಿರುವವನು ತನ್ನ ಸೇವೆಯನ್ನು ಇತರ ಅನೇಕ ಜನಗಳ ಸೇವೆಯೊಡನೆ ವಿನಿಮಯ ಮಾಡಿಕೊಂಡು ಬಾಳುವನು. ಪ್ರಾವೀಣ್ಯವಿಲ್ಲದೆ ವಿನಿಮಯವಿಲ್ಲ—ವಿನಿಮಯ ಮಾಡುವುದಾದರೂ ಏನನ್ನು? ವಿನಿಮಯವಿಲ್ಲದ ಬರೀ ಪ್ರಾವೀಣ್ಯವು ಅಪ್ರಯೋಜಕ. ದರ್ಜಿ ಉಪವಾಸ ಸಾಯಬೇಕಾದೀತು, ಕೃಷಿಕ ಬತ್ತಲೆ ತಿರುಗಬೇಕಾದೀತು. ಪ್ರಾವೀಣ್ಯವಿಲ್ಲದೆ ವಿನಿಮಯವು ಅಸಾಧ್ಯ; ವಿನಿಮಯವಿಲ್ಲದ ಪ್ರಾವೀಣ್ಯವು ಮೂರ್ಖತನ.

ರಾಮನಿಗೂ ಭೀಮನಿಗೂ ವಿನಿಮಯವು ನಡೆಯಬೇಕಾದರೆ ಭೀಮನು ಕೊಡುವಷ್ಟು ಸರಕು, ರಾಮನು ಕೊಟ್ಟ ಸರಕಿಗಿಂತ ಅಧಿಕ ಮಹತ್ವದ್ದೆಂದು ರಾಮನಿಗೆ ಆ ಕ್ಷಣಕ್ಕೆ ತೋರಿಬರಬೇಕು. ಭೀಮನಿಗೂ ಹಾಗೆಯೇ. ಇಬ್ಬರೂ ತಮಗೆ ವಿನಿಮಯದಿಂದ ಫಾಯಿದೆಯಿದೆ ಎಂದು ಭಾವಿಸಬೇಕು. ನಾನು ಕೊಡುವ ಆರಾಣೆಯು ಅಂಗಡಿಯವನಿಗೆ ಹೆಚ್ಚು ಮೆಚ್ಚುಗೆಯಾಗಿ, ನನಗೆ ಆರಾಣೆಗಿಂತ ಅವನು ಕೊಡುವ ಹಮಾಮು ಸಾಬೂನೇ ಹೆಚ್ಚು ಮೆಚ್ಚಿಗೆಯಾಗುವ ಭಾವನೆ ಆ ಕ್ಷಣಕ್ಕೆ ತೋರಿದರೆ, ನನ್ನ ಹಣವೂ, ಹಮಾಮೂ ಕೈ ಬದಲಿಸಿ, ವಿನಿಮಯಕಾರ್ಯವು ಜರಗುವುದು.

ಒಂದೇ ವಸ್ತು ಇಬ್ಬರಿಗೆ ಬೇರೆ ಬೇರೆ ಮೌಲ್ಯದವಾಗಿ ಕಾಣುವುದೇಕೆ? ನಮ್ಮ ಹತ್ತಿರ ಯಾವುದಾದರೂ ಒಂದು ವಸ್ತು ಅಧಿಕತರವಾಗಿದ್ದ ಪಕ್ಷಕ್ಕೆ, (ಇತರ ಸರಕುಗಳ ಪರಿಮಾಣ ಸ್ಥಿರ ಎಂದೆಣಿಸಬೇಕು) ಅದೇ ಸರಕನ್ನು ಇನ್ನಷ್ಟು ಯಾರಾದರೂ ನಮಗೆ ಕೊಟ್ಟರೆ ಅದರಲ್ಲಿ ನಮಗೆ ಕಾಯಸ ಕಡಿಮೆ. ನಮ್ಮ ರೇಷನ್ ಕಾರ್ಡಿನಲ್ಲಿ ಎರಡೇ ರಾತಲು ಸಕ್ಕರೆ ಬರೆದಿದ್ದರೆ, ಹೆಚ್ಚಿಗೆ ಒಂದುರಾತಲು ಸಕ್ಕರೆಗೆ ನಾವು ಕೊಡುವ ಮಹತ್ವದಷ್ಟು, ನೀಡುವ ಧಾರಣೆಯಷ್ಟು, ನಮ್ಮ ಕಾರ್ಡಿಗೆ ನಲ್ವತ್ತು ರಾತಲೋ ನೂರು ರಾತಲೋ ಇದ್ದರೆ, ನಾವು ಖಂಡಿತವಾಗಿ ಕೊಡುವುದಿಲ್ಲ ಸಕ್ಕರೆ ಹೆಚ್ಚಾದಷ್ಟೂ ಇನ್ನೊಂದು ಸಕ್ಕರೆಯ ಬಗ್ಗೆ ನಮ್ಮ ಆಸ್ಥೆ ಕಡಿಮೆಯಾಗುವುದು. ಸಕ್ಕರೆ ಕಡಿಮೆಯಾದಷ್ಟು, ಹೆಚ್ಚಿನ ಒಂದು ರಾತಲು ಸಕ್ಕರೆಯ ಕಡೆಗೆ ನಮ್ಮ ಲೋಭವು ಅಧಿಕವಾಗುವುದು. ಈ ದೃಷ್ಟಿಯಿಂದ ವಿಚಾರಿಸಿದರೆ ಒಂದು

ರಾತಲು ಸಕ್ಕರೆಯ ನಿಜವಾದ ಮೌಲ್ಯ ಎಷ್ಟು ಎಂದು ನಾವು ಹೇಳ ಲಾರೆವು. ಮೌಲ್ಯವು ಸರಕಿನಲ್ಲಿ ಅಡಕವಾಗಿಲ್ಲ, ಅದೊಂದು ಆರೋಪಿತ ಗುಣ. ಚಿನ್ನವು ತುಂಬಾ ಬೆಲೆಯುಳ್ಳದ್ದೆಂದು ನಾವು ಭಾವಿಸುವುದರಿಂದ ಲೇ, ಚಿನ್ನಕ್ಕೆ ಭಾರಿ ಬೆಲೆ.

**ಪ್ರಾವೀಣ್ಯ: ಎರಡು ವಿಧ:—**

(೧) ಉತ್ಪತ್ತಿ ಪ್ರಾವೀಣ್ಯ ಅಥವಾ ಬಾಹ್ಯ ಪ್ರಾವೀಣ್ಯ. ಅಕ್ಕಿ ಬೆಳೆಯುವ ರೈತ ಅಕ್ಕಿಯ ಉತ್ಪತ್ತಿಗೆ ಪೂರ್ವಭಾವಿಯಾದ ಉಳುವುದು, ಗೊಬ್ಬರ ಹಾಕುವುದು, ನೆಡುವುದು, ಕೊಯ್ಯುವುದು, ಸಂಗ್ರಹಿಸುವುದು ಮುಂತಾದ ಎಲ್ಲ ಕಾರ್ಯಭಾಗಗಳನ್ನು ತಾನೇ ಮಾಡುತ್ತಾನೆ. ಇದು ಉತ್ಪತ್ತಿ ಪ್ರಾವೀಣ್ಯ

(೨) ಅಕ್ಕಿಯ ಉತ್ಪಾದನಾ ಕಾರ್ಯದಲ್ಲಿ, ಉಳುವವನು ಬೇರೆ, ಕೊಯ್ಯುವವನು ಬೇರೆ, ಪೇಟೆಗೆ ಒಯ್ಯುವವನು ಬೇರೆಯಾಗಿದ್ದು, ಆಯಾ ಕೆಲಸಗಳಲ್ಲಿ ಅವರು ಪ್ರಾವೀಣ್ಯವನ್ನು ಪಡೆದರೆ ಅದನ್ನು 'ಕಾರ್ಯಭಾಗ ಪ್ರಾವೀಣ್ಯ' ಅಥವಾ 'ಆಂತರಿಕ ಪ್ರಾವೀಣ್ಯ' ಎನ್ನುತ್ತಾರೆ. ಕೃಷಿಗಿಂತಲೂ ಉದ್ಯಮಗಳಲ್ಲಿ ಇಂಥಾ ಕಾರ್ಯಭಾಗ ಪ್ರಾವೀಣ್ಯದ ಪ್ರಾಬಲ್ಯ ಬಹಳ ವಾಗಿರುವುದು. ಪುಸ್ತಕವು ಅಚ್ಚಾಗಬೇಕಾದರೆ, ಮೊಳೆ ಜೋಡಿಸುವವನು ಬೇರೆ, ಅಚ್ಚು ಹೊಡೆಯುವವನು ಬೇರೆ, ರಟ್ಟು ಹೊಲಿಯುವವನು ಬೇರೆ, ಬರೆದವನು ಬೇರೆ. ಒಂದು ಪುಸ್ತಕ ತಯಾರಿಸಲು ಅನೇಕ ಕಾರ್ಯ ಭಾಗಗಳಲ್ಲಿ ಒಬ್ಬೊಬ್ಬರು ಪ್ರಾವೀಣ್ಯ ಪಡೆದು ಅದನ್ನೇ ತಮ್ಮ ವೃತ್ತಿ ಯಾಗಿ ಮಾಡಿಕೊಂಡಿರುವರು.

**ವಿನಿಮಯ: ಪರೋಕ್ಷ ಉತ್ಪಾದನೆ:**

ನನಗೆ ಅಂಗಿ ಬೇಕಾದರೆ ಅದನ್ನು ಪಡೆಯಲು ಎರಡು ವಿಧಾನ ಗಳಿವೆ. ಒಂದು ದರ್ಜಿಯ ಹತ್ತಿರ ಹೊಲಿಸುವುದು; ಇನ್ನೊಂದು ನಾನೇ ಹೊಲಿಯುವುದು. ದರ್ಜಿ ನನಗಿಂತ ಅಧಿಕ ಪ್ರಾವೀಣ್ಯ ಪಡೆದವನಾದ್ದ ರಿಂದ ಅಂಗಿ ಬೇಗ ಸಿದ್ಧವಾಗುವುದು. ಆ ಸಮಯವನ್ನು ನಾನು ಬಟ್ಟೆ ನೇಯುವುದಕ್ಕೆ ಉಪಯೋಗಿಸಿದರೆ ಹೆಚ್ಚು ಬಟ್ಟೆ ಉತ್ಪಾದನೆಯಾಗುವುದು.

ಬಂದ ಹಣದಿಂದ ನಾನು ದರ್ಜಿಯ ಕೂಲಿ ಕೊಡಬಲ್ಲೆ. ಅಂಗಿಯನ್ನು ಪ್ರತ್ಯಕ್ಷವಾಗಿ ಉತ್ಪಾದಿಸುವುದು ಬಿಟ್ಟು, ಹಣದ ಮೂಲಕ, ವಿನಿಮಯದ ಮೂಲಕ, ಪರೋಕ್ಷವಾಗಿ ನಾನು ಉತ್ಪಾದಿಸಿಕೊಳ್ಳುತ್ತೇನೆ.

**ವಿನಿಮಯದ ವ್ಯಾಪ್ತಿ ಮಾರ್ಕೆಟಿನ ವ್ಯಾಪ್ತಿಯನ್ನು ಅವಲಂಬಿಸಿದೆ:–**

ವಿನಿಮಯದ ವ್ಯಾಪ್ತಿಯು ಮಾರ್ಕೆಟು ಮತ್ತು ಮಾರುವ ಸೌಲಭ್ಯದ ಮೇಲೆ ಹೊಂದಿಕೊಂಡಿದೆ. ಜನಸಾಂದ್ರತೆಯೂ, ಸಾಗುವಾಡಿನ ಸೌಕರ್ಯಗಳೂ ಎರಡು ಮುಖ್ಯ ಅಂಶಗಳು. ಗೋಬಿ ಮರುಭೂಮಿಯಲ್ಲಿ ರೈಲು ಹಾಕದೆ, ಮೋಟಾರು ಕಾರ್ಖಾನೆ ಸ್ಥಾಪಿಸಿದರೆ ಅದನ್ನು ಕೊಳ್ಳುವ ಜನವಂತೂ ಅಲ್ಲಿ ಇಲ್ಲ ತಾನೆ? ಮಾರಲೋಸುಗ ದೂರ ಒಯ್ಯಲು ರೈಲು ಬಂಡಿಯೂ ಇಲ್ಲದಿದ್ದರೆ, ಮೋಟಾರು ವಿಜ್ಞಾನದಲ್ಲಿ ತರಬೇತಾದವರು, ಪ್ರವೀಣರು ಆದನ್ನು ಬಿಟ್ಟು ನಾಲ್ಕು ಕತ್ತೆಗಳನ್ನು ಸಾಕಿದರೆ, ಆದರ ಹಾಲನ್ನಾದರೂ ಕುಡಿಯಬಹುದಲ್ಲವೆ? ಹತ್ತು ಮನೆಗಳಿರುವ ಗ್ರಾಮದಲ್ಲಿ ಒಬ್ಬ ನೇತ್ರವೈದ್ಯನನ್ನು ಹಾಕಿದರೆ, ಅವನ ಪ್ರಾವೀಣ್ಯಕ್ಕೆ ಅವಕಾಶವಿರದು. ಅವನು ವರ್ಷದಲ್ಲಿ ಮುನ್ನೂರ ಅರುವತ್ತು ದಿನ ನಿರುದ್ಯೋಗಿಯಾಗಿ ಇರುವುದಿಲ್ಲವೆ? ಆದುದರಿಂದಲೇ ಪ್ರಾವೀಣ್ಯದ ವ್ಯಾಪ್ತಿಯು ಮಾರ್ಕೆಟಿನ ವ್ಯಾಪ್ತಿಯನ್ನು ಅನುಸರಿಸಿ ಇದೆಯೆನ್ನುವುದು.

**ಮಾರ್ಕೆಟು ಎಂದರೇನು?**

ಸರಕುಗಳನ್ನು ಕೊಳ್ಳುವ, ಮಾರುವ ಸ್ಥಳಕ್ಕೆ ಮಾರ್ಕೆಟು ಎಂದು ಸಾಮಾನ್ಯವಾಗಿ ಕರೆಯುವರು. ಪ್ರತಿ ಗ್ರಾಮದಲ್ಲಿಯೂ ಇರುವ ಸಂತೆ ಇಂಥ ಮಾರ್ಕೆಟು. ಆದರೆ ಗ್ರಾಮದ ಆರ್ಥಿಕ ವ್ಯವಸ್ಥೆಯಿಂದ ಸಮಾಜವು ಮುಂಬರಿದಂತೆ ವಿದೇಶೀಯ ನಾಣ್ಯವಿನಿಮಯದ ಮಾರ್ಕೆಟೂ, ಕೂಲಿಜನರ ಮಾರ್ಕೆಟೂ, ಉದ್ಭವಿಸುವುವು. ಈ ಮಾರ್ಕೆಟುಗಳು ಒಂದೇ ಸ್ಥಳದಲ್ಲಿ ಇರಬೇಕೆಂದಿಲ್ಲ. ಫೋನಿನ ಮೂಲಕ ಇಡೀ ಪ್ರಪಂಚವೇ ಒಂದು ಮಾರ್ಕೆಟಾಗಿ ಬಿಟ್ಟದೆ. ಇಂಡಿಯದ ದಾಲ್ಮಿಯಾ ಇಂಗ್ಲೆಂಡಿನ ಬಾರ್ಕ್ಲೀ ಬ್ಯಾಂಕಿನ ಷೇರು ಕೊಳ್ಳಬಹುದು. ಮಾರ್ಕೆಟಿನ ಮುಖ್ಯ ಅಂಶಗಳು ಎರಡು:

೧. ಮಾರುವವರೂ, ಕೊಳ್ಳುವವರೂ ನಿಕಟ ಸಂಬಂಧವಿರುವಂತೆ ಏರ್ಪಟ್ಟಿರಬೇಕು.

೨. ಮಾರ್ಕೆಟಿನ ಒಂದು ಪಾರ್ಶ್ವದ ಧಾರಣೆಯು ಇನ್ನೊಂದು ಪಾರ್ಶ್ವದ ಧಾರಣೆಯಮೇಲೆ ಪರಿಣಾಮ ಬೀರಬೇಕು.

ಇಂಥ ಸಂದರ್ಭಗಳನ್ನು ಕಲ್ಪಿಸುವಲ್ಲಿ ಎಷ್ಟುಜನ ದಲಾಲರು, ಮಧ್ಯಸ್ಥರು ಬಂದರೂ ಚಿಂತಿಲ್ಲ.

ಉತ್ಪಾದಿತವಾಗುವ ಒಂದು ಸರಕಿಗೆ ಅಂತರರಾಷ್ಟ್ರೀಯ ಮಾರ್ಕೆಟು ಬರಬೇಕಾದರೆ ಸಾಗುವಾಡಿನ ವೆಚ್ಚ ಅತಿಶಯವಾಗಿರಕೂಡದು. ಭದ್ರಾವತಿಯಿಂದ ಬಗ್ದಾದಿಗೆ ತಗಡು ಸಾಗಿಸಲು ತಗಲುವ ವೆಚ್ಚವೇ, ಭದ್ರಾವತಿಯ ಉಕ್ಕಿನ ತಗಡಿಗೆ, ಬಗ್ದಾದಿನ ಮಾರ್ಕೆಟು ಸಿಗಲಾರದುದರ ಕಾರಣ. ಸ. ರಾಷ್ಟ್ರದಲ್ಲಿ ಕಲ್ಲಿದ್ದಲು ಅಗ್ಗದಲ್ಲಿ ತಯಾರಾದರೂ ಅದು ವಿಲಾಯತಿಗೆ ಬರುವುದಿಲ್ಲ. ಅಟ್ಲಾಂಟಿಕ ಸಾಗರವನ್ನು ದಾಟುವ ವೆಚ್ಚ, ಸ. ರಾಷ್ಟ್ರದ ಕಲ್ಲಿದ್ದಲಿಗೆ ಸೇರಿಕೊಂಡಾಗ, ಅದರ ಧಾರಣೆ ಅಗ್ಗವಾಗಿ ಇರಲಾರದು. ಒಂದೊಂದು ಕಡೆಯಿಂದ ಇನ್ನೊಂದುಕಡೆಗೆ ಸಾಗಿಸಲು ಆಗದ ಜಮೀನು, ಮನೆ ಮುಂತಾದುವಕ್ಕೂ. ಕೂಡಲೆ ಹಾಳಾಗಿ ಕೊಳೆತುಹೋಗುವ ಹಾಲು, ತರಕಾರಿ, ಹಣ್ಣು ಮುಂತಾದುವಕ್ಕೂ, ಅಂತರರಾಷ್ಟ್ರೀಯ ಮಾರ್ಕೆಟು ಲಭ್ಯವಾಗುವುದಿಲ್ಲ. ಹಾಲನ್ನು ಹಿಟ್ಟುಮಾಡಿ ಕಳುಹಿಸಿದರೆ, ಅದಕ್ಕೆ ಹಾಲಿನ ಗುಣವಿಲ್ಲವಾದ್ದರಿಂದ ಅನುಭೋಗಿಯ ಕಣ್ಣಿಗೆ ಅದು ಹಾಲಲ್ಲ. ಬೇರೆಯೇ ಸರಕು.

ಮಲಯಾ, ಆಫ್ರಿಕಗಳಲ್ಲಿ ಹಿಂದೀ ಕಾಮಗಾರರು ಕೆಲಸಮಾಡುತ್ತಿದ್ದರೂ ಭಾರತದಲ್ಲಿನ ಒಟ್ಟು ಕಾಮಗಾರರನ್ನು ತೆಗೆದುಕೊಂಡರೆ ಹೀಗೆ ಊರುಬಿಟ್ಟುಹೋದ ಕಾಮಗಾರರು ಅತ್ಯಲ್ಪ. ಭಾಷೆ ಬೇರೆ, ಹವೆ ಬೇರೆ, ಒಡನಾಟ ಬೇರೆ, ಆಗಿರುವಂಥ ದೇಶಗಳಿಗೆ ಚಲಿಸಲು ಕಾಮಗಾರರು ಇಷ್ಟಪಡುವುದಿಲ್ಲ. ಅದರಿಂದ ಒಂದು ದೇಶದ ಕೂಲಿಗೆ ಆ ದೇಶದ ಆಂತರಿಕ ಮಾರ್ಕೆಟು ಮಾತ್ರ ದೊರೆಯುವುದು.

ಬೇರೆ ದೇಶದ ಸರಕಿನ ಮೇಲೆ ಆಮದು, ಸುಂಕವನ್ನು ಹೇರಿದರೆ, ಆ

ಸುಂಕವನ್ನು ದಾಟಿಕೊಂಡು, 'ಸುರಕ್ಷಿತ' ದೇಶದೊಳಗೆ ಅಂತರರಾಷ್ಟ್ರೀಯ ಸರಕು ನುಗ್ಗುವುದು. ಸುರಕ್ಷಿತ ವಲಯದೊಳಗೆ ಧಾರಣೆ ಕೊಂಚ ಅಧಿಕ ವಾಗುವುದು.

ಅಂತೂ ಕೆಲವು ಸರಕುಗಳಿಗೆ ಸ್ಥಾನಿಕ ಮಾರ್ಕೆಟು, ಸ್ವದೇಶದ ಮಾರ್ಕೆಟು ಮಾತ್ರ; ಕೆಲವಕ್ಕೆ ಜಾಗತಿಕ ಮಾರ್ಕೆಟು ದೊರೆಯುವುದು.

## ಪರಿಪೂರ್ಣ, ಅಪರಿಪೂರ್ಣ ಮಾರ್ಕೆಟು:

ಮಾರಲಿರುವವರೂ, ಕೊಳ್ಳಲಿರುವವರೂ ಮಾರ್ಕೆಟಿನ ಧಾರಣೆಯ ಸಂಪೂರ್ಣ ಮಾಹಿತಿ ಉಳ್ಳವರಾಗಿರುತ್ತಾರೆ. ಹಾಗಿದ್ದರೆ, ಅಂದರೆ ಇತರ ಮಾರಾಟಗಾರ ಗಿರಾಕಿಗಳ ಚೌಕಸಿಯಿಂದುಂಟಾದ ಧಾರಣೆಯ ಅಭಿಜ್ಞಾನ ಅವರಿಗಿದ್ದರೆ; ಮತ್ತು ಕೊಳ್ಳುವವನು ತನಗೆ ಇಷ್ಟತೋರಿದ ಮಾರಾಟ ಗಾರನಿಂದ ಕೊಂಡು, ಮಾರಾಟಗಾರನು ತನ್ನ ಮನಬಂದ ಗಿರಾಕಿಯಿಂದ ಕೊಳ್ಳುವ ಸ್ವಾತಂತ್ರ್ಯವಿದ್ದರೆ,—ಮಾರ್ಕೆಟು ಪರಿಪೂರ್ಣವಾಗಿರುವುದು. ಇದಕ್ಕೆ ವಿಪರೀತ ಸನ್ನಿವೇಶಗಳಲ್ಲಿ ಮಾರ್ಕೆಟು ಅಪರಿಪೂರ್ಣವೆಂದು ತಿಳಿ ಯತಕ್ಕದ್ದು, ಪರಿಪೂರ್ಣ ಮಾರ್ಕೆಟಿನಲ್ಲಿ ಒಂದು ಸರಕಿಗೆ ಒಂದೇ ಧಾರಣೆ. ಕಡಿಮೆ ಧಾರಣೆಗೆ ಸರಕು ಎಲ್ಲಿ ದೊರೆಯುವುದೋ, ಅಲ್ಲಿಗೆಯೆ ಗಿರಾಕಿ ಹೋಗುತ್ತಾನೆ ಯಾವ ಗಿರಾಕಿ ಅತಿ ಹೆಚ್ಚು ಧಾರಣೆ ಕೊಡು ವನೋ ಅವನಿಗೇ ಮಾರಾಟಗಾರನು ಸರಕುಗಳನ್ನು ಮಾರುತ್ತಾನೆ. ಮಾರ್ಕೆಟಿನ ಮೂಲೆ ಮೂಲೆಯ ಧಾರಣೆಯ ಪರಿಚಯವೂ, ಸಂಪೂರ್ಣ ವಾಗಿರುವ ಪಕ್ಷಕ್ಕೆ, ಒಬ್ಬ ಮಾರಾಟಗಾರ ಧಾರಣೆ ಇಳಿಸಿದೊಡನೆ ಎಲ್ಲ ಗಿರಾಕಿಗಳೂ ಅವನಿಗೆಯೇ ಒಲಿದು, ಒಂದೋ ಅವನ ಮಾಲು ಖರ್ಚಾಗು ವುದು, ಇಲ್ಲವೋ ಅವನೂ ತನ್ನ ಪ್ರತಿಸ್ಪರ್ಧಿ ಹೇಳುವಷ್ಟೇ ಧಾರಣೆ ಇಡ ಬೇಕಾಗುವುದು. ಇನ್ನೊಬ್ಬನು ಧಾರಣೆ ಏರಿಸಿದನೋ, ಅವನು ಅದನ್ನು ಇಳಿಸುವ ವರೆಗೆ ನೊಣ ಹೊಡೆಯಬೇಕು. ಇಲ್ಲಿ 'ಅ' ವರ್ತಕನ ಸರಕೂ, 'ಬ' ವರ್ತಕನ ಸರಕೂ ಏಕರೂಪದವು ಆಗಿದ್ದು, ಪರಿಪೂರ್ಣ ಪ್ರತಿಸ್ಪರ್ಧಾ ನಗಳಾಗಿರತಕ್ಕದ್ದು. ಟ್ರೇಡ್‌ಮಾರ್ಕು, ಜಾಹೀರಾತು, ವರ್ತಕನ ವಿಶೇಷ ಗುಣ–ಇವನ್ನೊಳಗೊಂಡ ಸರಕಿನ ಧಾರಣೆ ಮಾರ್ಕೆಟಿನ ಎಲ್ಲೆಡೆಯಲ್ಲಿಯೂ

ಒಂದೇ ಆಗುವುದವಶ್ಯವಿಲ್ಲ. ಏಕೆಂದರೆ ಜನರ ದೃಷ್ಟಿಯಲ್ಲಿ 'ಅ' ಸರಕು ಬೇರೆ; 'ಬ' ಸರಕು ಬೇರೆ.

ಚಿಲ್ಲರೆ ಮಾರ್ಕೆಟುಗಳು ಹೆಚ್ಚಾಗಿ, ಅಪರಿಪೂರ್ಣವಾಗಿರುತ್ತವೆ. ಹಾಪುರ ಮಾರ್ಕೆಟಿನಲ್ಲಿ ಗೋಧಿಯ ಬೆಲೆ ಒಂದೇ ಆಗಿರಬಹುದು; ಆದರೆ ಚಡಾವಿನ ಬೆಲೆ ನೆರೆಯಂಗಡಿಗಳಲ್ಲೇ ವಿವಿಧವಾಗಿರಬಹುದು. ಏಕೆಂದರೆ ಚಡಾವಿನಲ್ಲಿ ಬೇರೆ ಬೇರೆ ನಮೂನೆ ಉಂಟು. ಒಬ್ಬ ಮಾರಾಟಗಾರನು ಇನ್ನೊಬ್ಬ ಮಾರಾಟಗಾರನಿಗೆ ಹೇಳುವ ಧಾರಣೆಯಾಗಲೀ, ಒಬ್ಬ ಗಿರಾಕಿಗೆ ಇನ್ನೊಬ್ಬ ಗಿರಾಕಿಯು ಕೊಡಲು ಸಿದ್ಧವಿರುವ ಧಾರಣೆಯಾಗಲೀ ತಿಳಿದಿರುವುದಿಲ್ಲ.

ಟೆಲಿಫೋನ್, ಟೆಲಿಗ್ರಾಫ್, ಕೇಬಲ್, ಆಕಾಶವಾಣಿ ಮುಂತಾದ ವಾರ್ತಾ ಪ್ರಸಾರದ ಸಾಧನಗಳು ಬಳಕೆಯಲ್ಲಿ ಬಂದಮೇಲೆ, ಮಾರ್ಕೆಟುಗಳು ಹೆಚ್ಚುಹೆಚ್ಚು ಪರಿಪೂರ್ಣತೆ ಪಡೆದಿವೆ. ಆಸ್ಟ್ರೇಲಿಯದ ಉಣ್ಣೆಯ ಬೆಲೆ ಕ್ಷಣಮಾತ್ರದಲ್ಲಿ ಲಂಡನಿನ ಮಾರ್ಕೆಟಿಗೆ ತಿಳಿಯುವುದು. ಕರಾಚಿ ಮಾರ್ಕೆಟಿನ ಧಾರಣೆ ಮುಂಬಾಯಿಗೆ ಅದೇ ಕ್ಷಣ ಗೊತ್ತಾಗುವುದರಿಂದ ಸರಕಿನ ಧಾರಣೆಯಲ್ಲಿ ಸಮಾನತ್ವ ಉಂಟಾಗುತ್ತದೆ. ಮಾರಾಟಗಾರ ಕಡಿಮೆ ಬೆಲೆಗೆ ಕೊಡುವುದೂ ಇಲ್ಲ; ಗಿರಾಕಿ ಹೆಚ್ಚು ಧಾರಣೆಗೆ ಕೊಳ್ಳುವುದೂ ಇಲ್ಲ.

## ಮೂರನೆಯ ಅಧ್ಯಾಯ

# ಅನುಭೋಗ

### ಅನುಭೋಗ ಎಂದರೇನು?

ಅರ್ಥಶಾಸ್ತ್ರವನ್ನು ಮನುಷ್ಯನ ಪ್ರಾಪಂಚಿಕ ಕ್ಷೇಮದ ಕುರಿತಾದ ವಿಜ್ಞಾನ ಎಂದು ತಿಳಿಯುತ್ತಿದ್ದಾಗ ಪ್ರಾಪಂಚಿಕ ಕ್ಷೇಮವನ್ನುಂಟು ಮಾಡುವ ಸರಕು ಸೇವೆಗಳ ಉತ್ಪಾದನೆಯೇ ಅರ್ಥಶಾಸ್ತ್ರಿಗಳ ಅಭ್ಯಾಸದ ಮುಖ್ಯ ಗುರಿಯಾಗಿತ್ತು. ಅನುಭೋಗಕ್ಕೆ ಪ್ರಾಶಸ್ತ್ಯ ಇರಲಿಲ್ಲ ಅಲ್ಲದೆ ಅನುಭೋಗವು ಅರ್ಥಶಾಸ್ತ್ರದ ವೈಜ್ಞಾನಿಕ ಅಭ್ಯಾಸಕ್ಕೆ ಅನುಕೂಲವಾಗಿರಲಿಲ್ಲವೆಂದೂ, ಬರಿಯ ಸಾಮಾನ್ಯ ತಿಳಿವಳಿಕೆಯಿಂದಲೇ ಅನುಭೋಗವನ್ನರಿಯಬಹುದೆಂದೂ, ಅನುಭೋಗವು ಮನೆವಾರ್ತೆಯನ್ನು ನೋಡುವ ಗೃಹಿಣಿಯ ಅಧಿಕಾರಕ್ಷೇತ್ರವಾದುದರಿಂದ, ಅರ್ಥಶಾಸ್ತ್ರಿಗೆ ಅಲ್ಲಿ ಕೆಲಸವಿಲ್ಲೆಂದೂ, ಉಪೇಕ್ಷಾಭಾವ ಬೆಳೆದು, ಉತ್ಪಾದನೆ, ವಿತರಣೆ ಮತ್ತು ವಿನಿಮಯಗಳಿಂದಲೇ ಅರ್ಥಶಾಸ್ತ್ರಿ ತೃಪ್ತನಾಗಿರುತ್ತಿದ್ದನು. ಅನುಭೋಗದ ಕಡೆಗಿದ್ದ ಈ ಉಪೇಕ್ಷೆಯನ್ನು ನಿರಾಕರಿಸಿ, ಅದರ ಕಡೆಗೆ ಲಕ್ಷ್ಯ ಸೆಳೆದವರಲ್ಲಿ ಮಾರ್ಶಲ್ ಹೆಸರು ಮೊದಲು ಎತ್ತಬೇಕು. ಇಡಿಯ ಆರ್ಥಿಕ ವ್ಯವಸ್ಥೆಯು ನಡೆಯುವುದು ಮನುಷ್ಯನ ಇಚ್ಛೆಯನ್ನು ತೃಪ್ತಿಪಡಿಸುವುದಕ್ಕಾಗಿ ಇರುವಾಗ ಅರ್ಥಶಾಸ್ತ್ರದ ಅಭ್ಯಾಸವನ್ನು ಆರಂಭಿಸಲು ಅನುಭೋಗವೇ ತಕ್ಕ ಪೀಠಿಕೆ. ನಮ್ಮ ವಿಶ್ಲೇಷಣೆಯಲ್ಲಿ ಅನುಭೋಗವು ಎಂದರೆ ವ್ಯಕ್ತಿಪರ ಬೇಡಿಕೆಗಳೂ, ಅವುಗಳಿಂದುಂಟಾಗುವ ಸಮಸ್ಯೆಗಳೂ ಸರ್ವ ಪ್ರಥಮವಾಗಿರುವುವು. ಉತ್ಪಾದನೆ ಬರುವುದು ಆ ಮೇಲೆ ಎರಡನ್ನೂ ಜೋಡಿಸುವ ಸೇತುವೆ ಮೌಲ್ಯ ಸಿದ್ಧಾಂತ. ಆರ್ಥಿಕ ತತ್ತ್ವಗಳಲ್ಲಿ ಅನುಭೋಗವು ಮುಖ್ಯ ಭಾಗ. ನೈಟ್ ಹೇಳುವಂತೆ ಮಾನವ ಶಾಸ್ತ್ರವಾದ ಅರ್ಥಶಾಸ್ತ್ರವು, ಆರ್ಥಿಕ ಜೀವನವನ್ನು ನಿಯಂತ್ರಿಸುವ, ವ್ಯಕ್ತಿ ಸ್ವಭಾವ ನಿರೀಕ್ಷಣೆಯಲ್ಲಿಯೂ, ಮನೋವಿಜ್ಞಾನದಲ್ಲಿಯೂ ಆರಂಭವಾಗುವುದು ಸೂಕ್ತವಾಗಿದೆ.

**ಇಚ್ಛೆ–ಬೇಡಿಕೆಯ ಪ್ರಚೋದನೆ:**

ತೃಷ್ಣೆ ಅಥವಾ ಇಚ್ಛೆಯೇ ಸಂಸಾರದ ಮೂಲ ಎಂದು ಭಗವಾನ್ ಬುದ್ಧನು ನುಡಿದುದು ಅರ್ಥಶಾಸ್ತ್ರಗಳಿಗೆ ಸಮ್ಮತವಾದುದು. ಮನುಷ್ಯನಿಗೆ ವಿಪುಲವಾದ ಇಚ್ಛೆಗಳಿರುವುವು. ಪ್ರತಿಯೊಂದೂ ತನ್ನ ತೃಪ್ತಿಗಾಗಿ ಹಾತೊರೆಯುವುದು. ಇಚ್ಛೆ ಎಂದರೇನು?

(೧) ತೃಪ್ತಿಯ ಅಭಾವ ಇರುವುದೇ ಇಚ್ಛೆ. ಇದಕ್ಕೆ ಯಾವ ಧಾರ್ಮಿಕ, ನೈತಿಕ ಅರ್ಥವೂ ಇರುವುದು ಬೇಡ. ಬೇಕೆಂದು ತೋರುವುದು ಎಲ್ಲವೂ ಇಚ್ಛೆಯೇ. ಈ ಇಚ್ಛೆಗಳಿಗೋಸ್ಕರವಾಗಿಯೇ ಉತ್ಪಾದನೆ ನಡೆಯುವುದು.

(೨) ಇಚ್ಛೆಗಳು ಅನೇಕ, ಅಪರಿಮಿತ. ಇವು ಪ್ರಾಣಧಾರಣೆಗೆ ಆವಶ್ಯವಾದುವೂ, ಸೌಂದರ್ಯ ದರ್ಶನಕ್ಕೆ ಸಾಧನವಾದುವೂ, ಸ್ವಭಾವಜನ್ಯವಾದುವೂ, ಸಾಂಸ್ಕೃತಿಕವಾದುವೂ, ಮೂಢ ವಿಶ್ವಾಸದವೂ ಆಗಿರಬಹುದು. ನಾಡು ನಾಗರಿಕತೆಯಲ್ಲಿ ಮುಂದುವರಿದಂತೆ ಮೂಲ ಇಚ್ಛೆಗಳು ಕಡಿಮೆಯಾಗುವುವು. ಕೆಲವು ಸಲ ಮನುಷ್ಯನ ಒಂದು ಚಟುವಟಿಕೆಯ ದೆಸೆಯಿಂದಾಗಿ, ಹೊಸ ಇಚ್ಛೆಗಳು ಜನಿಸುವುದುಂಟು. ಮೋಟಾರು ಕಾರು ಇರುವವನಿಗೆ ಪೆಟ್ರೋಲಿನ ಇಚ್ಛೆ ಇರುವಂತೆ, ಮನೆ ಕಟ್ಟುವವನಿಗೆ ಹಂಚು ಬೇಕೆನಿಸಿದಂತೆ.

(೩) ಇಚ್ಛೆಗಳು ಅಪರಿಮಿತವಾಗಿದ್ದರೂ, ಅವುಗಳನ್ನು ತೃಪ್ತಿ ಪಡಿಸಲು ಸಾಧ್ಯವುಂಟು.

(೪) ಒಂದು ನಿಶ್ಚಿತ ಅವಧಿಯಲ್ಲಿ ನಮಗೆ ನಿಶ್ಚಿತ ಪರಿಮಾಣದ ಮೂಲಸಾಧನದಿಂದ ಇಚ್ಛಾತೃಪ್ತಿಯಾದರೂ, ನಮ್ಮ ಮುಖ್ಯ ಇಚ್ಛೆಗಳು ಮರಳಿ ಮರಳಿ ಉದ್ಭವಿಸುತ್ತವೆ. ಒಂದು ಸಲಕ್ಕೆ ಒಂದು ಲೋಟ ಕಾಫಿ ಸಾಕು. ನಾಳೆ ಮರಳಿ ಇನ್ನೊಂದು ಲೋಟ ಕಾಫಿ ಬೇಕೇಬೇಕು. ಈ ಮಳೆಗಾಲ ತೆಗೆದುಕೊಂಡ ಕೊಡೆ ಹೆಚ್ಚೆಂದರೆ ಮರು ಮಳೆಗಾಲ ನಿಂತೀತು, ಆ ಮೇಲೆ ಹೊಸ ಕೊಡೆ ಕೊಳ್ಳಬೇಕು. ಕೊಡೆಯ ಬಗ್ಗೆ ಜನರಿಗಿರುವ ಇಚ್ಛೆಯನ್ನು ಸಾಕಷ್ಟು ಪೂರ್ವದಲ್ಲೇ ಅಂದಾಜುಮಾಡಲು ಬರುವುದರಿಂದ ಇಂತಿಷ್ಟೇ ಕೊಡೆಗಳನ್ನು ತಯಾರಿಸೋಣ ಎಂದು ಉತ್ಪಾದಕನು ಲೆಕ್ಕ

ಹಾಕಬಲ್ಲನು. ಹತ್ತಿಪ್ಪತ್ತು ವರ್ಷಗಳಷ್ಟು ದೀರ್ಘಾವಧಿಯನ್ನು ದೃಷ್ಟಿಯಲ್ಲಿರಿಸಿಕೊಂಡರೆ, ನಮ್ಮ ಇಚ್ಛೆಗಳಿಗೆ ನಿರಂತರತೆಯ ಗುಣ ಬರುವುದು.

(೫) ಇಚ್ಛೆಗಳು ಪರಸ್ಪರ ಸ್ಪರ್ಧಿಸುವ, ಸಂಘರ್ಷಕ್ಕೆ ಬರುವ ಗುಣ ಉಳ್ಳವು, ಒಂದನ್ನು ಬಿಟ್ಟು ಇನ್ನೊಂದನ್ನು ಆರಿಸೋಣ, ಈ ಮಾರ್ಗ ಆ ಮಾರ್ಗಕ್ಕಿಂತ ಸಾಧುವಾದದ್ದು; ಆದ್ದರಿಂದ ಇದರಲ್ಲೇ ನಡೆಯೋಣ ಎಂಬ ವಿವೇಚನೆಯನ್ನು ನಾವು ಮಾಡದಿರುವುದಾದರೆ, ಇಚ್ಛೆಗಳು ಮನುಷ್ಯ ವರ್ತನೆಗೆ ಪ್ರಚೋದಕಗಳಾಗಲಾರವು. ಮೂಲಸಾಧನಗಳು ಒಂದು ಮಿತಿಯಲ್ಲಿ, ವಿರಳತ್ವದಲ್ಲಿ ಇರುವುದರಿಂದ ಯಾರ ಇಚ್ಛೆಗಳನ್ನು ಈಡೇರಿಸೋಣ ಎಂದೂ, ಅವನ್ನು ಯಾವ ಅನುಕ್ರಮದಲ್ಲಿ ಇರಿಸೋಣ ಎಂದೂ, ನಾವು ಯೋಚನೆಮಾಡಲು ಕಾರಣ. ಕಬ್ಬು ಜಾಸ್ತಿ ಬೆಳೆಯಿಸಬೇಕಾದರೆ ಭೂಮಿ ಎಲ್ಲಿಂದ ತರೋಣ, ಅಕ್ಕಿ ಬೆಳೆಯುವ ಭೂಮಿಯಲ್ಲಿ ಸ್ವಲ್ಪಾಂಶ ಈಚೆಗೆ ಎಳೆಯೋಣ ಎಂಬ ಹವಣಿಕೆ ಉಂಟಾಗುವುದಿಲ್ಲವೆ?

(೬) ಇಚ್ಛೆ ವಿಕಲ್ಪವಾಗಿರಬಹುದು. ಒಂದಕ್ಕೊಂದು ಪೂರಕವಾಗಿರಲೂ ಬಹುದು. ಅಂಗಡಿಯ ದೀಪಕ್ಕೆ ಒಮ್ಮೆ ೪೦ ಕಂದೀಲಿನ ಬತ್ತಿಯನ್ನೂ, ಒಮ್ಮೆ ೬೦ ಕಂದೀಲಿನ ಬತ್ತಿಯನ್ನೂ ಹಚ್ಚುವ ಇಚ್ಛೆ ಉಂಟಾದೀತು. ಆಫೀಸಿಗೆ ಒಮ್ಮೆ ಬಸ್ಸಿನಲ್ಲಿಯೂ, ಇನ್ನೊಮ್ಮೆ ಟಾಂಗಾದಲ್ಲಿಯೂ ಹೋಗುವ ಇಚ್ಛೆ ಮೂಡೀತು. ಪೆನ್ನಿನ ಇಚ್ಛೆಯ ಜೊತೆಗೆ ಶಾಯಿಯನ್ನು ಇಚ್ಛಿಸದವನು ಹುಚ್ಚನಲ್ಲವೆ? ಹಾಲುಬೇಕೆಂದು ದನವನ್ನು ತಂದು ಹಿಂಡಿ ಬೇಡವೆಂದರೆ ಹೇಗಾದೀತು? ಪೆನ್–ಶಾಯಿ; ದನ ಅಥವಾ ಹಾಲು–ಹಿಂಡಿ ಇವು ಒಂದಕ್ಕೊಂದು ಪೂರಕವಾದ ಇಚ್ಛೆಗಳು.

**ಬೇಡಿಕೆಯ ಸ್ವರೂಪ:**

ಒಂದು ನಿಶ್ಚಿತವಾದ ಧಾರಣೆ ಇರುವಾಗ ಒಂದು ವಸ್ತುವಿಗೆ ಇಂತಿಷ್ಟೇ ಬೇಡಿಕೆ ಇದೆ ಎಂದರೆ ಆ ಧಾರಣೆಯಲ್ಲಿಯೂ, ಆ ನಿಶ್ಚಿತ ಕಾಲಾವಧಿಯಲ್ಲಿಯೂ, ಜನರು ಕೊಂಡುಕೊಳ್ಳುವ ಪ್ರಮಾಣ ಬೇಡಿಕೆ ಎಂದೊಡನೆ ಇಂತಿಷ್ಟೇ ಧಾರಣೆಯಲ್ಲಿ ಇದ್ದ ಬೇಡಿಕೆ ಎಂದು ನಾವು ನೆನಸಿಕೊಳ್ಳಬೇಕು. ಭಾರತೀಯರಿಗೆ ಇಷ್ಟು ಗಜ ಬಟ್ಟೆಯ ಬೇಡಿಕೆ ಇದೆ ಎಂದರೆ ಸಾಲದು; ಯಾವ ಧಾರಣೆಯಲ್ಲಿ ಈ ಬೇಡಿಕೆ? ಧಾರಣೆಯು ಹೆಚ್ಚಾದರೆ ಬೇಡಿಕೆಯು

ಗಾತ್ರವೂ ಇಳಿಯುವುದಿಲ್ಲವೆ? ಕಡಿಮೆ ಆದರೆ ಏರುವುದಿಲ್ಲವೆ? ಪ್ರತಿಯೊಂದು ಸರಕಿನ ಬೇಡಿಕೆಯನ್ನು (ಅ) ಇಂಥ ಒಂದು ಧಾರಣೆ ಇದ್ದಾಗ (ಆ) ಇಂಥ ಒಂದು ಕಾಲಾವಧಿಯಲ್ಲಿ ಎಂದು ಗಡಿ ಕಟ್ಟಬೇಕು. ಬೆಲ್ಲಕ್ಕೆ ಸೇರಿಗೆ ೨ ಆಣೆ ಇದ್ದಾಗಿನ ಬೇಡಿಕೆ ೪ ಆಣೆ ಆದಾಗಿಲ್ಲ. ಈ ವರ್ಷದ ಬೇಡಿಕೆ ಬರುವ ವರ್ಷ ಇರಬೇಕೆಂದಿಲ್ಲ. ಸಕ್ಕರೆಯು ಪುಷ್ಕಳವಾಗಿಯೂ, ಬೆಲ್ಲಕ್ಕಿಂತ ಅಗ್ಗವಾಗಿಯೂ ಸಿಕ್ಕಿದರೆ ಅದನ್ನೇ ಜನರು ಕೊಂಡಾರು. ಅಲ್ಲದೆ ಒಟ್ಟಾರೆ 'ಬೇಡಿಕೆ' ಎಂಬುದು ಅರ್ಥಶೂನ್ಯವಾದ ಮಾತು. ವಾರಕ್ಕಿಷ್ಟು ತಿಂಗಳಿಗಿಷ್ಟು ಎಂದು ನಿಯಮಿತ ಕಾಲ ಸೂಚಿಸತಕ್ಕುದು ಇನ್ನೊಂದು ಮಾತು. ಬೇಡಿಕೆಯೆಂದರೆ ಬರಿಯ ಇಚ್ಛೆಯಲ್ಲ ನನಗೆ ಮೋಟಾರು ಕಾರನ್ನು ಕೊಳ್ಳಬೇಕೆಂಬ ಇಚ್ಛೆಯಿದೆ, ಆದರೆ ನಾನು ಹತ್ತು ಸಾವಿರ ರುಪಾಯಿ (ಕದ್ದುಕೊಂಡೇ ಆದರೂ) ಕಿಸೆಗೆ ತುಂಬಿಕೊಂಡು ಫೋರ್ಡ್ ಏಜಂಟರಲ್ಲಿಗೆ ಹೋದರೆ ಮಾತ್ರ ಆಗ ನನ್ನ ಇಚ್ಛೆ ಬೇಡಿಕೆಯಾಗುವುದು. ಇಚ್ಛೆಗೆ ಗ್ರಾಹಕ ಶಕ್ತಿಯು ಬೆಂಗಾವಲಿದ್ದರೆ, ಆಗ ಮಾತ್ರ ಅದು ಬೇಡಿಕೆಯಾದೀತು. ನಿಶ್ಚಿತವಾದೊಂದು ಕಾಲಾವಧಿಯಲ್ಲಿ ಸರಕಿನ ಬೇಡಿಕೆಯನ್ನು ಅರಿಯಬೇಕಾದರೆ ಧಾರಣೆಗಳ ಒಂದು ಪಟ್ಟಿಯನ್ನು ಕೊಟ್ಟು ಪ್ರತಿಯೊಂದು ಧಾರಣೆಗೂ ಬೇಡಿಕೆ ಹೇಗೆ ಬದಲಿಸುವುದು ಎಂಬುದನ್ನು ಕೋಷ್ಟಕದಂತೆ ನಮೂದಿಸುವುದು ಅಗತ್ಯವಾಗುವುದು. ಆದರೆ ಇಲ್ಲಿ ಒಂದು ವಿಷಯ. ಮಾರಾಟದ ಗಾತ್ರ ಅಥವಾ ಬೇಡಿಕೆಯ ಗಾತ್ರವು ಬರಿಯ ಬೇಡಿಕೆಯೊಂದರ ಮೇಲೆ ಮಾತ್ರ ಅವಲಂಬಿಸಿಲ್ಲ. (೧) ಅನುಭೋಗಿ ಜನಗಳ ಸಂಖ್ಯೆ. (೨) ಅವರ ಹಣ ವರಮಾನ. (೩) ಅವರ ಅಭಿರುಚಿ. (೪) ಈ ಸರಕಿನೊಡನೆ ಸ್ಪರ್ಧಿಸಬಲ್ಲ ಇತರ ಸರಕುಗಳ ಧಾರಣೆ— ಇವುಗಳ ಮೇಲೆ ಹೊಂದಿಕೊಂಡಿದೆ. ಇವನ್ನೆಲ್ಲ ಒಳಗೊಂಡು ತಯಾರಿಸಿದ ಬೇಡಿಕೆಯ ಕೋಷ್ಟಕದಲ್ಲಿ ಸೊನ್ನೆ ಧಾರಣೆಯಿಂದ ಆರಂಭಿಸಿ, ಬೇಡಿಕೆಯು ಸೊನ್ನೆ ಆಗುವ ವರೆಗಿನ ಬೇಡಿಕೆಯ ಗಾತ್ರದ ಲೆಕ್ಕ ಇರಬೇಕಾಗುವುದು. ನಮ್ಮ ವಿಶ್ಲೇಷಣೆಯ ಬಗ್ಗೆ ನಾವು ಧಾರಣೆ ಒಂದನ್ನೇ ಬೇರ್ಪಡಿಸಿ, ಇತರ ಸನ್ನಿವೇಶಗಳೆಲ್ಲ ಅಪರಿವರ್ತನೀಯಗಳೆಂದು ಭಾವಿಸಿ, ಧಾರಣೆಗೂ ಬೇಡಿಕೆಯ ಗಾತ್ರಕ್ಕೂ, ಇರುವ ಸಂಬಂಧವನ್ನು ಪರಿಶೀಲಿಸೋಣ.

ಬೇಡಿಕೆಯು ವಿಭಾಜ್ಯವೆಂದೂ, ನಿರಂತರವೆಂದೂ ಬಗೆದು ಬೇಡಿಕೆ ಕಮಾನೊಂದನ್ನು ರಚಿಸೋಣ. ತಲಾಕ್ಷದಲ್ಲಿ ಮಾರಾಟದ ಗಾತ್ರ (ಬೇಡಿಕೆಯಗಾತ್ರ) ವನ್ನೂ, ಲಂಬಾಕ್ಷದಲ್ಲಿ ಏಕಾಂಶದ ಧಾರಣೆಯನ್ನೂ ತೆಗೆದುಕೊಂಡರೆ ಬೇಡಿಕೆ ಕಮಾನು ಎಡದಿಂದ ಬಲಕ್ಕೆ ಇಳಿಯುವುದನ್ನು ನೋಡಬಹುದು. ಬೇಡಿಕೆಯ ಸನ್ನಿವೇಶವು ಪರಿವರ್ತನೆಗೊಳ್ಳದೆ ಹಾಗೆಯೇ ಇರುವಾಗ ಧಾರಣೆಯು ಹೆಚ್ಚಾದರೆ, ಜನರ ಬೇಡಿಕೆ ಕುಗ್ಗುವುದೆಂದು ಇದರ ಅರ್ಥ. ಧಾರಣೆ ಏರಿದಾಗ ಬೇಡಿಕೆಯು ಕುಗ್ಗುವುದು; ಧಾರಣೆ ಇಳಿದಾಗ ಬೇಡಿಕೆಯು ಹಿಗ್ಗುವುದು.




ಈ ವರ್ತನೆಯನ್ನು ಮಾರ್ಶಲನು 'ಬೇಡಿಕೆಯ ನಿಯಮ' ಎಂದು ಕರೆದಿರುವನು. 'ಅಧಿಕಪ್ರಮಾಣದಲ್ಲಿ ಸರಕು ಖರ್ಚಾಗಬೇಕಿದ್ದರೆ ಹೇಳುವ ಧಾರಣೆಯು ಅಷ್ಟೇ ಕಡಿಮೆಯಾಗಿರಬೇಕು. ಅಂದರೆ, ಬೇಡಿಕೆಯ ಪರಿಮಾಣವು ಧಾರಣೆಯ ಇಳಿತದಿಂದ ಹೆಚ್ಚುವುದೂ, ಧಾರಣೆಯ ಏರಿಕೆಯಿಂದ ಇಳಿಯುವು

ದೊ ಸ್ವಭಾವ"  ಧಾರಣೆಯ ಇಳಿತಕ್ಕೂ ಬೇಡಿಕೆಯ ಹೆಚ್ಚಳಕ್ಕೂ ಏಕ ರೂಪದ ಸಂಬಂಧವನ್ನು ಕಲ್ಪಿಸಬರುವುದೆಂದು ಯಾರೂ ಭಾವಿಸ ಕೂಡದು. ನಿಶ್ಚಿತ ವರಮಾನವುಳ್ಳ ಅನುಭೋಗಿಯೊಬ್ಬನು ಮಾರ್ಕೆಟಿಗೆ ಹೋಗುತ್ತಾನೆಂದು ಇಟ್ಟುಕೊಳ್ಳುವ  ಅವನು ಅಲ್ಲಿ ಒಂದು ಸರಕಿನ ಮೇಲೆಯೆ ಹೆಚ್ಚು ಹಣ ಖರ್ಚು ಮಾಡಿದರೆ, ಉಳಿದ ಸರಕುಗಳಿಗೆ ಕೊಡಲು ಅವನ ಹತ್ತಿರ ಇರುವ ಹಣವು ಅಷ್ಟೇ ಕಡಿಮೆಯಾಗುವುದು  ಆ ಸರಕಿನ ಮೇಲೆ ಅವನು ಮಾಡಿದ ವ್ಯಯವು ಅವನ ಒಲವಿನ ಮಾನದಂಡದ ಪ್ರತಿಬಿಂಬವಾಗುವುದು. ವ್ಯಕ್ತಿಯ ವರಮಾನವೂ, ಒಲವಿನ ಮಾನದಂಡವೂ ನಮಗೆ ತಿಳಿದರೆ ವಿವಿಧ ಉತ್ಪತ್ತಿಗಳಿಗೆ ಅವನ ವಿವಿಧ ಬೇಡಿಕೆಗಳನ್ನು ಕಂಡು ಹಿಡಿಯಬಲ್ಲೆವು. ಗಿರಾಕಿಯ ಒಲವಿನ ಮಾನದಂಡವು ಅವನ ಅಭಿರುಚಿಯ ಪರಿಮಾಣಾತ್ಮಕವಾದ ಅಭಿವ್ಯಂಜನೆ

**ಒಲವಿನ ಮಾನದಂಡ:**

ಮನೆಯಲ್ಲಿಯೂ ಮಾರ್ಕೆಟಿನಲ್ಲಿಯೂ ತನ್ನಲ್ಲಿರುವ ಹಣ ತನ್ನನ್ನು ಆದಷ್ಟು ದೂರ ಒಯ್ಯಬೇಕು, ಅದರಿಂದ ಅಧಿಕಾಧಿಕ ಉಪಯೋಗ ದೊರೆಯಬೇಕು ಎಂಬುದೇ ಅನುಭೋಗಿಯ ಚಿಂತೆ. ಪರಿಮಿತವಾದ ಸಂಪತ್ತನ್ನು ಅತಿ ಹೆಚ್ಚು ಉಪಯೋಗ ಬರುವಂತೆ ಬಳಸಿಕೊಳ್ಳುವುದು ಸದ್ಯದ ಪ್ರಶ್ನೆ. ಇದ್ದ ಸಂಪತ್ತಿನಲ್ಲಿ ಅತಿಶಯ ಉಪಯೋಗದ ಸರಕು ಸೇವೆಗಳ ಜೋಡಣೆ ದೊರೆಯ ಬೇಕಾದರೆ ಬೇರೆ ಬೇರೆ ಸರಕುಗಳನ್ನು ಮಾರುವ ಶರ್ತಗಳು, ಧಾರಣೆಗಳು ಮುಖ್ಯ. ಮಾರ್ಕೆಟಿನಲ್ಲಿ ಧಾರಣೆಯೇ ಈ ಶರ್ತದ ಅಭಿವ್ಯಕ್ತಿ. ಹಣದಲ್ಲಿ ಧಾರಣೆ ಹೇಳುವುದೇ ಪ್ರಥಮ ಸೂಚಿ. ಎರಡನೆಯದಾಗಿ ಇತರ ಸರಕುಗಳ ಬೆಲೆಯನ್ನೂ ಅವಲೋಕಿಸದೆ ಸಾಧ್ಯವಿಲ್ಲ. ಮೂರನೆಯದಾಗಿ ಗೌರವ, ಗೆಳೆತನ, ನಂಟು ಮುಂತಾದ ಗೌಣ ವಿಷಯಗಳನ್ನೂ ಬಿಟ್ಟುಹಾಕುವಂತಿಲ್ಲ. ಕೊಳ್ಳುವ ನಿರ್ಧಾರವು ಅವಿಚಾರ, ಅತಿವಿಚಾರ, ನಿರ್ವಿಚಾರ, ಸುಯೋಜನೆಗಳ ಪೈಕಿ ಹೇಗೆ ಹೊರಟಿದ್ದರೂ ಸರಿಯೆ, ಧಾರಣೆಯ ತತ್ತ್ವವೇ ವರ್ತನೆಯನ್ನು ನಿರೂಪಿಸುವುದು. ವಿಕಲ್ಪಗಳು ನಮ್ಮ ಮುಂದೆ ಬರುವುದರಿಂದಲೇ ನಿರ್ಧಾರಕ್ಕೆ ಅವಕಾಶ; ಆಯ್ಕೆಗೆ ಎಡೆ. ಈ ದೃಷ್ಟಿಯಿಂದ ವಿಚಾರಿಸುವಾಗ ಧಾರಣೆಯು ಬರೇ ನಾವು ತೆರುವ ಹಣ

ವಲ್ಲೆಂದೂ, ವಿಕಲ್ಪ ಸರಕುಗಳು ದೊರೆಯುವ ಶರ್ತವೆಂದೂ ತಿಳಿಯತಕ್ಕುದು. ಒಲವಿನ ಸಾಮಾನ್ಯ ಮಾನದಂಡ ಒಂದನ್ನು ನಾವು ನಿರ್ಮಿಸಿದರೆ ಒಂದು ವಸ್ತುವನ್ನವಲಂಬಿಸಿ, ಇನ್ನೊಂದನ್ನು ತೊರೆಯುವ ಶರ್ತ ಯಾವುದು ಎಂಬುದು ವಿದಿತವಾಗುವುದು.

ಮಾರ್ಕೆಟಿಗೆ ಒರುವ ಸ್ಥಿರವರಮಾನವುಳ್ಳ ಅನುಭೋಗಿ ತನ್ನ ಒಲವಿನ ಮಾನದಂಡದ ಪ್ರಕಾರ ಅತಿಶಯ ತೃಪ್ತಿದೊರೆಯುವಂತೆ ತನ್ನ ವ್ಯಯವನ್ನು ಪಾಲುಮಾಡಿ ಹಾಕುವನು ಅವನು ಕೊಂಡ ಸರಕು ಅಥವಾ ಮಾಡಿಸಿದ ಸೇವೆಯ ಮೊತ್ತವು ಅವನಿಗೆ ಇತರ ಸರಕು ಸೇವೆಗಳ ಮೊತ್ತಕ್ಕಿಂತ ಹೆಚ್ಚು ತೃಪ್ತಿದಾಯಕವಾಗಿರುವುದು. ಪರಮಾವಧಿ ತೃಪ್ತಿಯು ನಮ್ಮ ಪ್ರಥಮ ಸೂತ್ರ ಪರಮಾವಧಿ ಉಪಯುಕ್ತತೆ ಬರುವಹಾಗೆ ಅನುಭೋಗಿಯು ತನ್ನ ವ್ಯಯವನ್ನು ಪಾಲುಮಾಡಿ ಹಾಕುವನಷ್ಟೆ.

## ಉಪಯುಕ್ತತೆ ಎಂದರೇನು?

ಬುದ್ಧಿಯುಕ್ತವಾದ ಬೇಡಿಕೆಯನ್ನು ತೃಪ್ತಿಗೊಳಿಸುವುದು ಅಥವಾ 'ಇದು ನನಗೆ ಬೇಕು' ಎಂಬಲ್ಲಿರುವ ಗುಣವು ಅರ್ಥಶಾಸ್ತ್ರದಲ್ಲಿ 'ಉಪಯುಕ್ತತೆ' ಎಂದು ಕರೆಯಲ್ಪಡುವುದು. ಉಪಯುಕ್ತತೆಗೆ ಇಚ್ಛೆಯ ಗುಣ ಲಕ್ಷಣಗಳೇ ಇವೆ ಇದಕ್ಕೂ ಧರ್ಮನೀತಿಗಳ ಸೋಂಕು ತಗಲುವುದಿಲ್ಲ. ರಾಮನಿಗೆ ಸಿಗರೇಟು ಸೇದುವುದಕ್ಕಿಂತ ಬಾಳೆಯಹಣ್ಣು ತಿನ್ನುವುದು ಆರೋಗ್ಯಕರವೆಂಬುದು ತಿಳಿದಿರಲಿ, ತಿಳಿಯದಿರಲಿ; ಅವನು ಸಿಗರೇಟು ಕೊಂಡದ್ದೊಂದೇ ನಮಗೆ ಮುಖ್ಯ- ಅವನ ಹಿರಿಯರು ಸಿಗರೇಟು ಸೇದುವುದು ಅಧರ್ಮವೆಂದೂ, ಅನೈತಿಕವೆಂದೂ, ಅವನನ್ನು ಬಯ್ದರೆ ನಾವು ಅದರಿಂದ ಪಾತಕಲಿಯುವ ಅವಶ್ಯವಿಲ್ಲ. ಜನರು ಹೇಗೆ ವರ್ತಿಸಬೇಕು ಎಂದು ನೀತಿಶಿಕ್ಷಣಕೊಡುವ ಕೆಲಸ ನಮ್ಮದಲ್ಲ; ಅವರು ಸ್ವಾಭಾವಿಕವಾಗಿ ಪ್ರಪಂಚದಲ್ಲಿ ಹೇಗೆ ವರ್ತಿಸುವರು ಎಂಬುದನ್ನು ನಿರೀಕ್ಷಿಸುವುದಷ್ಟೇ ನಮ್ಮ ಕೆಲಸ. ಆದುದರಿಂದ 'ರಾಮನು ಸಿಗರೇಟು ಸೇದಿದನು' ಎಂಬ ಮಾತಿನಿಂದ ನಾವು ತಿಳಿಯುವುದೇನೆಂದರೆ ಬಾಳೆಯ ಹಣ್ಣಿಗಿಂತ ರಾಮನಿಗೆ ಸಿಗರೇಟಿನ ಕಡೆಗೆ ಒಲವು ಅಧಿಕವಾಗಿದೆ, ಅವನಿಗೆ ಸಿಗರೇಟಿನ

ಉಪಯುಕ್ತತೆಯು ಬಾಳೆಯಹಣ್ಣಿನ ಉಪಯುಕ್ತತೆಗಿಂತ ಹೆಚ್ಚೆಂದು ಕಂಡಿದೆ ಎಂದಿಷ್ಟು ಮಾತ್ರ

ಇಚ್ಛೆಯಂತೆ ಉಪಯುಕ್ತತೆಯೂ ಪರಿಮಾಣವಲ್ಲ. ಇಚ್ಛೆಯು ಸಂಘರ್ಷಣೆಯಿಂದ ಬರುವುದು; ಉಪಯುಕ್ತತೆಯು ಪರಿಮಿತಿಯಿಂದುಂಟಾಗುವುದು. ಇಚ್ಛಾಪೂರ್ತಿಗಾಗಿ ಸರಕನ್ನು ಅಧಿಕ ಪ್ರಮಾಣದಲ್ಲಿ ಪೂರೈಸುತ್ತಾ ಬಂದಂತೆ, ಸರಕಿನ ಸದ್ಯದ ಉಪಯುಕ್ತತೆಯು ಕ್ಷೀಣಿಸುವುದು. ಈ ದೃಷ್ಟಿಯಿಂದ ಗಾಳಿ, ಬೆಳಕು ಮುಂತಾದ ಪುಕ್ಕಟೆ ವಸ್ತುಗಳಿಗೆ ಉಪಯುಕ್ತತೆಯು ಶೂನ್ಯವಾಗಿರುವುದು. ಉಪಯುಕ್ತತೆಯನ್ನು ನಾವು ಅಳೆಯಲಾರೆವು. ಅದು ಯಾವಾಗಲೂ ಸಾಪೇಕ್ಷವಾಗಿರುವುದು. ಒಬ್ಬ ವ್ಯಕ್ತಿಗೆ ಎರಡು ಭಿನ್ನ ಸರಕುಗಳಿಂದ ಬರುವ ಉಪಯುಕ್ತತೆಯನ್ನೂ, ಒಂದೇ ಸರಕಿನಿಂದ ಎರಡು ಕಾಲಪ್ರಮಾಣದಲ್ಲಿ ಬರುವ ಉಪಯುಕ್ತತೆಯನ್ನೂ, ಒಂದು ಸರಕಿನಿಂದ ಎರಡು ವ್ಯಕ್ತಿಗಳಿಗಿರುವ ಉಪಯುಕ್ತತೆಯನ್ನೂ ಅಳೆಯಲು ಅರ್ಥಶಾಸ್ತ್ರದಲ್ಲಿ ಯಾವ ಸಾಧನವೂ ಇಲ್ಲ. ವಿದ್ಯುದ್ದೀಪದ ಉಪಯುಕ್ತತೆಯನ್ನು ಗ್ಯಾಸ್ ದೀಪದ ಉಪಯುಕ್ತತೆಗೂ. ಕಲ್ಲಿದ್ದಲಿನ ಉಪಯುಕ್ತತೆಯನ್ನು ಕಟ್ಟಿಗೆಯ ಉಪಯುಕ್ತತೆಗೂ ಸಂಬಂಧಿಸಿಕೊಂಡೇ, ಸಾಪೇಕ್ಷವಾಗಿಯೇ, ನಿರೂಪಿಸಬೇಕು. ಉಪಯುಕ್ತತೆ ನಿರಂಕುಶವಲ್ಲ.

ಅನುಭೋಗಿಯು ಪರಮಾವಧಿ ಉಪಯುಕ್ತತೆಯನ್ನು ಯಾವಾಗ ಪಡೆಯುತ್ತಾನೆ ಎಂಬುದನ್ನು ವಿಚಾರಿಸುವ. ಅವನು ಇದೀಗ ತೃಪ್ತಿಪಡಿಸಿಕೊಂಡ ಇಚ್ಛೆಯು, ತೃಪ್ತಿಗೊಳಿಸದೆ ಬಿಟ್ಟ ಇಚ್ಛೆಗಿಂತ ಹೆಚ್ಚು ಮಹತ್ತ್ವದ್ದೆಂದು ಕಂಡುಬಂದಾಗ ಉಪಯುಕ್ತತೆಯು ಪರಮಾವಧಿಯಲ್ಲಿರುವುದು. ತನ್ನ ವರಮಾನವನ್ನು ವಿವಿಧ ವ್ಯಯಮಾರ್ಗಗಳಲ್ಲಿ ಹೂಡುವಾಗ ತಾನು ಒಂದನೆಯ ಮಾರ್ಗದಲ್ಲಿ ವ್ಯಯಿಸುವ ಆಣೆಯಿಂದಲೂ, ಎರಡನೆಯದರಲ್ಲಿ ಹಾಕುವ ಆಣೆಯಿಂದಲೂ ಬರುವ ಉಪಯುಕ್ತತೆಯು ಸಮಾನವಾಗುವಂತೆ ಆತನು ನೋಡಿಕೊಳ್ಳಬೇಕು. ವ್ಯಯವಾದ ಒಂದಾಣೆಗೆ ಮೂರನೆಯ ದಾರಿಯಲ್ಲಿ ಅಧಿಕ ಉಪಯುಕ್ತತೆ ಸಿಗುವಂತಿದ್ದರೆ ಆ ಆಣೆ ಮೂರನೆಯ ಹಾದಿಯನ್ನೇ ಹಿಡಿಯತಕ್ಕದು. ಪರಮಾವಧಿ ಉಪಯುಕ್ತತೆಯ ಬಿಂದುವಿನಲ್ಲಿ ಅವನು ಕೊಳ್ಳುವ ಪ್ರತಿಯೊಂದು ಸರಕಿನ ಅತಿ ಚಿಕ್ಕ ಪರಿಮಾಣಗ

ಳಿಗೂ ಒಂದೇ ಉಪಯುಕ್ತತೆ ಇರತಕ್ಕುದು. ಇದಕ್ಕೆ 'ಸಮಾನಪರಿಸರದ ಉಪಯುಕ್ತತೆ' ಎನ್ನುತ್ತಾರೆ.

**ಪರಿಸರದ ಉಪಯುಕ್ತತೆ:**

ಸರಕಿನ ಸಂಗ್ರಹದಲ್ಲಿ ಸ್ವಲ್ಪ ಹೆಚ್ಚು ಸ್ವಲ್ಪ ಕಡಿಮೆ ಆಗುವುದಕ್ಕೆ ಪರಿಸರದ ಸನ್ನಿವೇಶವೆಂದು ಕರೆಯಬಹುದು. ಉತ್ಪಾದಕನು ತಯಾರಿಸುವ ಕಟ್ಟಕಡೆಯ ಸರಕಿನಿಂದ ಬರುವ ಉಪಯುಕ್ತತೆ ಪರಿಸರದ ಉಪಯುಕ್ತತೆ. ನೂರು ಗಜ ಬಟ್ಟೆಯನ್ನು ಸಂಗ್ರಹವಾಡಿದ ಅನುಭೋಗಿ ಮತ್ತೆ ಹತ್ತು ಗಜವನ್ನು ಕೊಂಡಾಗ, ಕೊನೆಯ ಹತ್ತುಗಜದಿಂದ ಪಡೆಯುವ ಉಪಯುಕ್ತತೆ ಪರಿಸರದ ಉಪಯುಕ್ತತೆ. ಆ ಹತ್ತು ಗಜ ಕೊಳ್ಳುವಾಗ ಅನುಭೋಗಿ ಕೊಂಚ ವಿಮರ್ಶೆಮಾಡುತ್ತಾನೆ: ಹತ್ತು ಗಜ ಬಟ್ಟೆಗಿಂತ ಮಕ್ಕಳಿಗೆ ಎರಡು ಗೊಂಬೆ ತರಲೇ? ಮಿಠಾಯಿ ಕೊಳ್ಳಲೇ? ಒಂದು ಕುತ್ತಿ ತುಪ್ಪ ತೆಗೆದುಕೊಳ್ಳಲೇ? ಕಟ್ಟಕಡೆಗೆ ಹತ್ತು ಗಜ ಬಟ್ಟೆಗೆಯೇ ಅವನೊಲಿದರೆ, ಹತ್ತುಗಜ ಬಟ್ಟೆಯ ಪರಿಸರದ ಉಪಯುಕ್ತತೆಯು ಈ ಎಲ್ಲ ಸರಕುಗಳ ಪರಿಸರದ ಉಪಯುಕ್ತತೆಗಿಂತ ಅಧಿಕವೆಂದು ನಾವು ತಿಳಿಯಬಹುದು. ಆದುದರಿಂದ ಒಂದು ಸರಕಿನ ಪರಿಸರದ ಉಪಯುಕ್ತತೆ ಎಂದರೆ ಅದರ ಕಟ್ಟಕಡೆಯ ಅಳತೆ ಯಾ ತೂಕದ (ಏಕಾಂಶದ) ಉಪಯುಕ್ತತೆ ಎಂದು ಕರೆಯುವ ಮನಸ್ಸಾದರೂ ಸರಕಿನ ಮೊದಲನೆಯ ಏಕಾಂಶಕ್ಕೂ, ಕೊನೆಯ ಏಕಾಂಶಕ್ಕೂ ಯಾವ ಬಗೆಯ ಭೇದವೂ ಇಲ್ಲದಿರುವುದರಿಂದಲೂ, ಉಪಯುಕ್ತತೆಯು ಅಳತೆಗೆ ಒಳಪಡದೆ ಬೇರೊಂದು ಸರಕಿನ ಉಪಯುಕ್ತತೆಗೆ ಸಾಪೇಕ್ಷವಾಗಿರುವುದರಿಂದಲೂ, ಈ ಪದಲಕ್ಷಣವು ಅಷ್ಟೊಂದು ಒಪ್ಪುವುದಿಲ್ಲವೆಂದು ತೀರ್ಮಾನಿಸಬೇಕಾಗಿದೆ.

**ಕ್ಷೀಣವಾಗುವ ಪರಿಸರದ ಉಪಯುಕ್ತತೆ.**

ಹಾಗಾದರೆ ಸಮಾನ ಪರಿಸರದ ಉಪಯುಕ್ತತೆಯ ಬಿಂದು ಬಂದೊಡನೆ ಅನುಭೋಗಿಯು ತಟಸ್ಥನಾಗುವುದೇಕೆ? ಎಂಬ ಪ್ರಶ್ನೆಯು ನಮ್ಮ ಮುಂದೆ ಬರುವುದು. ಇದಕ್ಕೆ 'ಕ್ಷೀಣವಾಗುವ ಪರಿಸರದ ಉಪಯುಕ್ತತೆ' ಯೇ ಉತ್ತರ. ಯಾವುದಾದರೂ ಒಂದು ಬೇಡಿಕೆಯನ್ನು ಬಿಟ್ಟು,

ಇನ್ನೊಂದು ಬೇಡಿಕೆಯನ್ನು ಈಡೇರಿಸಿಕೊಂಡರೆ ಈಡೇರಿಸಿದ ಬೇಡಿಕೆಯ ಒತ್ತಾಯವು ಕ್ಷೀಣಿಸುವುದೆಂದೂ, ಈಡೇರದ ಬಯಕೆಯ ಒತ್ತಾಯವು ವರ್ಧಿಸುವುದೆಂಬುದೂ, ಅಥವಾ ತೃಪ್ತಿಗೊಳಿಸುವ ಸಾಧನದ ಕಡೆಯಿಂದ ನೋಡಿದರೆ, ಒಂದರ ಉಪಯುಕ್ತತೆಯು ಕ್ಷೀಣಿಸಿ ಇನ್ನೊಂದರದು ಬೆಳೆಯುವುದೆಂಬುದೂ ಸರ್ವ ಸಾಧಾರಣವಾಗಿ ಎಲ್ಲರಿಗೂ ಸ್ಪಷ್ಟವಾಗಿ ತಿಳಿದಿರುವ ಸಂಗತಿ ಇದನ್ನು ಅರ್ಥಶಾಸ್ತ್ರದಲ್ಲಿ 'ಕ್ಷೀಣವಾಗುವ ಪರಿಸರದ ಉಪಯುಕ್ತತೆ' ಎನ್ನುತ್ತಾರೆ. ಸಿಶ್ಚಿತ ಅಭಿರುಚಿಯುಳ್ಳ ಮನುಷ್ಯನಿಗೆ ಆರು ಡಜನ್ ಕಿತ್ತಳೆ ತೆಗೆದುಕೊಂಡ ಬಳಿಕ ಏಳನೆಯ ಡಜನ್‌ನಲ್ಲಿ ಆಸಕ್ತಿ ಕಡಿಮೆಯಾಗುವುದೂ, ಅದಕ್ಕಿಂತ ಅರ್ಧ ಡಜನ್ ಸೇಬು ಹಣ್ಣಿನಲ್ಲಿ ಆಸಕ್ತಿ ಅಧಿಕವಾಗಿರುವುದೂ ಯಾರಿಗೆ ಗೊತ್ತಿಲ್ಲ? ಒಂದೇ ಸರಕನ್ನು ಕೊಳ್ಳುತ್ತ ಹೋದಂತೆ ಅದರ ಪರಿಸರದ ಉಪಯುಕ್ತತೆ ಇತರ ಸರಕುಗಳ ಪರಿಸರದ ಉಪಯುಕ್ತತೆಗೆ ಸಾಪೇಕ್ಷವಾಗಿ ಕ್ಷೀಣವಾಗುವುದು ಎರಡು ಕುತ್ತಿ ತುಪ್ಪ ತಿನ್ನುವ ಅವಸರದಲ್ಲಿ ಆತ ಮನೆಗೆ ಹಾಲಿನ ಸರಬರಾಯಿ ಕಡಿಮೆ ಮಾಡಿದರಂತೂ ಇದು ಇನ್ನಷ್ಟು ಸ್ಪಷ್ಟವಾಗುವುದು. ಕಡಿಮೆ ಮಾಡಲಾದ ಸರಕಿನ ಉಪಯುಕ್ತತೆ ಅಧಿಕವಾಗುವುದು; ಹೆಚ್ಚಿಸಿದ ಸರಕಿನ ಉಪಯುಕ್ತತೆ ಕ್ಷೀಣಿಸುವುದು. ಉಪಯುಕ್ತತೆಯನ್ನು ಅಳೆಯಲು ಆಗುತ್ತದೆ ಎಂದು ಮಾರ್ಶಲ್ ಎಣಿಸಿದುದು ತಪ್ಪು ಈಚೆಗಿನ ಅರ್ಥಶಾಸ್ತ್ರಿಗಳೆಲ್ಲರೂ ಉಪಯುಕ್ತತೆಯ ಸಾಪೇಕ್ಷಭಾವವನ್ನೂ, ಅದು ಅಳತೆಗೆ ಒಳಪಡದಿರುವುದನ್ನೂ ಸಿಚ್ಛಳವಾಗಿ ವಿವರಿಸುವರು. "ಪರಸ್ಪರ ಸ್ಪರ್ಧಿಸುವ ಕ್ಷೇತ್ರಗಳಲ್ಲಿ ಪರಿಮಿತವಾದ ಮೂಲ ಸಾಧನಗಳನ್ನು ಉಪಯೋಗಿಸುವಾಗ ನಾವು ಬಳಸುವ ಸಮಾನ ಪರಿಮಾಣದ ಮೂಲ ಸಾಧನಗಳು ಪ್ರತಿಯೊಂದು ಕ್ಷೇತ್ರದಲ್ಲಿಯೂ ಸಮಾನ ಫಲಿತಾಂಶವನ್ನು ತರುವಂತೆ, ನಾವು ಅವನ್ನು ವಿಕಲ್ಪ ಉಪಯೋಗಗಳಿಗೆ ಹಂಚಿ ಹಾಕುತ್ತೇವೆ", ಎಂದು ನೈಟ್ ಹೇಳುತ್ತಾನೆ.

ಬೇಡಿಕೆಯ ಕಮಾನು ಕೆಳಗೆ ಇಳಿಯುವುದೇಕೆ? ಒಂದು ಸರಕಿನ ಧಾರಣೆ ಇತರ ಸರಕುಗಳ ಧಾರಣೆಗಿಂತ ಕೆಳಗೆ ಇಳಿದರೆ, ಆ ಸರಕಿನ ಮೇಲೆ ಉಪಯೋಗಿಸುವ ಒಂದಾಣೆಗೆ ಹೆಚ್ಚು ಸರಕು ಬರುವುದರಿಂದ ಒಂದಾಣೆಯ ಉಪಯುಕ್ತತೆ ಅಲ್ಲಿ ಹೆಚ್ಚು. ಉಪಯುಕ್ತತೆಯು ಸಮಾನವಾಗಬೇಕಾದರೆ

ಆ ಸರಕಿನಮೇಲೆ ಹೆಚ್ಚು ಹಣವನ್ನು ವ್ಯಯಮಾಡಬೇಕು. ವ್ಯಯವು ಅಧಿಕವಾಗುತ್ತ ಹೋದಂತೆ ಆ ಸರಕಿನ ಉಪಯುಕ್ತತೆ ಇತರ ಸರಕುಗಳ ಉಪಯುಕ್ತತೆಗಿಂತ ಕಡಿಮೆಯಾಗುವುದು; ಅಥವಾ ಈಗ ಒಂದಾಣೆಯನ್ನು ಆ ಸರಕಿಗಿಂತ ಬೇರೆ ಸರಕುಗಳಲ್ಲಿ ವ್ಯಯಮಾಡಿದರೆನೆ ಉಪಯುಕ್ತತೆಯು ಹೆಚ್ಚಾಗುವುದು. ಅಂತೂ ಎಲ್ಲ ಸರಕುಗಳ ಉಪಯುಕ್ತತೆಯೂ ಸಮಾನವಾಗುವ ವರೆಗೆ ವ್ಯಕ್ತಿ ತನ್ನ ಹಣದ ವ್ಯಯವನ್ನು ಹೆಚ್ಚುಕಡಿಮೆ ಮಾಡುವನು ಇತರ ಸನ್ನಿವೇಶಗಳನ್ನು ತಟಸ್ಥವೆಂದು ಭಾವಿಸುವ ಪಕ್ಷಕ್ಕೆ ಒಂದು ಸರಕಿನ ಧಾರಣೆಯು ಇಳಿದರೆ ಅದಕ್ಕೆ ಬೇಡಿಕೆ ಹೆಚ್ಚುವುದು, ಅಂದರೆ ಬೇಡಿಕೆಯ ಕಮಾನು ಕೆಳಮುಖವಾಗಿ ಇಳಿಯುವುದು. ಮೇಲ್ಮುಖವಾಗಿ ಏರುವ ವಿಲಕ್ಷಣ ಬೇಡಿಕೆಯ ಕಮಾನು ಇದ್ದರೆ 'ಇತರ ಸನ್ನಿವೇಶಗಳು ತಟಸ್ಥವಾಗಿ' ಇರಲಿಲ್ಲವೆಂದು ಖಂಡಿತವಾಗಿ ತಿಳಿಯಬಹುದು. ಅಂದರೆ ಅಲ್ಲಿ ಹಣದ ರೂಪದ ವರಮಾನ ಹೆಚ್ಚಿರಬಹುದು, ಜನರಿಗೆ ಮಾರ್ಕೆಟಿನ ಪೂರ್ಣಜ್ಞಾನವಿಲ್ಲದಿರಬಹುದು ಮತ್ತು ಬೇಡಿಕೆಯ ಪರಿಸ್ಥಿತಿ ಬದಲಾವಣೆ ಹೊಂದಿರಬಹುದು.

## ಪ್ರತಿನಿಧಾನದ ತತ್ತ್ವ:

ನೇಜಿ ನೆಡಲು ಬಂದ ಕೂಲಿಕಾರರಲ್ಲಿ ಒಬ್ಬೊಬ್ಬನಿಗೂ ಧನಿಯು ವಾರಕ್ಕೆ ಹನ್ನೆರಡುಸೇರು ಅಕ್ಕಿಯನ್ನೂ, ಇಪ್ಪತ್ತು ತೆಂಗಿನಕಾಯಿಯನ್ನೂ ಕೊಡುತ್ತಾನೆಂದು ಭಾವಿಸುವ ಕೂಲಿಕಾರನಿಗೆ 'ಒಂದು ಸೇರು ಅಕ್ಕಿ ಹೆಚ್ಚು ಕೊಡುತ್ತೇನೆ' ಎಂದಾಗ ಅವನು ನಾಲ್ಕು ತೆಂಗಿನಕಾಯಿ ಕಡಿಮೆ ಮಾಡಿಕೊಳ್ಳಬಹುದೆಂದು ಭಾವಿಸೋಣ. ಹಾಗೆಯೇ 'ಇನ್ನೊಂದುಸೇರು ಅಕ್ಕಿ ಕೊಡುತ್ತೇನೆ, ಎಷ್ಟು ತೆಂಗಿನಕಾಯಿ ಕೊಟ್ಟೀಯಾ?' ಎಂದು ಕೇಳಿದರೆ, ಕೂಲಿಕಾರನು ನಾಲ್ಕು ಕಾಯಿ ಕೊಡಲಿಕ್ಕಿಲ್ಲ. ಅವನ ಹತ್ತಿರ ಈಗ ಇರುವ ಕಾಯಿಗಳು ಕಡಿಮೆ, ಅಕ್ಕಿ ಹೆಚ್ಚು ಅವನು ಮೆಚ್ಚುವ ಕೆಲವು ಕೂಟಗಳು ಕೆಳಗಿನಂತಿರಬಹುದು:-

೧. ೧೨ ಸೇರು ಅಕ್ಕಿ + ೨೦ ತೆಂಗಿನಕಾಯಿ.
೨. ೧೩ ಸೇರು ಅಕ್ಕಿ + ೧೬ ತೆಂಗಿನಕಾಯಿ.
೩. ೧೪ ಸೇರು ಅಕ್ಕಿ + ೧೩ ತೆಂಗಿನಕಾಯಿ.

೪. ೧೫ ಸೇರು ಅಕ್ಕಿ + ೧೧ ತೆಂಗಿನಕಾಯಿ.

೫. ೧೬ ಸೇರು ಅಕ್ಕಿ + ೧೦ ತೆಂಗಿನಕಾಯಿ.

ಅವನಿಗೆ ಮೊದಲನೆಯ ಕೂಟವು ಎಷ್ಟು ಪ್ರಿಯವಾದುದೋ ಅಷ್ಟೇ ೨ನೆಯದೂ ಪ್ರಿಯವಾದುದು. ಇದರಲ್ಲಿ ೨ನೆಯ ೧೩ ಸೇರು ಅಕ್ಕಿ ೧೬ ತೆಂಗಿನಕಾಯಿಯ ಕೂಟವು ಬಂದೊಡನೆ ಕೂಲಿಯು ಔದಾಸೀನ್ಯ ತಾಳುತ್ತಾನೆ. ಆ ಕೂಟವು ಅವನ ಒಂದು ಔದಾಸೀನ್ಯ ಬಿಂದು. ೧೪ಸೇರು ಅಕ್ಕಿ + ೧೩ ತೆಂಗಿನಕಾಯಿಯ ಕೂಟದಲ್ಲಿಯೂ ಔದಾಸೀನ್ಯ ಬಿಂದುವಿದೆ. ಈ ಬಿಂದುಗಳನ್ನೆಲ್ಲಾ ಒಟ್ಟುಗೂಡಿಸಿದರೆ 'ಔದಾಸೀನ್ಯ ಕಮಾನು' ನಿರ್ಮಾಣವಾಗುವುದು. ಔದಾಸೀನ್ಯ ಕಮಾನು ಎಡದಿಂದ ಬಲಕ್ಕೆ ಇಳುಕಲಾಗಿರುವುದು; ಅಂದರೆ ಅಕ್ಕಿಯ ಪ್ರಮಾಣವನ್ನು ಹೆಚ್ಚಿಸಿದಾಗ ಕಾಯಿಯ ಪ್ರಮಾಣವನ್ನು ಕಡಿಮೆಮಾಡದಿದ್ದ ಪಕ್ಷಕ್ಕೆ ಹೊಸ ಕೂಟವು, ಹಿಂದಿನ ಕೂಟಕ್ಕಿಂತ ಪ್ರಿಯವಾಗುವುದು ಎಂದರ್ಥ.



ಔದಾಸೀನ್ಯ ಕಮಾನು ಮೂಲಕ್ಕೆ ನಿಮ್ನವಾಗಿರುವುದರಿಂದ ಕೂಲಿ ಕಾರನು ಕಾಯಿಗೆ ಬದಲಾಗಿ ಅಕ್ಕಿಯನ್ನು ಪಡೆಯುತ್ತಾ ಹೋದಂತೆ ಮತ್ತೆ ಮತ್ತೆ ಅವನು ಕಾಯಿಯನ್ನು ಬಿಡಬೇಕಾದರೆ ಕೊಡುವ ಅಕ್ಕಿಯ ಪ್ರಮಾಣವು ಅಧಿಕವಾಗುವುದು ಎಂದರ್ಥ. ಈ ಸಂದರ್ಭದಲ್ಲಿ ಉದಿಸುವ ಒಲವಿನ ಮಾನದಂಡಕ್ಕೆ 'ಇಳಿಮುಖವಾದ ಪರಿಸರದ ಉಪಯುಕ್ತತೆ'ಯ ನಿಯಮ ಎನ್ನುತ್ತಾರೆ. ಒಬ್ಬ ವ್ಯಕ್ತಿಯ ಹತ್ತಿರ ಇರುವ ಎರಡು ಸರಕು ಗಳಲ್ಲಿ ಒಂದನೆಯ ಸರಕಿನ ಪರಿಮಾಣವನ್ನು ಎರಡನೆಯದರ ಪರಿಮಾಣ ಕ್ಕಿಂತ ಹೆಚ್ಚಿಸಿದರೆ ಒಂದನೆಯ ಸರಕಿನ ಪರಿಸರದ ಉಪಯುಕ್ತತೆ ಕ್ಷೀಣಿ ಸುವುದು. A B ಕಮಾನಿನ ಇಳುಕಲಿನ ಯಾವ ಬಿಂದುವನ್ನು ತೆಗೆದು ಕೊಂಡರೂ ಅದು ಅಕ್ಕಿ ಕಾಯಿಗಳ ಪರಿಸರದ ಉಪಯುಕ್ತತೆಯ ದಾಮಾಶಯವನ್ನು ಸೂಚಿಸುವುದು. ಅಷ್ಟು ಮಾತ್ರವಲ್ಲದೆ ಅಧಿಕವಾಗಿ ಪಡೆದ ಅಕ್ಕಿ ಮತ್ತು ಕಳೆದುಕೊಂಡ ತೆಂಗಿನಕಾಯಿಗಳ ದಾಮಾಶಯವನ್ನು ಸೂಚಿಸುವ ಬಿಂದುವೂ ಇದೇ ಆಗಿದೆ. ಇದನ್ನು ಅಕ್ಕಿ ಕಾಯಿಗಳ ದಾಮಾಶಯವೆಂದೂ, ಅಥವಾ ಕಾಯಿಯನ್ನು ಅಕ್ಕಿಯಿಂದ ಪ್ರತಿ ನಿಧಾನಿಸುವ ದಾಮಾಶಯವೆಂದೂ ಕರೆಯಬಹುದು.

ಈ ಬಗೆಯ ಪ್ರತಿನಿಧಾನದ ದಾಮಾಶಯವನ್ನು ಉಪಯೋಗಿಸುವುದ ರಿಂದ 'ಪರಿಸರದ ಉಪಯುಕ್ತತೆಯು ಪರಿಮಾಣಾತ್ಮಕವಾದುದು, ಅದನ್ನು ಅಳೆಯಬಹುದು' ಎಂಬ ತಪ್ಪೆಣಿಕೆ ದೂರವಾಗುವುದು. ಇಲ್ಲಿ ಪರಿಸರದ ಉಪಯುಕ್ತತೆ ಒಂದು ಪರಿಮಾಣವಲ್ಲ, ಪ್ರತಿನಿಧಾನದ ದಾಮಾಶಯ.

**ಬೇಡಿಕೆಯ ಸ್ಥಿತಿಸ್ಥಾಪಕತ್ವ:**

ಧಾರಣೆಯಲ್ಲೊಂದು ಚಿಕ್ಕ ಬದಲಾವಣೆಯಾದಾಗ ಬೇಡಿಕೆಯ ಗಾತ್ರವೂ ಜತೆಗನೇ ಬದಲಾವಣೆಯಾಗುವ ರೀತಿಗೆ 'ಬೇಡಿಕೆಯ ಸ್ಥಿತಿ ಸ್ಥಾಪಕತ್ವ' ಎನ್ನುತ್ತಾರೆ. ಯಾವುದಾದರೂ ಒಂದು ವಸ್ತುವಿಗಿರುವ ಬೇಡಿಕೆಯು ಸ್ಥಿತಿಸ್ಥಾಪಕವೆಂದು ಕರೆಯಲ್ಪಡಬೇಕಾದರೆ ಧಾರಣೆಯ ಏರಿಳಿತವು, ಬೇಡಿಕೆಯಲ್ಲಿಯೂ ಏರಿಳಿತವನ್ನು ತರುವಂತಹುದಾಗಿರತಕ್ಕದು. ಧಾರಣೆಯ ಬದಲಾವಣೆಯಿಂದ ಬೇಡಿಕೆಯ ಮೇಲೆ ವಿಶೇಷ ಪರಿಣಾಮ

ಆಗದಿದ್ದರೆ, ಬೇಡಿಕೆಯಲ್ಲಿ ಸ್ಥಿತಿಸ್ಥಾಪಕಗುಣ ಇಲ್ಲವೆನ್ನಬೇಕು. ಒಂದು ಹಳ್ಳಿಯಲ್ಲಿ ಬೆಲ್ಲ ಮಣಕ್ಕೆ ಆರು ರೂಪಾಯಿ ಇರುವಾಗ ನೂರು ಮಣ ಬೆಲ್ಲ ಖರ್ಚಾಗುತ್ತಿದ್ದು, ಧಾರಣೆ ಎಂಟುರೂಪಾಯಿ ಆದಾಗಲೂ ಬೆಲ್ಲದ ಬೇಡಿಕೆ ೧೦೦ ಮಣವೇ ಆಗಿದ್ದರೆ ಬೇಡಿಕೆಯ ಸ್ಥಿತಿಸ್ಥಾಪಕತ್ವವು 'ಏಕ' ವೆಂದೂ, ೮೦ ಮಣಕ್ಕಿಳಿದರೆ 'ಏಕಕ್ಕಿಂತ ಕಡಿಮೆಯೆಂದೂ, ೫ ರೂಪಾಯಿ ಧಾರಣೆಯಾದಾಗ ಬೇಡಿಕೆಯು ೧೧೦ ಮಣಕ್ಕೇರಿದರೆ ಅದು 'ಏಕಕ್ಕಿಂತ ಹೆಚ್ಚೆಂದೂ' ತಿಳಿಯಬೇಕು.

**ಬೇಡಿಕೆಯ ಸ್ಥಿತಿಸ್ಥಾಪಕತ್ವವು ಕೆಳಗಿನ ವಿಷಯಗಳನ್ನು ಅವಲಂಬಿಸಿರುವುದು:–**

**(೧) ನಮ್ಮ ಆವಶ್ಯಕತೆಯ ಆಳ:–** ಸಾಧಾರಣವಾಗಿ ಬೇಡಿಕೆಯು ನಮ್ಮ ಜೀವಧಾರಣೆಗೆ ಬೇಕಾಗುವ ಆಹಾರ ದವಸಗಳ ವಿಷಯದಲ್ಲಿ ಸ್ಥಿತಿ ಸ್ಥಾಪಕಗುಣರಹಿತವಾಗಿಯೂ, ಬೆಳ್ಳಿ, ವಜ್ರ, ರೇಡಿಯೋಗಳಂಥ ವಿಲಾಸ ಸಾಮಗ್ರಿಗಳಿಗೆ ಸ್ಥಿತಿಸ್ಥಾಪಕವಾಗಿಯೂ ಇರುತ್ತದೆ ಸೇರಿಗೆ ಮೂರಾಣೆ ಇದ್ದ ಅಕ್ಕಿಗೆ ನಾಲ್ಕಾಣೆಯಾದರೆ ಅನುಭೋಗಿಯು ತಾನು ದಿನಾಲೂ ಕೊಂಡುಕೊಳ್ಳುವ ಪರಿಮಾಣವನ್ನು ಬಹಳವಾಗಿ ಕಡಿಮೆಮಾಡುವುದಿಲ್ಲ; ಆದರೆ ರೇಡಿಯೋದ ಬೆಲೆ ಐನೂರರಿಂದ ಆರುನೂರಕ್ಕೇರಿದರೆ ಅದರ ಬೇಡಿಕೆಯಲ್ಲಿ ತುಂಬಾ ತಾರತಮ್ಯ ಉಂಟಾಗುವುದು. ಅಕ್ಕಿ ಅವಶ್ಯಕವಾದ ಪದಾರ್ಥ, ರೇಡಿಯೋ ಅನಾವಶ್ಯಕವಾದ ವಿಲಾಸ ಸಾಮಗ್ರಿ.

**(೨) ಅನುಭೋಗಿಯ ವರಮಾನ:–** ತಿಂಗಳಿಗೆ ಸಾವಿರಗಟ್ಟಲೆ ವರಮಾನವುಳ್ಳ ಧನಾಢ್ಯನು ರೇಡಿಯೋದ ಬೆಲೆ ಈಗ ಇರುವುದಕ್ಕಿಂತ ೧೦೦ ರೂಪಾಯಿ ಏರಿದರೂ ಅದನ್ನು ಕೊಂಡಾನು, ಆದರೆ ನೂರಿನ್ನೂರು ರೂಪಾಯಿ ವರಮಾನದ ಮಧ್ಯಮ ವರ್ಗದ ವ್ಯಕ್ತಿ ರೇಡಿಯೋ ಕೊಳ್ಳುವ ಯೋಚನೆಯನ್ನೇ ತ್ಯಜಿಸಿ ಬಿಟ್ಟಾನು. ಅಧಿಕ ವರಮಾನವುಳ್ಳ ಅನುಭೋಗಿಯ ಬೇಡಿಕೆಯಲ್ಲಿ ಸ್ಥಿತಿ ಸ್ಥಾಪಕತ್ವವು ಕಡಿಮೆ.

**(೩) ಪ್ರತಿನಿಧಾನಗಳು ಇರುವುದು:–** 'ಮರ್ಫಿ' ರೇಡಿಯೋವಿಗೂ, 'ಪ್ರಮುಖ' ರೇಡಿಯೋವಿಗೂ ಹೆಚ್ಚು ವ್ಯತ್ಯಾಸವಿಲ್ಲ. ಎರಡೂ ಒಂದೇ ಬಗೆಯಾಗಿ ಗೋಳಿಡುವುವು ಎಂದುಕೊಂಡು, ಇವು ಒಂದಕ್ಕೊಂದು ಪ್ರತಿ

ನಿಧಾನಗಳೆಂದು ಅನುಭೋಗಿಯು ಭಾವಿಸುವುದಾದರೆ 'ಮರ್ಫಿ'ಗೆ ನೂರು ರೂಪಾಯಿ ಬೆಲೆ ಏರಿದೊಡನೆ ಅವನು ಅದರ ಪ್ರತಿನಿಧಾನವಾದ 'ಪ್ರಮುಖ' ವನ್ನೇ ಕೊಳ್ಳಬಹುದು. ಪ್ರತಿನಿಧಾನಗಳು ಸುಲಭವಾಗಿ ಸಿಗುವಂತಿದ್ದರೆ ಬೇಡಿಕೆಯಲ್ಲಿ ಸ್ಥಿತಿ ಸ್ಥಾಪಕತ್ವವು ಹೆಚ್ಚು.

**(೪) ಸರಕಿನ ಬಾಳಿಕೆ:–** ಸರಕು ಹೆಚ್ಚು ಬಾಳಿಕೆ ಬರುವಂತಹುದಾದರೆ ಅದಕ್ಕೆ ಬೆಲೆ ಏರಿದಾಗ ಹೊಸದನ್ನು ಕೊಳ್ಳುವ ಯೋಚನೆ ತೊರೆದು ಹಳೆಯದನ್ನೇ ಇನ್ನಷ್ಟು ಕಾಲ ಉಪಯೋಗಿಸಬಹುದು. ಬಾಳಿಕೆಯ ಸರಕುಗಳಿಗೆ ಸ್ಥಿತಿಸ್ಥಾಪಕತ್ವವು ಹೆಚ್ಚು.

ಕೆಲವೊಮ್ಮೆ ಧಾರಣೆ ಏರಿದಾಗ ಬೇಡಿಕೆಯು ಕಡಿಮೆಯಾಗುವುದು ಬಿಟ್ಟು ಇನ್ನಷ್ಟು ಏರೀತೆಂದು ಬೆದರಿ ಸಂಗ್ರಹಕ್ಕಾರಂಭಿಸುವ ಗಿರಾಕಿಗಳ ದೆಸೆಯಿಂದ ಬೇಡಿಕೆಯು ಅತಿಶಯವಾಗಬಹುದು. ಹಾಗೆಯೇ ಧಾರಣೆ ಇಳಿದಾಗ ಅದು ಇನ್ನೂ ಇಳಿಯುವುದೆಂಬ ಆಶೆಯಿಂದ ಗಿರಾಕಿಗಳು ತಾವು ಕೊಳ್ಳುವುದನ್ನು ಮತ್ತಷ್ಟು ಮುಂದುವರಿಸುವುದರಿಂದಲೂ ಬೇಡಿಕೆಯು ಬದಲಾಗದಿರಬಹುದು. ಈ ಬಗೆಯ ಪರಿಸ್ಥಿತಿಗಳನ್ನು ಬಾಂಡ್ ಮತ್ತು ಷೆಯರು ಮಾರ್ಕೆಟುಗಳಲ್ಲಿಯೂ, ಸ್ಟಾಕ್ ಎಕ್ಸ್‌ಛೇಂಜಿನಲ್ಲಿಯೂ ಕಾಣುವೆವು. ಬೇಡಿಕೆಯ ನಿಯಮವನ್ನು ಮುರಿದ ಈ ವಿರೋಧಾಭಾಸವು ಕಿರುವಾಯಿದೆಯಲ್ಲಿ ಮಾತ್ರ ಸಾಧ್ಯ ದೀರ್ಘಾವಧಿಯಲ್ಲಿ ಬೇಡಿಕೆಯ ಸ್ಥಿತಿ ಸ್ಥಾಪಕತ್ವವು ನಿಯಮಬದ್ಧವಾಗಿಯೇ ರೂಪಿತವಾಗುವುದು.

**ಬೇಡಿಕೆಯಲ್ಲಿ ಬದಲಾವಣೆಗಳು ಹೇಗೆ ಉಂಟಾಗುವುವು ?**

ಧಾರಣೆ ಏರಿದಾಗ ಬೇಡಿಕೆ ಇಳಿಯುವುದು, ಇಳಿದಾಗ ಬೇಡಿಕೆ ಅತಿಶಯವಾಗುವುದು ಒಂದು ವಿಧದ ಬದಲಾವಣೆ, ಸರಕಿನ ಬೇಡಿಕೆಯು ಇದ್ದಂತೆ ಇದ್ದರೂ ಧಾರಣೆ ಇಳಿದು ಮಾರಾಟದ ಗಾತ್ರವು ಅಧಿಕವಾಗುವುದು ಇನ್ನೊಂದು ವಿಧದ ಬದಲಾವಣೆ. ಇದಕ್ಕೆ 'ಬೇಡಿಕೆಯ ವಿಸ್ತರಣ' ಎಂದೂ ಕರೆಯುವರು. ಬೇಡಿಕೆಯ ನಿಯಮಗಳನ್ನು ನಾವು ಇದುವರೆಗೆ ಅನುಭೋಗಿ ಸರಕುಗಳನ್ನಷ್ಟೇ ಲಕ್ಷ್ಯದಲ್ಲಿರಿಸಿಕೊಂಡು ರಚಿಸಿದಂತೆ ತೋರುವುದಾದರೂ ಇವನ್ನು ಧಾರಣೆ ಇರುವಂಥ ಯಾವ ಸರಕುಗಳಿಗೂ ಅನ್ವಯಿಸಬಹುದು.

**ಬೇಡಿಕೆಯಲ್ಲಿ ಈ ಕೆಳಗಿನ ಕಾರಣಗಳಿಂದಾಗಿ ಬದಲಾವಣೆಗಳುಂಟಾಗುವುವು:**

**(೧)** ಹಣದ ಪರಿಮಾಣದಲ್ಲುಂಟಾಗುವ ಬದಲಾವಣೆಗಳಿಂದ ಬೇಡಿಕೆಯಲ್ಲಿ ಅನೇಕ ವಿಧದ ಪರಿವರ್ತನೆಗಳು ಉಂಟಾಗುವುವು. ಹಣದ ಪರಿಮಾಣ ಬದಲಾದಾಗ ಸಾಪೇಕ್ಷ ಧಾರಣೆಯು ಇದ್ದಂತೆ ಇರಲಾರದು. ಧಾರಣೆ ವಾಸಿಯು ಹಣದ ಪರಿಮಾಣವು ಏರಿದ ಯಾ ಇಳಿದ ದಾಮಾಶಯದಲ್ಲೇ ಹಿಗ್ಗ, ಕುಗ್ಗ ಬೇಕೆಂಬ ನಿಯಮವಿಲ್ಲ ಭಾರತದ ನೋಟು ಚಲಾವಣೆಯನ್ನು ಒಮ್ಮೆಲೇ ನಾಲ್ಕರಷ್ಟು ಹೆಚ್ಚಿಸಿದರೆ, ಸರಕಿನ ಉತ್ಪಾದನೆಯ ಗಾತ್ರವು ಅಪರಿವರ್ತಿತವಾಗಿರುವುದರಿಂದ ಪ್ರತಿಯೊಂದು ಸರಕಿಗೂ ಮುಂಚಿಗಿಂತ ನಾಲ್ಕರಷ್ಟು ಧಾರಣೆಯಾಗುವುದು ಸರಕಿಗೆ ಪ್ರತಿಯಾಗಿ ನಾವು ಹಣವನ್ನು ಕೊಡುವುದರಿಂದ ನಮ್ಮ ಹಣ ವರಮಾನಗಳಲ್ಲಿಯೂ, ಆಸ್ತಿ ಮೌಲ್ಯಗಳಲ್ಲಿಯೂ ಉಂಟಾಗುವ ಬದಲಾವಣೆಯ ದೆಸೆಯಿಂದ ಸರಕುಗಳ ಬೇಡಿಕೆ ಅತಿಶಯವಾಗುವುದರಿಂದಲೂ ಧಾರಣೆಯು ಏರಬಹುದು.



**(೨) ವಾಸ್ತವಿಕ ವರಮಾನದಲ್ಲಿ ಬದಲಾವಣೆ:–** ನಮ್ಮ ಹಣ ವರಮಾನವು ಕೊಳ್ಳುವ ಸರಕುಸೇವೆಗಳು ನಮ್ಮ ವಾಸ್ತವಿಕ ವರಮಾನ ಎನ್ನಿಸುತ್ತವೆ. ಮುಗ್ಗಟ್ಟಿನ ಕಾಲದಲ್ಲಿ ಹೆಚ್ಚು ಹಣವನ್ನು ಚಲಾವಣೆಗೆ ಬಿಟ್ಟು ನಿರುದ್ಯೋಗಿಗಳಿಗೆ ಕೆಲಸಕೊಡುವುದುಂಟು. ಅಂದರೆ ಜನರ ವಾಸ್ತವಿಕ ವರಮಾನವನ್ನು ಹೆಚ್ಚಿಸಲು ನೋಟು ಅಚ್ಚುಹಾಕುವುದು ಒಂದು ಕ್ರಮ ಆದರೆ ಸಾಮಾನ್ಯವಾಗಿ ಸಮಾಜದ ವಾಸ್ತವಿಕ ವರಮಾನವು ಅಧಿಕವಾಗಬೇಕಾದರೆ ಶೋಧನೆಗಳ ಮೂಲಕವಾಗಿ ದೇಶದಲ್ಲಿ ತಾಂತ್ರಿಕ ಪ್ರಗತಿಯು ನಡೆಯಬೇಕು. ಮೋಟರ್‌ಕಾರಿನ ಉದ್ಯಮದಲ್ಲಿ ನಡೆದ ಕ್ಷಿಪ್ರ ವೇಗದ ತಾಂತ್ರಿಕ ಪ್ರಗತಿಯಿಂದಾಗಿ ವರ್ಷ ವರ್ಷವೂ ಲಕ್ಷಾಂತರ ಮೋಟರುಗಳು ಕಾರ್ಖಾನೆಗಳಿಂದ ಹೊರಬರಲು ಸಾಧ್ಯವಾಗುವುದು. ಇಂಥ ತಾಂತ್ರಿಕ ಪ್ರಗತಿಯಿಂದ ಒಬ್ಬ ಅನುಭೋಗಿಯ ವಾಸ್ತವಿಕ ವರ ಮಾನವು ನೂರಕ್ಕೆ ಹತ್ತರಷ್ಟು ಹೆಚ್ಚಾದರೆ, ಅವನು ಮುಂಚಿನ ದಾಮಾ ಶಯದಲ್ಲೇ ಸರಕುಗಳನ್ನು ಕೊಳ್ಳುವನೆಂಬುದು ನಿಶ್ಚಯವಿಲ್ಲ. ಹಿಂದೆ ಕೊಂಡುದರ ೧೦% ಅಧಿಕ ಸರಕುಗಳನ್ನಷ್ಟೇ ಅವನು ಕೊಂಡಾನೆಂಬುದು ಅಸಂಗತ, ಅಸಹಜ. ಅವನ ಮನಸ್ಸು ಈಗ ಉತ್ತಮದರ್ಜೆಯ ಸರಕುಗಳ ಕಡೆಗೆ ಒಲಿಯುವುದು ಅವನು ಮನೆಯಲ್ಲಿ ಎಣ್ಣೆಯ ಬದಲು ಬೆಣ್ಣೆ ಯನ್ನು ಬಳಸಬಹುದು ಊಟದ ಅನಂತರ ಸೇಬು, ಕಿತ್ತಳೆ ತಿನ್ನುವ ಪರಿಪಾಟಿ ರೂಢವಾಗಬಹುದು. ವರಮಾನದ ಹೆಚ್ಚಳವು ಬಹಳವಾಗಿದ್ದರೆ ಅವನು ಕಾಲ್ನಡೆಯಾಗಿ ಹೋಗುವುದು ಬಿಟ್ಟು, ಸ್ವಂತ ಮೋಟಾರು ಇಡಬಹುದು.

**(೩)** ಸರಕಿನ ಕಡೆಗೆ ಇಚ್ಛೆಯು ಬಲವತ್ತರವಾದರೆ ಆ ಸರಕಿನ ಬೇಡಿ ಕೆಯು ಅಧಿಕವಾಗುವುದು. ಉದಾ. ಚಳಿಗಾಲ ದಿಲ್ಲಿಯಲ್ಲಿ ರಜಾಯಿ ಹೊದಿಕೆಯ ಬೇಡಿಕೆ ಒಮ್ಮೆಲೆ ಏರುವುದು.

**(೪) ಜನಸಂಖ್ಯೆಯಲ್ಲಿ ಬದಲಾವಣೆ:–** ಇತರ ಸನ್ನಿವೇಶಗಳು ಇದ್ದಂತಿದ್ದರೆ, ಸಮಾಜದ ಒಟ್ಟು ಬೇಡಿಕೆ ಆ ಸಮಾಜದ ಅನುಭೋಗಿ ಜನಸಂಖ್ಯೆಯನ್ನು ಹೊಂದಿಕೊಂಡಿದೆ. ಗರ್ಭಿಣಿಮಾತೆಯರು ಹೆಚ್ಚಾಗಿ ರುವ ಕಾಲದಲ್ಲಿ ಮಕ್ಕಳ ಹಾಲಿನ ಬಾಟ್ಲಿಗೆ ಬೇಡಿಗೆ ಅಧಿಕವಾಗುವುದರಲ್ಲಿ

ಸಂದೇಹವಿಲ್ಲ. ಭಾರತದ ಜನಸಂಖ್ಯೆ ಕೋಟಿಗಟ್ಟಲೆಯಾಗಿ ಏರಿದುದೇ ಪ್ರಕೃತದ ಆಹಾರಾಭಾವಕ್ಕೆ ಕಾರಣವೆಂದು ಯಾರಿಗೆ ಗೊತ್ತಿಲ್ಲ? ಔರಂಗ ಜೇಬನ ಕಾಲದಲ್ಲಿ ಸರಕಿನ ಧಾರಣೆಯೂ, ಜಮೀನಿನ ಧಾರಣೆಯೂ ಕಡಿಮೆಯಾಗಿದ್ದು ಈಗ ಅದಕ್ಕಿಂತ ಎಷ್ಟೋ ಅಧಿಕವಾಗಿರುವುದಕ್ಕೆ ಜನಸಂಖ್ಯೆಯ ಒತ್ತಡವು ಒಂದು ಪ್ರಬಲವಾದ ಕಾರಣವೆಂದು ಹೇಳಬಹುದು.

**(೫) ಇತರ ಧಾರಣೆಗಳಲ್ಲಿ ಉಂಟಾಗುವ ಬದಲಾವಣೆ:-** ಪ್ರತಿನಿಧಾನಕ್ಕೆ ಹತ್ತಿರವಿರುವ ಸರಕುಗಳಲ್ಲಿ ಯಾವುದಾದರೂ ಒಂದರ ಧಾರಣೆಯನ್ನು ಹೆಚ್ಚಿಸಿದರೆ ಅದರ ಬೇಡಿಕೆಯು ತಗ್ಗಿ, ಇನ್ನೊಂದರ ಬೇಡಿಕೆ ಹಿಗ್ಗಬಹುದು. ಹಂದಿಯ ಮಾಂಸಕ್ಕೆ ಧಾರಣೆ ಏರಿದರೆ ಜನರು ಕುರಿಯ ಮಾಂಸವನ್ನು ಅಧಿಕವಾಗಿ ಬೇಡಬಹುದು ಒಂದು ಸರಕಿನ ಧಾರಣೆಯು ಬದಲಾದರೆ ಆದಕ್ಕೆ ಪೂರಕವಾಗಿರುವ ಸರಕಿಗೂ ಬೇಡಿಕೆಯು ಬದಲಾವಣೆಯಾಗುವುದು. ಉದಾ: ಮೋಟರಿನ ಧಾರಣೆ ತಗ್ಗಿದರೆ ಟಯರಿಗೂ ಪೆಟ್ರೋಲಿಗೂ ಜತೆಯಾಗಿ ಬೇಡಿಕೆ ಹೆಚ್ಚುವುದು.

**(೬) ಸಂಪತ್ತಿನ ವಿತರಣೆಯಲ್ಲಿ ಉಂಟಾದ ಬದಲಾವಣೆ:-**ಒಂದು ದೇಶದಲ್ಲಿ ಲಕ್ಷಾಧಿಪತಿಗಳೂ, ಕೋಟ್ಯಧೀಶರೂ ಅಧಿಕ ಸಂಖ್ಯೆಯಲ್ಲಿದ್ದರೆ, ವಿಲಾಸ ಸಾಮಗ್ರಿಗಳ ಬೇಡಿಕೆ ಹೆಚ್ಚಾಗಿರುತ್ತದೆ. ಭಾರತದಲ್ಲಿ ನೂರಾರು ಮಹಾರಾಜರುಗಳಿದ್ದಾಗ ರೇಸ್ ಕುದುರೆಗಳಿಗೆ ಒಳ್ಳೆಯ ಬೇಡಿಕೆಯಿತ್ತು. ಅವರೆಲ್ಲ ಈಗ ಪ್ರಜೆಗಳಿಗೆಯೆ ಅಧಿಕಾರ ಕೊಟ್ಟ ಮೇಲೆ ಶಾಲೆ, ಕಾಲೇಜು, ಆಸ್ಪತ್ರೆ, ಗಾಂಧೀ ಟೋಪಿ ಇವುಗಳಿಗೆ ಬೇಡಿಕೆ ಹೆಚ್ಚುತ್ತಿದೆ. ಇಂಗ್ಲೆಂಡಿನಲ್ಲಿ ವಿಪುಲ ವರಮಾನವುಳ್ಳ ಧನಾಢ್ಯರು ಇದ್ದಾಗ ತಯಾರಾದಷ್ಟು 'ರೋಲ್ಸ್ ರೋಯ್ಸ್' ಕಾರು ಈಗ ತಯಾರಾಗುತ್ತಿಲ್ಲ. ಕಾರಣ, ಈಗ ಸಂಪತ್ತಿನ ವಿತರಣೆಯಲ್ಲಿ ಸಮಾನತ್ವವು ಬಂದು ಬಿಟ್ಟು, ಅಗ್ಗ ಬೆಲೆಯ ಕಾರುಗಳಿಗೆ ಗಿರಾಕಿ ಹೆಚ್ಚಿದೆ.

**(೭)** ಆರ್ಥಿಕ ಮುಗ್ಗಟ್ಟಿನ ಸಮಯ ವ್ಯಾಪಾರ ವಹಿವಾಟು ಕುಂದುವುದರಿಂದ ಕಾಮಗಾರರಿಗೂ, ಮೂಲ ಸಾಮಗ್ರಿಗಳಿಗೂ ಬೇಡಿಕೆ ಕಡಿಮೆಯಾಗುತ್ತದೆ. ಹತ್ತಿ ಬೆಳೆಯುವ ರೈತರು ದಿವಾಳಿ ತೆಗೆಯುತ್ತಾರೆ. ಆರ್ಥಿಕ ಅಭ್ಯುದಯದ ಸಮಯ ಏರುತ್ತಿರುವ ಲಾಭದ ಆಕರ್ಷಣೆಯಿಂದ

ಉದ್ದಿಮೆದಾರರು ಉತ್ಪಾದಕ ಸಾಮುಗ್ರಿಗಳನ್ನು ಹೆಚ್ಚು ಹೆಚ್ಚಾಗಿ ಕೊಂಡು ಹೆಚ್ಚು ಜನರಿಗೆ ಉದ್ಯೋಗ ಕಲ್ಪಿಸುವುದರಿಂದ ಬರಿಯ ಉತ್ಪಾದಕ ಸರಕುಗಳಿಗೆ ಮಾತ್ರವಲ್ಲದೆ ಅನುಭೋಗಿ ಸರಕುಗಳಿಗೂ ಬೇಡಿಕೆ ಅಭಿವೃದ್ಧಿಗೊಳ್ಳುವುದು

**(೮)ಅಭಿರುಚಿಯು ಬದಲಾವಣೆ:** ಜನರು ತಲೆಗೆ ಮುಂಡಾಸ ಕಟ್ಟುವುದನ್ನು ಬಿಟ್ಟು, ಗಾಂಧಿ ಟೊಪ್ಪಿ ಇಡಲು ಹತ್ತಿದರೆ, ಗಾಂಧಿ ಟೊಪ್ಪಿಗೆ ಬೇಡಿಕೆ ಅಧಿಕವಾಗಿ ಅದರ ಉತ್ಪಾದನೆಗೆ ಪ್ರೋತ್ಸಾಹ ಸಿಗುವುದು.

## ನಾಲ್ಕನೆಯ ಅಧ್ಯಾಯ

# ಬೇಡಿಕೆ, ಪೂರೈಕೆ, ಧಾರಣೆ

### ಪೂರೈಕೆಯಲ್ಲಿ ಬದಲಾವಣೆ:

ಸರಕುಗಳ ಉತ್ಪಾದನೆಯ ವೆಚ್ಚವೆಂದರೆ ಮೂಲಸಾಮಗ್ರಿ ಮತ್ತು 'ನಡುವಣ ಸರಕು'ಗಳಿಗೆ ಕೊಡುವ ಬೆಲೆಯ ಮೊತ್ತವಲ್ಲವೆ? ಈ ಅವಯವ ಗಳ ಧಾರಣೆಯ ಬದಲಾವಣೆಯಿಂದ ಸರಕಿನ ಪೂರೈಕೆಯಲ್ಲಿಯೂ ಬದಲಾ ವಣೆ ಉಂಟಾಗುವುದು ಅವಯವಗಳ ಧಾರಣೆ ಏರಿದರೆ ಪೂರೈಕೆಯ ಕಮಾನು ಎಡಕ್ಕೆ ಸರಿಯುವುದು, ಅಂದರೆ ಪೂರೈಕೆಯ ಪ್ರಮಾಣವು ಕಡಿ ಮೆಯಾಗುವುದು. ಉತ್ಪಾದನೆಯ ತಂತ್ರವು ಸುಧಾರಿಸಿದರೆ ಸರಕಿನ ಪೂರೈಕೆಯು ಹೆಚ್ಚು ಧಾರಣೆ ಇಳಿಯುವುದು. ಉತ್ಪತ್ತಿಯ ಮೇಲೆ ಕರ ತೆರಿಗೆ ಹೇರಿದರೆ ಪೂರೈಕೆಯ ಪರಿಮಾಣ ಬತ್ತಬಹುದು. ಮಳೆ, ನೆರೆ, ಭೂಕಂಪ ಮೊದಲಾದ ನೈಸರ್ಗಿಕ ಸನ್ನಿವೇಶಗಳೂ ಪೂರೈಕೆಯ ಮೇಲೆ ಪ್ರಭಾವ ಬೀರುತ್ತವೆ. ಅಸ್ಸಾಮಿನ ಭೂಕಂಪದಿಂದಲೂ, ಮಹಾಪೂರ ದಿಂದಲೂ, ಆಹಾರ, ದವಸಗಳ ಒಟ್ಟು ಪೂರೈಕೆಗೆ ಧಕ್ಕೆ ಬಂದಿದೆ. ಆದರೆ ಇಂಥ ವಿಕೋಪಗಳು ಶಾಶ್ವತವಾಗಿರುವುದಿಲ್ಲ.

ತಾವು ಉತ್ಪಾದಿಸುವ ಸರಕಿನ ಮೇಲೆ ಉತ್ಪಾದಕರಿಗೆ ಆಸಕ್ತಿ ಕಡಿ ಮೆಯಾದರೆ ಪೂರೈಕೆಯು ಅಧಿಕವಾಗುವುದು. ಉದಾ: ಹಳ್ಳಿಯ ಗೌಳಿ ತಾನು ಮಾಡಿದ ತುಪ್ಪವನ್ನು ತಾನೇ ತಿನ್ನುವುದು ಕಡಿಮೆ ಮಾಡಿದಾಗ ಪೇಟೆಗೆ ಹೆಚ್ಚು ತುಪ್ಪದ ಪೂರೈಕೆಯಾಗುವುದು. ಉತ್ಪಾದನೆಯ ವೆಚ್ಚವು ಕಡಿಮೆಯಾದರೆ ಪೂರೈಕೆ ಅಧಿಕವಾಗುವುದು ಎಂತೂ ಇದೆಯಲ್ಲವೆ? ಪ್ರತಿನಿಧಾನತ್ವವುಳ್ಳ ಸರಕೊಂದರ ಧಾರಣೆ ಇಳಿದರೆ, ಆ ಸರಕಿನ ಉತ್ಪಾದ ನೆಯಲ್ಲಿ ಮಗ್ನವಾಗಿದ್ದ ಅವಯವಗಳಿಗೆ ಕಡಿಮೆ ಪ್ರತಿಫಲದೊರೆಯುವುದ ರಿಂದ ಅವು ಇನ್ನೊಂದು ಸರಕಿನ ಉತ್ಪಾದನೆಗೆ ಉಮೇದುವಾರಿಕೆಯಿಂದ ಮುಂದೆ ಬರಬಹುದು. ಇದು ಆ ಸರಕಿನ ಉತ್ಪಾದನೆಯೂ ಪೂರೈಕೆ ಯೂ ಹೆಚ್ಚುವುದಕ್ಕೆ ಸಹಾಯವಾಗುವುದು.

## ಪೂರೈಕೆ ಎಂದರೇನು?

ಪೂರೈಕೆಗೆ ಸಾಮಾನ್ಯವಾಗಿ ಅನೇಕಾರ್ಥಗಳುಂಟು. ಕಾಳಿದಾಸನ ಕೃತಿಗಳ ಪೂರೈಕೆ ಒಂದು ಶಾಶ್ವತ ಪರಿಮಾಣ; ಅವನ್ನು ಹೆಚ್ಚಿಸಲು ಸಾಧ್ಯವಿಲ್ಲ. ವಜ್ರದ ಪೂರೈಕೆ ಎಂದರೆ ಈಗ ಪ್ರಪಂಚದಲ್ಲಿ ಇರುವ ವಜ್ರ ಸಂಗ್ರಹ ಎಂದೇ ಭಾವಿಸಬೇಕು. ಏಕೆಂದರೆ, ವರ್ಷ ವರ್ಷವೂ ಗನಿಗಳಿಂದ ಉತ್ಪಾದಿತವಾಗುವ ವಜ್ರವು ಇರುವ ಸಂಗ್ರಹದ ಬರೀ ಅಲ್ಪಾಂಶ. 'ಕಲ್ಲಿದ್ದಲಿನ ಪೂರೈಕೆ' ಎಂದರೆ ಸಾಮಾನ್ಯವಾಗಿ ಒಂದು ದೇಶದಲ್ಲಿ ವರ್ಷ ಒಂದಕ್ಕೆ ಸಿಗುವ ಇಷ್ಟು ಲಕ್ಷ ಟನ್ ಕಲ್ಲಿದ್ದಲು ಎಂದು ಹೇಳುವೆವು. ನಿಶ್ಚಿತವಾದೊಂದು ಕಾಲಾವಧಿಯಲ್ಲಿ ಮಾರಾಟಕ್ಕೆ ಬಂದ ಪರಿಮಾಣ ಎಂಬ ಅರ್ಥದಲ್ಲಿ 'ಪೂರೈಕೆ'ಯನ್ನು ನಾವು ಇಲ್ಲಿ ಪ್ರಯೋಗಿಸಬೇಕು. ಪೂರೈಕೆ ಎಂದರೆ ಇಂಥ ನಿರ್ದಿಷ್ಟ ಧಾರಣೆಯಲ್ಲಿ ಬರುವ ಸರಬರಾಯಿ ಎಂಬುದು ಸ್ಪಷ್ಟ. ಧಾರಣೆ ಏರಿದರೆ ಪೂರೈಕೆಯು ಹಿಗ್ಗುವುದು, ಇಳಿದರೆ ಕುಗ್ಗುವುದು. ಪೂರೈಕೆಯ ಕಮಾನಿನ ವರ್ತನೆ ಬೇಡಿಕೆಯ ಕಮಾನಿಗೆ ವಿರುದ್ಧವಾದುದು– ಎಂದರೆ, ಪೂರೈಕೆಯ ಕಮಾನು ಬಲಗಡೆಗೆ ಆರೋಹಿಸುವುದು. ಬೇಡಿಕೆಯ ಸ್ಥಿತಿಸ್ಥಾಪಕತ್ವವನ್ನು ಅಳೆದಂತೆಯೇ ಪೂರೈಕೆಯ ಸ್ಥಿತಿ ಸ್ಥಾಪಕತ್ವವನ್ನೂ ಅಳೆಯಬಹುದು. ಧಾರಣೆಯು ಹೆಚ್ಚಿದ ಶತಾಂಶದಿಂದ ಪೂರೈಕೆಯು ಹೆಚ್ಚಿದ ಶತಾಂಶಕ್ಕೆ ಭಾಗಿಸಿದರೆ ಬರುವ ಲಬ್ಧವು ಪೂರೈಕೆಯ ಸ್ಥಿತಿ ಸ್ಥಾಪಕತ್ವ.

## ಸ್ಥಿರ ಪೂರೈಕೆ ಇರುವಾಗಿನ ಧಾರಣೆ:

ಮುಂಬಯಿಯಲ್ಲಿ ತಿಂಗಳೊಂದಕ್ಕೆ ೭೫,೦೦,೦೦೦ ಕುತ್ತಿ ಹಾಲು ಉತ್ಪಾದನೆಯಾಗುವುದೆಂದು ಭಾವಿಸುವ. ಮೊದಮೊದಲು ಹಾಲಿನ ಧಾರಣೆಯಲ್ಲಿ ಏರುಪೇರುಗಳುಂಟಾಗಿ ಕಟ್ಟಕಡೆಗೆ ೭೫ ಲಕ್ಷ ಕುತ್ತಿಯೂ ಮಾರಿಹೋಗುವ ಧಾರಣೆಯೊಂದು ಉಂಟಾಗುವುದು. ಕುತ್ತಿಗೆ ೨ ರುಪಾಯಿ ಇರುವಾಗ ಎಲ್ಲ ಹಾಲೂ ಮಾರಿಹೋಗುವುದೆಂದು ಎಣಿಸುವ. ಧಾರಣೆಯು ೨ ರುಪಾಯಿ ೮ ಆಣೆಗೆ ಏರಿದಾಗ ಎಷ್ಟೋ ಹಾಲು ಮಾರಿಹೋಗುವುದಿಲ್ಲವಾದುದರಿಂದ ಬರಬರುತ್ತ ಮಾರಾಟಗಾರರು ಹಾಲನ್ನು

ಕಡಮೆ ಧಾರಣೆಯಲ್ಲಿ ಆದರೂ ಸರಿಯೇ ಮಾರಿಬಿಡೋಣ ಎಂದು ಹಾತೊರೆಯುವರು ಧಾರಣೆಯು ೧ ರುಪಾಯಿ ೮ ಆಣೆಗೆ ಇಳಿದರೆ ಹಾಲಿನ ಬೇಡಿಕೆಯು ೭೫ಲಕ್ಷ ಕುತ್ತಿಗೂ ಮೀರಿಹೋಗುವುದು. ಪೂರೈಕೆಯು ಸ್ಥಿರವಾಗಿರುವಾಗ ಈ ಬೇಡಿಕೆಯುನ್ನು ತೃಪ್ತಿಪಡಿಸುವುದು ಸಾಧ್ಯವಿಲ್ಲ. ಹಾಲಿಗೆ ಮುತ್ತಿಗೆಬೀಳುವ ಜನಸಮುದಾಯುವನ್ನು ಕಂಡು ಮಾರಾಟಗಾರರು ಧಾರಣೆಯುನ್ನು ನಿಧಾನವಾಗಿ ಏರಿಸುತ್ತ ಏರಿಸುತ್ತ ಮರಳಿ ೨ ರುಪಾಯಿಗೆ ತಂದಿಡುವರು ಹಾಲನ್ನು ಎಲ್ಲರೂ ಕೊಂಡುಕೊಳ್ಳಲಿಕ್ಕೂ ಎಲ್ಲ ಹಾಲು ಮಾರಿಹೋಗುವುದಕ್ಕೂ ಸಮನಾದ ಧಾರಣೆ ಎಂದರೆ ಎರಡು ರುಪಾಯಿ ಎಂಬುದು ಆಗ ಮಾರಾಟಗಾರರಿಗೆ ಹೊಳೆಯುವುದು. ಇದೇ 'ಸಮತೋಲ ಧಾರಣೆ'

**ವ್ಯತ್ಯಾಸವಾಗುವ ಪೂರೈಕೆಯು ಇರುವಾಗಿನ ಧಾರಣೆ:**

ಪ್ರತಿ ತಿಂಗಳಿನ ಪೂರೈಕೆಯು ವ್ಯತ್ಯಾಸಗೊಳ್ಳುವುದಾದರೆ ಧಾರಣೆ ಏರಿದೊಡನೆ ಪೂರೈಕೆ ಹೆಚ್ಚಿಸುವುದಕ್ಕೂ, ಇಳಿದೊಡನೆ ಪೂರೈಕೆಯನ್ನು ಕಮ್ಮಿ ಮಾಡುವುದಕ್ಕೂ ಅವಕಾಶ ಸಿಗುವುದು. ಹಾಲಿನ ಧಾರಣೆ ೨ ರೂ. ೮ ಆಣೆಯಾದ ಕೂಡಲೇ ಹೆಚ್ಚು ಮೇವನ್ನು ಹಾಕಿಯೋ, ಹೆಚ್ಚು ಎಮ್ಮೆಗಳನ್ನು ಸಾಕಿಯೋ, ಅಥವಾ ದೂರ ದೂರದ ಹಳ್ಳಿಗಳಿಂದ ಸರಬರಾಯಿ ಮಾಡಿಸಿಯೋ, ಪೂರೈಕೆಯ ಗಾತ್ರವನ್ನು ಹೆಚ್ಚಿಸಬಹುದು. ಧಾರಣೆಯು ಕಡಮೆಯಾದರೆ ಪೇಟೆಗೆ ತರುವ ಹಾಲಿನಲ್ಲಿ ಸ್ವಲ್ಪಾಂಶ ಹಾಲನ್ನು ತಾವೇ ಕುಡಿದು, ಸ್ವಲ್ಪಾಂಶ ಕರುಗಳಿಗೆ ಕುಡಿಸಿ, ಇನ್ನು ಸ್ವಲ್ಪಾಂಶದಿಂದ ಫೇಡೆ ಮಾಡಿಟ್ಟು—ಹೇಗೂ ಹಾಲನ್ನುಳಿಸಿಕೊಂಡು–ಸಮತೋಲ ಧಾರಣೆಯು ಬರುವವರೆಗೆ ಕಾಯಬೇಕಾಗುವುದು. ಧಾರಣೆಯು ಏರಿದಾಗ ಪೂರೈಕೆಯು ಹೆಚ್ಚುವುದರಿಂದಾಗಿ, ಸ್ವಲ್ಪ ಕಾಲಾನಂತರ ಧಾರಣೆಯು ನಿಧಾನವಾಗಿ ಇಳಿಯುತ್ತಾ ಬಂದು (೨ ರೂ. ೮ ಆಣೆಯಿಂದ ೨ ರೂ. ೪ ಆಣೆಗೆ) ಪೂರೈಕೆಯು ಕಡಿಮೆಯಾಗಲು ಪ್ರೋತ್ಸಾಹ ದೊರೆಯುವುದು. ಕಡಮೆ ಪೂರೈಕೆಯ ದೆಸೆಯಿಂದ ಧಾರಣೆಯು ಮರಳಿ ಕ್ರಮಶಃ (೨ ರೂಪಾಯಿಯಿಂದ ೨ ರೂ. ೪ ಅಣೆಗೆ) ಏರಿರಬಹುದು.

## ಪೂರೈಕೆ, ಬೇಡಿಕೆ—ಎರಡರಲ್ಲೂ ವ್ಯತ್ಯಾಸ ಬಂದಾಗ:

ಬೇಡಿಕೆಯಲ್ಲಿ ಏತಕ್ಕೆ ಬದಲಾವಣೆಗಳುಂಟಾಗುವುವು ಎಂಬುದನ್ನು ಈ ಮೊದಲೇ ನೋಡಿರುವೆವು. ಬೇಡಿಕೆಯು ಹೆಚ್ಚಿದರೆ ಉತ್ಪಾದನೆಯ ವೆಚ್ಚದಮೇಲೂ ಪರಿಣಾಮವಾಗುವುದು ಕಾಮಗಾರನ ವರಮಾನವು ಉತ್ಪಾದಕನ ದೃಷ್ಟಿಯಲ್ಲಿ ವೆಚ್ಚವಲ್ಲವೆ? ತಾಂತ್ರಿಕ ನೈಪುಣ್ಯವು ಅಭಿವೃದ್ಧಿಗೊಂಡರೆ ಸರಕಿನ ಉತ್ಪಾದನೆಯು ವರ್ಧಿಸುವುದೆಂದು ಈಗಾಗಲೇ ಕಂಡಿರುವೆವು ಈ ನಡುವೆ ಬೇಡಿಕೆ ಪೂರೈಕೆಗಳು ಉಂಟಾಗುವ ಪರಿಸ್ಥಿತಿಯೇ ಬದಲಾಗುವುದುಂಟು. ಅತಿ ಹೆಚ್ಚು ರೈಲುಯಂತ್ರಗಳ ಬೇಡಿಕೆ ಭಾರತದಲ್ಲಿ ಒಮ್ಮಿಂದೊಮ್ಮೆ ಆವಿರ್ಭವಿಸಿದ ಹೊತ್ತಿನಲ್ಲೇ ತಾಂತ್ರಿಕ ಪ್ರಗತಿಯ ದೆಸೆಯಿಂದ ನಮ್ಮ ಕಾರ್ಖಾನೆಗಳಲ್ಲಿ ಮೊದಲಿಗಿಂತ ಇಮ್ಮಡಿ ಯಂತ್ರಗಳನ್ನು ಸೃಷ್ಟಿಮಾಡುವ ಚೈತನ್ಯವೂ ಒಡಮೂಡಿದರೆ ಧಾರಣೆಯು ಹೇಗೆ ನಿಂತೀತೆಂದು ಒಮ್ಮೆಲೆ ಹೇಳಲು ಸಾಧ್ಯವಿಲ್ಲ ಪೂರೈಕೆಯು ಹೆಚ್ಚುವಾಗಲೇ ಬೇಡಿಕೆಯು ಕಮ್ಮಿಯಾದರೆ ಸರಕಿನ ಧಾರಣೆಬೀಳುವುದೆಂದೂ, ಪೂರೈಕೆ ಕಮ್ಮಿಆದಾಗ ಬೇಡಿಕೆ ಅಧಿಕವಾದರೆ ಧಾರಣೆ ಹೆಚ್ಚುವುದೆಂದೂ ಖಚಿತವಾಗಿ ಹೇಳಬಹುದು ಆದರೆ ಪೂರೈಕೆಯೂ ಏರಿ, ಬೇಡಿಕೆಯೂ ಏರಿದರೋ? ಪೂರೈಕೆ ತಗ್ಗಿದ ಕಾಲದಲ್ಲೇ ಬೇಡಿಕೆಯು ಕ್ಷೀಣಿಸಿದರೋ? ಮಾರಾಟದ ಗಾತ್ರದಲ್ಲಿ ಹೆಚ್ಚುಕಡಮೆ ಆಗುವುದು ಎಂದಿಷ್ಟೇ ಸೂಚಿಸಬಹುದಲ್ಲದೆ ಧಾರಣೆಯನ್ನು ನಿಷ್ಕರ್ಷಿಸುವುದು ಕಷ್ಟ. ಬೇಡಿಕೆ ಪೂರೈಕೆಗಳು ತಮ್ಮನ್ನು ಹೊಸ ಪರಿಸ್ಥಿತಿಗೆ ಒಗ್ಗಿಸಿಕೊಂಡಾಗ ಹೊಸ ಕಮಾನುಗಳೆರಡು ಸಿದ್ಧವಾಗುವುವು. ಅವು ಒಂದನ್ನೊಂದು ಛೇದಿಸುವ ಸ್ಥಳದಲ್ಲಿ ಸಮತೋಲ ಧಾರಣೆ ಇರುವುದು.

## ಅಲ್ಪಾವಧಿ ಮತ್ತು ದೀರ್ಘಾವಧಿಯ ಪರಿಣಾಮಗಳು:

ಬೇಡಿಕೆಯಲ್ಲಿ ಶಾಶ್ವತವಾಗಿ ಒಂದು ಬದಲಾವಣೆ ಜರಗಿತೆಂದು ಭಾವಿಸುವ. ಭಾರತೀಯರೆಲ್ಲ ಕೈಯಲ್ಲಿ ಉಣುವುದನ್ನು ಮರೆತು ಚಮ್ಚ ಉಪಯೋಗಿಸಲು ಕಲಿತು, ಚಮ್ಚಕ್ಕೆ ಬೇಡಿಕೆ ಏರಿತೆಂದು ಎಣಿಸುವ. ಬೇಡಿಕೆ ಏರಿದ ತತ್‌ಕ್ಷಣ ಬರುವ ನಡುಗಾಲದಲ್ಲಿ (ಅಲ್ಪಾವಧಿಯಲ್ಲಿ) ಚಮ್ಚ

ತಯಾರಿಸುತ್ತಿರುವ ಕಾರ್ಖಾನೆಗಳು ತಮ್ಮ ಸಾಮರ್ಥ್ಯಪೂರ್ತಿಯಾಗಿ ಚಮ್ಚು ತಯಾರಿಸುವುವು. ಇಷ್ಟಿದ್ದೂ ಬೇಡಿಕೆಯನ್ನು ಸಂಪೂರ್ಣವಾಗಿ ತೃಪ್ತಿಗೊಳಿಸುವುದು ಅಸಾಧ್ಯವಾಗಿ ಚಮ್ಚುದ ಧಾರಣೆ ಅಸಾಧಾರಣವಾಗಿ ಏರಬಹುದು. ಆದರೆ ತಿಂಗಳುಗಳು ಉರುಳಿದಂತೆ ಚಮ್ಚುತಯಾರಿಸುವ ಹೊಸ ಫರ್ಮುಗಳು ತೆರೆಯಲ್ಪಟ್ಟು ಕೊನೆಗೆ ಬೇಕಷ್ಟು ಚಮ್ಚುಗಳು ತಯಾರಾಗುವಾಗ ಧಾರಣೆಯು ಕೊಂಚ ಇಳಿಮುಖವಾಗುವುದು.




ಚಿತ್ರದಲ್ಲಿ DD ಹಳೆಯ ಬೇಡಿಕೆ ಕಮಾನು. $S_sS_s$ ಹಳೆಯ ಹಾಗೂ ಅಲ್ಪಾವಧಿಯ ಪೂರೈಕೆಯ ಕಮಾನು. $D^1D^1$ ಹೊಸ ಬೇಡಿಕೆಯ ಕಮಾನು P ಚಮ್ಚುಕ್ಕೆ ಮೊದಲು ಇದ್ದ ಧಾರಣೆ. $P^1$ ಅಲ್ಪಾವಧಿಯ ಧಾರಣೆ; ಆಗ ಉತ್ಪಾದನೆಯ ಪರಿಮಾಣ OQ ದಿಂದ $OQ^1$ಗೆ ಏರುವುದು. ಹೊಸ ಬೇಡಿಕೆಯ ಕಮಾನು ಹೊಸ ಪೂರೈಕೆಯ ಕಮಾನನ್ನು ಛೇದಿಸುವ $P^2$

ಬಿಂದುವನ್ನು ನೋಡಿರಿ. ಅದು P[1] ಗಿಂತ ಕೆಳಗಿದೆ; ಆದರೆ ಉತ್ಪಾದನೆಯ ಗಾತ್ರವು ಮಾತ್ರ OQ[1] ಗಿಂತಲೂ ಮುಂದಾಗಿದೆ. ಅಲ್ಪಾವಧಿಯಲ್ಲಿ ಪೂರೈಕೆ (ಉತ್ಪಾದನೆ) ಏರುವುದಕ್ಕಿಂತಲೂ ಅಧಿಕ ದಾಮಾಶಯದಲ್ಲಿ ಧಾರಣೆಯು ಏರುವುದು ದೀರ್ಘಾವಧಿಯಲ್ಲಿ ಪೂರೈಕೆಯು ವಿಸ್ತರಿಸಿದ ದಾಮಾಶಯಕ್ಕಿಂತ ಧಾರಣೆ ಏರಿದ ದಾಮಾಶಯವು ಕಡಮೆ. ಬೇಡಿಕೆಯಲ್ಲುಂಟಾಗುವ ಬದಲಾವಣೆಯ ದೆಸೆಯಿಂದಾಗಿ ಧಾರಣೆಯಲ್ಲಿ ದೊಡ್ಡ ಬದಲಾವಣೆಯೂ, ಉತ್ಪಾದನೆಯಲ್ಲಿ ಚಿಕ್ಕ ಬದಲಾವಣೆಯೂ ಜರಗುವುದು ದೀರ್ಘಾವಧಿಗಿಂತಲೂ ಅತಿಶಯವಾಗಿ ಅಲ್ಪಾವಧಿಯ ಲಕ್ಷಣ ಎನ್ನಬೇಕು.

**ಪೂರೈಕೆಯ ಸ್ಥಿತಿಸ್ಥಾಪಕತ್ವ:**

ಧಾರಣೆಯ ಬದಲಾವಣೆಗಳನ್ನು ಅನುಸರಿಸಿ ಪೂರೈಕೆಯು ಬದಲಾವಣೆ ಹೊಂದಿದರೆ ಅದಕ್ಕೆ ಸ್ಥಿತಿಸ್ಥಾಪಕತ್ವ ಉಂಟೆಂದೂ, ಹಾಗೆ ಹೇಳಿಕೊಳ್ಳುವ ಯಾವ ಬದಲಾವಣೆಯೂ ಉಂಟಾಗದಿದ್ದರೆ ಸ್ಥಿತಿಸ್ಥಾಪಕತ್ವವು ಇಲ್ಲವೆಂದೂ ತಿಳಿಯತಕ್ಕುದು ಸಾಮಾನ್ಯವಾಗಿ ಮಾರಾಟದ ಧಾರಣೆ ಏರಿದಾಗ ಉತ್ಪಾದಕರು ತಮ್ಮ ಉತ್ಪಾದನೆಯನ್ನು ಬೆಳೆಸುವರು; ಹೊಸ ಜನರು ಆ ಸರಕಿನ ಉತ್ಪಾದನೆಗೆ ಇಳಿಯುವರು; ಪೂರೈಕೆಯು ಅಧಿಕವಾಗುವುದು. ಧಾರಣೆಯು ಕಡಮೆಯಾದಾಗ ಇದಕ್ಕೆ ವಿಪರೀತವಾಗಿ ಪೂರೈಕೆ ಕಮ್ಮಿಯಾಗಲು ಉತ್ತೇಜನ ದೊರೆಯುವುದು. ಹೊಸ ಸರಕು ಉತ್ಪಾದನೆಯಾಗಲು ಸ್ವಲ್ಪ ಸಮಯ ಹಿಡಿಯುವುದರಿಂದ ಧಾರಣೆ ಬದಲಿಸಿದೊಡನೆ ಬೆನ್ನಲ್ಲೇ ಪೂರೈಕೆಯ ಬದಲಾವಣೆಯೂ ಉಂಟೆಂದು ತಿಳಿಯುವ ಹಾಗಿಲ್ಲ ದೀರ್ಘಕಾಲದಲ್ಲಿ ಪೂರೈಕೆಯು ಸ್ಥಿತಿಸ್ಥಾಪಕವಾಗಿರುವುದೆಂಬ ಮಾತು ಬೇರೆ.

**ಬೇಡಿಕೆ ಪೂರೈಕೆಗಳ ಪ್ರಭೇದಗಳು:**

(೧) ವಿಕಲ್ಪ ಬೇಡಿಕೆ ಹಾಗೂ ಪೂರೈಕೆ–: ಪ್ರತಿನಿಧಾನದ ಗುಣವುಳ್ಳ ಎರಡು ಸರಕುಗಳಲ್ಲಿ ಯಾವುದಾದರೂ ಒಂದನ್ನು ಆಯ್ದುಕೊಳ್ಳುವ ಸ್ಥಿತಿ ಇದ್ದರೆ ಆಗ ಬೇಡಿಕೆಯು ವಿಕಲ್ಪವಾಗಿರುವುದು. ಉದಾ:– ವಿದ್ಯುದ್ದೀಪ,

ಗ್ಯಾಸ್‌ದೀಪ; ಬ್ಲೇಡು, ರೇಜರು. ಪ್ರಪಂಚದಲ್ಲಿ ರೇಜರು ಇಲ್ಲದೆನೆ ಹೋದರೆ ಬ್ಲೇಡು ಮುಗ್ಗಟ್ಟಿನ ಕಾಲದಲ್ಲಿ ಬ್ಲೇಡಿನ ಧಾರಣೆಯು ಎಷ್ಟು ಏರುತಿದ್ದಿತೋ ಅಷ್ಟು ರೇಜರು ಇರುವಾಗ ಏರಲಾರದು ಬ್ಲೇಡು ಕಡಮೆ ಯಾದರೆ ಧಾರಣೆ ಹೆಚ್ಚುವುದು ಸಹಜವಾದರೂ ಅದಕ್ಕೆ ಪ್ರತಿನಿಧಾನವಾದ ರೇಜರು ಇರುವುದರಿಂದ ಧಾರಣೆಯು ಅಪರಿಮಿತವಾಗಿ ಹೆಚ್ಚಲಾರದು. ಬ್ಲೇಡು ರೇಜರುಗಳ ಬೆಲೆ ಪರಸ್ಪರ ಸಂಬಂಧ ಉಳ್ಳುವು.

ಇಂತೆಯೇ ಏಕಮಾತ್ರ ಮೂಲಸಾಮಗ್ರಿಯಿಂದ ಎರಡು ಸರಕು ಗಳನ್ನು ತಯಾರಿಸಲು ಉಪಯೋಗವಾಗುವಂತಿದ್ದು ನಾವು ಅವುಗಳ ಲ್ಲೊಂದನ್ನು ಪೂರೈಸುವುದಕ್ಕೆ ವಿಕಲ್ಪ ಪೂರೈಕೆ ಎನ್ನುವರು. ಒಂದೆಕರೆ ಗದ್ದೆಯಲ್ಲಿ ಅಕ್ಕಿಯನ್ನು ಬೆಳೆಯುಬಹುದು; ಅಥವಾ ರಾಗಿ ಬೆಳೆಯುಬಹುದು.

(೨) ಮಿಶ್ರಬೇಡಿಕೆ, ಮಿಶ್ರ ಪೂರೈಕೆ.– ಎರಡು ಮೂರು ಉದ್ದೇಶಗಳ ಸಲುವಾಗಿ ಒಂದು ಬೇಡಿಕೆಯು ಏಳುವುದು ಮಿಶ್ರಬೇಡಿಕೆ. ಕಟ್ಟಿಗೆಯನ್ನು ಒಲೆ ಉರಿಸಲಿಕ್ಕೆ ಉಪಯೋಗಿಸಬಹುದು, ತಲೆ ಒಡೆಯುವುದಕ್ಕೂ ಬಳಸಿ ಕೊಳ್ಳಬಹುದು; ತಲೆಯು ಸಂಪೂರ್ಣವಾಗಿ ಒಡೆದಮೇಲೆ ಹೆಣ ಸುಡುವು ದಕ್ಕೆ ಅದೇ ಕಟ್ಟಿಗೆಯನ್ನುಪಯೋಗಿಸಬಹುದು.

ಒಂದಕ್ಕಿಂತ ಹೆಚ್ಚು ಮೂಲಸಾಮಗ್ರಿಗಳಿಂದ ಒಂದೇಬಗೆಯ ಸರ ಕನ್ನು ಉತ್ಪಾದಿಸುವ ಹಾಗಿದ್ದರೆ ಅದು ಮಿಶ್ರಪೂರೈಕೆ. ಎಣ್ಣೆಯನ್ನು ಕೊಬರಿಯಿಂದಲೂ ತೆಗೆಯಬಹುದು, ಚರ್ಬಿಯಿಂದಲೂ ತೆಗೆಯಬಹುದು.

(೩) ಜಂಟಿ ಬೇಡಿಕೆ ವ ಪೂರೈಕೆ.– ಒಂದರ ಜತೆಯಲ್ಲೊಂದು ಉಪ ಯೋಗಿಸುವ ಸರಕುಗಳ ಬೇಡಿಕೆಯು ಜಂಟಿ ಬೇಡಿಕೆ ಎನಿಸುವುದು. ಉದಾ: ಸಿಗರೇಟು ಮತ್ತು ಅದರ ಡಬ್ಬಿ. ಒಂದು ಸರಕಿನ ಉತ್ಪಾದನೆಯು ಜರಗುವಾಗ ಇನ್ನೊಂದು ಉತ್ಪತ್ತಿ ಹೊರಬರುವುದುಂಟು. ರಾಸಾಯನಿಕ ಉತ್ಪಾದನೆಯಲ್ಲಿ ಇಂಥ ಜಂಟಿಪೂರೈಕೆಯು ಸಾಮಾನ್ಯವಾಗಿ ನಡೆಯು ವುದು. ಉದಾ: ಡಾಮರೂ ಬಣ್ಣಗಳೂ ಒಡಹುಟ್ಟುಗಳು.

ಈ ಬಗೆಯ ಸಂಬಂಧಗಳಿಗೆ ಧಾರಣೆಯ ನಿರ್ಣಯದಲ್ಲಿ ಒಂದು ಮಹತ್ತ್ವವಿದೆ. ಜಂಟಿ ಪೂರೈಕೆಯು ಬರುವ, ಉಣ್ಣೆ ಮಾಂಸಗಳನ್ನು

ಕೊಡುವ ಕುರಿಯನ್ನು ಸಾಕುವವನಿಗೆ ಉಣ್ಣೆ ಮಾಂಸಗಳ ಜಂಟಿ ಬೆಲೆಯೇ ಮುಖ್ಯವಲ್ಲದೆ ಅವುಗಳ ಪ್ರತ್ಯೇಕ ಪ್ರತ್ಯೇಕವಾದ ಬೆಲೆಯಲ್ಲ. ಉತ್ಪಾದನೆಯ ವೆಚ್ಚವು ಜಂಟಿ ಧಾರಣೆಗಿಂತ ಕಡಮೆಯಾಗಿರುವವರೆಗೆ ಅವನು ಕುರಿಸಾಕುವುದನ್ನು ಬಿಡುವುದಿಲ್ಲ. ಹತ್ತಿಯ ಬೆಲೆ ಏರಿದರೂ ಹತ್ತಿಯ ಕಾಳಿನ ಧಾರಣೆಯು ಏರದಪಕ್ಷಕ್ಕೆ ಒಟ್ಟು ಹತ್ತಿಯ ಪೂರೈಕೆಯು ಮೊದಲಿನಷ್ಟೇ ಇರಬಹುದು

**ಬೇಡಿಕೆ ಪೂರೈಕೆಗಳ ನಿಯಮಗಳು:**

(೧) ನಿಶ್ಚಿತವಾದೊಂದು ಧಾರಣೆಯಲ್ಲಿ ಬೇಡಿಕೆಯು ಪೂರೈಕೆಗಿಂತ ಅಧಿಕವಾದರೆ ಧಾರಣೆಯು ಹೆಚ್ಚಾಗುವ ಪ್ರವೃತ್ತಿ ಇರುವುದು. ಪೂರೈಕೆ ಅಧಿಕವಾಗಿ ಬೇಡಿಕೆ ಕಮ್ಮಿಯಾದರೆ ಧಾರಣೆ ಇಳಿಯುವ ಪ್ರವೃತ್ತಿ ಇದೆ.

(೨) ಧಾರಣೆಯು ಏರಿದಾಗ ಬೇಡಿಕೆಯು ಕುಗ್ಗಿ ಪೂರೈಕೆಯು ಹಿಗ್ಗುವುದು, ಧಾರಣೆಯು ಇಳಿದಾಗ ಬೇಡಿಕೆ ಹೆಚ್ಚಾಗುವುದು, ಪೂರೈಕೆ ತಗ್ಗುವುದು.

(೩) ಧಾರಣೆಯು ಸಮತೋಲದಲ್ಲಿ ಪೂರೈಕೆ ಬೇಡಿಕೆಗಳನ್ನು ಸಮೀಕರಿಸುವುದು.

(೪) ಬೇಡಿಕೆ ಅಧಿಕವಾಗಿ ಪೂರೈಕೆ ಕಮ್ಮಿಯಾದರೆ ಧಾರಣೆ ಏರುವುದು. ಬೇಡಿಕೆ ಕಮ್ಮಿಯಾಗಿ ಪೂರೈಕೆ ಅಧಿಕವಾದರೆ ಧಾರಣೆ ಇಳಿಯುವುದು.

(೫) ಬೇಡಿಕೆಯೂ ಪೂರೈಕೆಯೂ ಎರಡೂ ಅಧಿಕವಾದರೆ ಉತ್ಪಾದನೆಯ ಗಾತ್ರ ಬೆಳೆಯುವುದು ಎಂದಿಷ್ಟೇ ಹೇಳಬಹುದಲ್ಲದೆ ಧಾರಣೆಗೆ ಏನಾದೀತೆಂಬುದನ್ನು ಊಹಿಸಬರುವಂತಿಲ್ಲ. ಬೇಡಿಕೆ ಕುಗ್ಗಿ ಪೂರೈಕೆಯು ಹಿಗ್ಗಿದಾಗ ಉತ್ಪಾದನೆಯ ಗಾತ್ರ ಕುಗ್ಗುವುದು ಖಂಡಿತವೆಂದು ಹೇಳಬಹುದೇ ಹೊರತು ಧಾರಣೆ ಎಷ್ಟಾಗುವುದೆಂದು ಊಹಿಸುವುದು ಸಾಧ್ಯವಿಲ್ಲ.

**ಮಾರ್ಕೆಟು ಧಾರಣೆಯು ಹೇಗೆ ನಿರ್ಣಯವಾಗುವುದು?**

ಮಾರ್ಕೆಟು ಧಾರಣೆಯ ಮೀಮಾಂಸೆಯು ಮಾರ್ಕೆಟಿನಲ್ಲಿರುವ (ನಿಶ್ಚಿತವಾದ) ಸರಕುಗಳಿಗೆ ಯಾವ ಧಾರಣೆಯಾಗುವುದು ಎಂಬುದನ್ನು ವಿವರಿ

ಸುವುದು. ಮಾರ್ಕೆಟಿಗೆ ಬಂದ ವ್ಯಕ್ತಿ ಹಲವಾರು ಸರಕುಗಳ ಧಾರಣೆಯನ್ನು ಇದಿರಿಸುವನು. ಅವುಗಳ ಪೈಕಿ ಅವನು ಆರಿಸಿಕೊಂಡ ಸರಕುಗಳ ಪರಿಸರದ ಸಂಬಂಧವು ಅವನ ದೃಷ್ಟಿಯಲ್ಲಿ ಎಷ್ಟಿರುವುದೋ ಮಾರ್ಕೆಟಿನ ದೃಷ್ಟಿಯಲ್ಲಿಯೂ ಅಷ್ಟೇ ಇರುವುದಾದರೆ ವ್ಯಕ್ತಿಯು ಸಮತೋಲದಲ್ಲಿರುವನೆಂದು ಹೇಳಬಹುದು. ಮಾರ್ಕೆಟಿನವರ ಮೌಲ್ಯ ನಿಷ್ಪತ್ತಿಯೂ ವ್ಯಕ್ತಿಯ ಮೌಲ್ಯ ನಿಷ್ಪತ್ತಿಯೂ ಒಂದೇ ಆಗಿರಬೇಕು ಧಾರಣೆಯ ಮಾನದಂಡವು 'ಐಯ್ಕಿಯ ನಿಯಮ'ದಿಂದ ಹುಟ್ಟುವುದು. ಮಾರ್ಶಲ್ ಕೊಟ್ಟಿರುವ ನಿದರ್ಶನದಲ್ಲಿ ಧಾರಣೆಯು ಏರಿದ ಹಾಗೆ ಕೊಂಡುಕೊಂಡ ಧಾನ್ಯದ ಪರಿಮಾಣ ಕಮ್ಮಿಯಾಗುವುದು ವ್ಯಕ್ತಿಯೊಬ್ಬ ಪ್ರತಿಯೊಂದು ಧಾರಣೆಯಲ್ಲಿಯೂ ಎಷ್ಟು ಕೊಳ್ಳುವನೆಂಬುದರ ಕೋಷ್ಟಕವನ್ನು ವಿರಚಿಸಿದರೆ 'ವ್ಯಕ್ತಿಯ ಬೇಡಿಕೆಯ ಕೋಷ್ಟಕವೂ,' ಎಲ್ಲ ವ್ಯಕ್ತಿಗಳ ಇಂಥ ಕೋಷ್ಟಕಗಳನ್ನು ಜೋಡಿಸಿದರೆ 'ಮಾರ್ಕೆಟು ಬೇಡಿಕೆಯ ಕೋಷ್ಟಕವೂ' ರಚಿತವಾಗುವುವು.



| ಧಾರಣೆ | ಪೂರೈಕೆ | ಬೇಡಿಕೆ |
|---|---|---|
| ೧೫ ಆಣೆ | ೧೦೦೦ ರಾತಲು | ೬೦೦ ರಾತಲು |
| ೧೧ ಆಣೆ | ೭೦೦ ರಾತಲು | ೭೦೦ ರಾತಲು |
| ೯ ಆಣೆ | ೬೦೦ ರಾತಲು | ೯೦೦ ರಾತಲು |

ಅಲ್ಪಾವಧಿಯಲ್ಲಿ ಮಾರಲು ಬರುವ ಧಾನ್ಯಕ್ಕೆ ಒಂದು ನಿಶ್ಚಿತವಾದ ಪರಿಮಾಣ ಇರುವುದರಿಂದ ಆ ಇಡಿ ಪರಿಮಾಣವು ಮಾರಿಹೋಗಲು ಯಾವುದೋ ಒಂದು ಧಾರಣೆಯು ಇರುವುದು. ಪ್ರಕೃತ ನಮ್ಮ ಧಾನ್ಯದ ಪೇಟಯಲ್ಲಿ ೧೧ ಆಣೆ ಧಾರಣೆ ಇರುವಾಗ ಎಲ್ಲ ಧಾನ್ಯಸಂಗ್ರಹವೂ ಖರ್ಚಾಗುವುದು. ಹನ್ನೊಂದು ಆಣೆಯು, ಪೂರೈಕೆಯೂ ಬೇಡಿಕೆಯೂ ಸಮತೋಲವಾಗುವ ಧಾರಣೆ.

## ತಟಸ್ಥ ಧಾರಣೆಯೂ ಮೌಲ್ಯ:

ಕೆಲವು ವರ್ಷಗಳನ್ನು ತೆಗೆದುಕೊಂಡಲ್ಲಿ ಉತ್ಪಾದನೆಯ ಸರಾಸರಿ ವೇಗವೂ, ಅನುಭೋಗದ ಸರಾಸರಿ ವೇಗವೂ ತಕ್ಕುಮಟ್ಟಿಗೆ ಒಂದೇ ಆಗಿರ ತಕ್ಕುದು. ಅನುಭೋಗಕ್ಕಿಂತ ಉತ್ಪಾದನೆಯು ಹೆಚ್ಚಾದರೆ ಸಂಗ್ರಹಕ್ಕೆ ಒಳಸೇರುವ ಸರಕು ಅದರಿಂದ ಹೊರಹೋಗುವ ಸರಕಿಗಿಂತ ಹೆಚ್ಚಾಗುವುದರಿಂದ ಸಂಗ್ರಹವು ಬೆಳೆಯುವುದು. ಆದರ ಸಂಗ್ರಹವು ಹೀಗೆ ಒಂದೇ ಸವನೆ ಬೆಳೆಯುತ್ತಾ ಹೋಗಲಾರದು. ಏಕೆಂದರೆ ಸಾಮಾನು ಇಡಲು ಗೋದಾಮು ಸಾಲದಿರುವದು ಮಾತ್ರವಲ್ಲ, ಸಂಗ್ರಹವು ಅತಿರೇಕವಾಗಿ ಬೆಳೆದರೆ ಗಿರಾಕಿಗಳಿಗೆ ಅಂಜಿಕೆಯಾಗಿ ಅವರು ಅದನ್ನು ಕೊಳ್ಳಲು ಮನಸ್ಸು ಮಾಡದಿರಬಹುದು. ಉತ್ಪಾದನೆಗಿಂತ ಅನುಭೋಗವು ಅಧಿಕವಾದರೆ ಸಂಗ್ರಹವು ಕ್ಷೀಣಿಸುವುದು. ಕ್ಷೀಣಿಸುತ್ತಾ ಕ್ಷೀಣಿಸುತ್ತಾ ನಶಿಸಿಹೋಯಿತೆನ್ನೋಣ. ಆ ಮೇಲೆ ಕ್ಷೀಣಿಸುವುದಕ್ಕಿದೆಯೆ? ಇದೂ ಒಂದು ಪರಿಮಿತಿ. ಅಂತೂ ಉತ್ಪಾದನೆಯ ವೇಗವೂ, ಅನುಭೋಗದ ವೇಗವೂ ಏಕೀಭವಿಸುವಂತೆ ನಮ್ಮ ಸಮಾಜದಲ್ಲಿ ಏನಾದರೊಂದು ವ್ಯವಸ್ಥೆ ಇರಬೇಕಲ್ಲವೆ?

ಸ್ವತಂತ್ರ ಬಂಡವಾಳಗಾರ ಸಮಾಜದಲ್ಲಿ ಈ ವ್ಯವಸ್ಥೆಯು ಧಾರಣೆಯ ಮೂಲಕ ನಡೆಯುವುದು. ಅಧಿಕ ಬೆಲೆಯಿಂದ ಉತ್ಪಾದನೆಗೆ ಪ್ರೋತ್ಸಾಹವೂ, ಅನುಭೋಗಕ್ಕೆ ನಿರುತ್ಸಾಹವೂ; ಧಾರಣೆಯ ಇಳಿತದಿಂದ ಉತ್ಪಾ

ದನೆಗೆ ನಿರುತ್ಸಾಹವೂ, ಅನುಭೋಗಕ್ಕೆ ಪ್ರೋತ್ಸಾಹವೂ ದೊರೆಯುವು ದನ್ನು ನಾವು ಬಲ್ಲೆವು. ನಿಶ್ಚಿತವಾದ ಪರಿಸ್ಥಿತಿಯಲ್ಲಿ, ಪ್ರತಿಯೊಂದು ಸರಕಿನ ಉತ್ಪಾದನೆಯ ವೇಗವನ್ನೂ ಅನುಭೋಗದ ವೇಗವನ್ನೂ ಸಮ ತೂಕವಾಗಿರಿಸಬಲ್ಲ ಒಂದು ಧಾರಣೆಯಿದೆ. ಅದಕ್ಕೆ 'ತಟಸ್ಥಧಾರಣೆ' ಅಥವಾ ಯಥಾಸ್ಥಿತ ಧಾರಣೆ ಎನ್ನುತ್ತಾರೆ. ತಟಸ್ಥಧಾರಣೆಯು ಮಾರ್ಕೆ ಟಿನಲ್ಲಿ ನೋಡಸಿಗುವುದಿಲ್ಲ. ವಾಸ್ತವಿಕ ವಿನಿಮಯವು ನಡೆಯುವಲ್ಲಿ ಈ ಧಾರಣೆಯು ಇಲ್ಲ, ಇರಬೇಕಾಗಿಲ್ಲ—ಅಂದರೆ, ತಟಸ್ಥಧಾರಣೆಯೂ ಮಾರ್ಕೆ ಟು ಧಾರಣೆಯೂ ಒಂದೇ ಅಲ್ಲ. ಉತ್ಪಾದನೆಯ ವೇಗಕ್ಕೆ ಪ್ರೋತ್ಸಾಹವೂ, ಅನುಭೋಗದ ವೇಗಕ್ಕೆ ನಿರುತ್ಸಾಹವೂ ಬರುವಂಥ ಮಾರ್ಕೆಟು ಧಾರಣೆಯು ಪ್ರಚಲಿತವಾಗಿದ್ದರೆ ಅಂಥಲ್ಲಿ ಮಾರ್ಕೆಟು ಧಾರಣೆಯು, ತಟಸ್ಥಧಾರಣೆಗಿಂತ ಅತಿಶಯವಾಗಿರುವುದೆಂದು ತಿಳಿಯತಕ್ಕುದು. ಅನುಭೋಗದ ವೇಗವು ಉತ್ಪಾದನೆಯ ವೇಗಕ್ಕಿಂತ ಹೆಚ್ಚಾಗುವಂತೆ ಪ್ರೋತ್ಸಾಹ ನೀಡುವ ಮಾರ್ಕೆಟು ಧಾರಣೆಯು ತಟಸ್ಥಧಾರಣೆಗಿಂತ ಕಡಮೆಯೆಂದು ತಿಳಿಯ ಬೇಕು. ಮಾರ್ಕೆಟು ಧಾರಣೆಯೂ, ತಟಸ್ಥ ಧಾರಣೆಯೂ ಕೆಲವು ವರ್ಷ ಗಳ ಕಾಲ ಒಂದೇ ಆಗಿದ್ದರೆ ಸರಕುಗಳ ಸಂಗ್ರಹವು ಹೆಚ್ಚಾಗುವುದಕ್ಕೂ ಕಡಮೆಯಾಗುವುದಕ್ಕೂ ಪ್ರಚೋದನೆಯು (ಇತರ ಪರಿಸ್ಥಿತಿಗಳು ಇದ್ದಂತೆ ಯೇ ಇದ್ದರೆ) ದೊರೆಯುವುದಿಲ್ಲ. ಜನಧನ ಸಂಪತ್ತು ಮುಂಬರಿಯದಿರುವ ಪ್ರಗತಿ ರಹಿತವಾದ ಸಮಾಜದಲ್ಲಿ ಮಾತ್ರ ಈ ಸೂತ್ರವು ಸಂಪೂರ್ಣ ಸತ್ಯ ವಾಗುವುದು. ಸಾಧಾರಣವಾಗಿ ಪ್ರಗತಿಶೀಲ ಸಮಾಜಗಳಲ್ಲಿ ಉತ್ಪಾದನೆಯು ಅನುಭೋಗಕ್ಕಿಂತ ಕೊಂಚ ಹೆಚ್ಚಿರುವಂತೆ ನೋಡಿಕೊಳ್ಳುವ ಧಾರಣೆಗೇ 'ತಟಸ್ಥ' ಧಾರಣೆ ಎನ್ನುವರು.

'ತಟಸ್ಥ ಧಾರಣೆ'ಯ ಸಮೀಪ ಮಟ್ಟದ ಸುತ್ತು ಮುತ್ತಲೂ ಮಾರ್ಕೆ ಟು ಧಾರಣೆಯು ಸುಳಿಯುತ್ತಿರುವುದು. ಏಕೆಂದರೆ, ಮಾರ್ಕೆಟು ಧಾರಣೆ ಯು ತಟಸ್ಥ ಧಾರಣೆಗಿಂತ ಭಿನ್ನವಾದೊಡನೆ ಮಾರ್ಕೆಟು ಧಾರಣೆಯನ್ನು ಹಿಂದೆ ಜಗ್ಗಿ ತಟಸ್ಥ ಧಾರಣೆಯ ಹತ್ತಿರವೇ ನಿಲ್ಲಿಸುವ ಒಂದು ಶಕ್ತಿ ಪ್ರಕಟ ವಾಗುವುದು ತಟಸ್ಥ ಧಾರಣೆಯ ಕಡೆಗೆ ಹೊರಳುತ್ತಿರುವ ಧಾರಣೆಯೇ ಮಾರ್ಕೆಟು ಧಾರಣೆ.

## ತಟಸ್ಥ ಬೇಡಿಕೆ ಹಾಗೂ ಪೂರೈಕೆಯ ಕೋಷ್ಟಕ

| ಧಾರಣೆ | ಉತ್ಪಾದನೆಯ ವೇಗ | ಅನುಭೋಗದ ವೇಗ |
|---|---|---|
| ರೂ. ೪ ೧೪ ೦ | ೧೪೦ | ೬೦ |
| ರೂ. ೫ ೧೨ ೦ | ೧೦೦ | ೬೬ |
| ರೂ. ೪ ೧೦ ೦ | **೭೦** | **೭೦** |
| ರೂ. ೪ ೮ ೦ | ೫೦ | ೭೪ |
| ರೂ. ೪ ೬ ೦ | ೩೦ | ೭೮ |
| ರೂ. ೪ ೪ ೦ | ೧೦ | ೮೦ |
| | (ಲಕ್ಷ ಚೀಲಗಳು) ಸಿಮೆಂಟು | (ಲಕ್ಷ ಚೀಲಗಳು) |




S S— ತಟಸ್ಥ ಪೂರೈಕೆಯ ಕಮಾನು.

D D- ತಟಸ್ಥ ಬೇಡಿಕೆಯ ಕಮಾನು.

P ಬಿಂದುವಿನಲ್ಲಿ ಉತ್ಪಾದನೆಯ ವೇಗವೂ ಅನುಭೋಗದ ವೇಗವೂ ಸರಿಸಮಾನ. ಇವು OM (=NP)ಗೂ ಸಮ. ತಟಸ್ಥಧಾರಣೆ MP(=ON) ಸರಾಸರಿ ಧಾರಣೆ ONಗಿಂತ ಅಧಿಕವಾದರೆ, $ON^1$ ಆದರೆ, ಉತ್ಪಾದನೆಯ ವೇಗ $N^1S^1$ ಅನುಭೋಗದ ವೇಗವಾದ $D^1N^1$ ಗಿಂತ ಇದು ಹೆಚ್ಚು. ಇವುಗಳೊಳಗಿನ ವ್ಯತ್ಯಾಸ $D^1S^1$ ಎಂಬುದು-ಸರಕು ಅಧಿಕವಾಗಿ ಸಂಗ್ರಹವಾಗುವ ವೇಗ. ಉತ್ಪಾದನೆಯ ಧಾರಣೆಯು ತಟಸ್ಥ ಧಾರಣೆಗಿಂತ ಹೆಚ್ಚಾದರೆ ($ON_2$) ಉತ್ಪಾದನೆಯ ವೇಗ $N_2S_2$ ಅನುಭೋಗದ ವೇಗ $N_2D_2$ಕ್ಕಿಂತ ಕಡಮೆಯಾಗುವುದರಿಂದ $D_2S_2$ವೇಗದಲ್ಲಿ ಸಂಗ್ರಹವು ಬರಿದಾಗುತ್ತಾ ಹೋಗುವುದು.

## ಐದನೆಯ ಅಧ್ಯಾಯ

# ಮೌಲ್ಯ ಮೀಮಾಂಸೆ

### ಮೌಲ್ಯ:

ಸರಕಿಗೆ ನಾವು ತೆರುವ ಹಣವು ಅದರ ಧಾರಣೆ. ಸರಕಿನ ಮೌಲ್ಯ ವನ್ನು ಹಣದ ಮೂಲಕ ಹೇಳುವುದಕ್ಕೆ ಧಾರಣೆ ಎನ್ನುತ್ತಾರೆ. ಸರಕು ಸೇವೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವ ದಾಮಾಶಯವೇ ಸರಕಿನ ಮೌಲ್ಯ. ಸರಕಿನ ಮೌಲ್ಯವು ನಮಗೆ ವಿನಿಮಯ ಮೌಲ್ಯವಾಗಿ ಯೇ ಕಾಣುವುದು ಮನೆಯ ಬೆಲೆಯನ್ನು ಪ್ರಪಂಚದಲ್ಲಿರುವ ಇತರ ಸರಕುಗಳೊಡನೆ ಅದು ವಿನಿಮಯವಾಗುವ ಮೌಲ್ಯವೆಂದು ಹೇಳಬಹುದು. ಆದುದರಿಂದ ಮೌಲ್ಯವು ನಿರಂಕುಶವಲ್ಲ. ಅದು ಯಾವಾಗಲೂ ಸಾಪೇಕ್ಷ ವಾಗಿಯೇ ಇರುವುದು. ಮೌಲ್ಯವನ್ನು ಹಣದ ರೂಪದಲ್ಲಿ ಹೇಳು ವುಕ್ಕೆ ಧಾರಣೆ ಎನ್ನುತ್ತಾರೆ ಮೌಲ್ಯದ ವಿಷಯವಾಗಿ ಈಗ ಹಲವು ಕಾಲದಿಂದ ಹಲವು ಬಗೆಯ ನಿರೂಪಣೆಗಳು ಹುಟ್ಟಿಕೊಂಡಿವೆ. ಅವುಗ ಳನ್ನು ಒಂದೊಂದಾಗಿ ಚರ್ಚಿಸೋಣ.

### ಬೇಡಿಕೆ ಮತ್ತು ಪೂರೈಕೆಯ ನಿರೂಪಣೆ:

ಆಡ್ಯಂ ಸ್ಮಿಥ್‌ನ 'ಮೌಲ್ಯದ ಸ್ವಯಂ ವಿರುದ್ಧೋಕ್ತಿ'ಯ ಪ್ರಕಾರ ವಸ್ತುಗಳ ಉಪಯುಕ್ತತೆಗೂ, ಅವುಗಳ ಮೌಲ್ಯಕ್ಕೂ ಸಂಬಂಧವಿಲ್ಲ. ಉಪಯೋಗಿಸುವಾಗ ತುಂಬಾ ಪ್ರಯೋಜನವುಳ್ಳ ಗಾಳಿ ನೀರು ಬೆಳಕು ಮುಂತಾದ ಸರಕುಗಳಿಗೆ ವಿನಿಮಯದ ಸಮಯ ಯಾವ ಮೌಲ್ಯವೂ ಇಲ್ಲ. ಆದರೆ ವಿನಿಮಯದ ಮೌಲ್ಯವಿರುವ ವಜ್ರದಂಥ ಕೆಲವು ವಸ್ತುಗಳಿಗೆ ಇರುವ ಉಪಯುಕ್ತತೆ ತೀರ ಅತ್ಯಲ್ಪ ಅಥವಾ ಮೌಲ್ಯವೇ ಇಲ್ಲವೆಂದರೂ ಸಲ್ಲು ವುದು. ಆದುದರಿಂದ ಮೌಲ್ಯ ನಿರೂಪಣೆಯು ಉಪಯುಕ್ತತೆಯ ಮಾರ್ಗ ವನ್ನನುಸರಿಸಿ ಯಾವ ಪ್ರಯೋಜನವೂ ಇಲ್ಲವೆಂದು ಸ್ಮಿಥ್ ನಿರ್ಧರಿಸಿ 'ಸಾ ಪೇಕ್ಷ ವಿರಳತೆಯ' ತತ್ತ್ವವನ್ನು ಹೊರಗೆಡವಿದನು. ವಸ್ತುವಿನ ಉಪಯು ಕ್ತತೆಯಿಂದ ಮಾತ್ರವೇ ವಸ್ತುವಿಗೆ ಮೌಲ್ಯವಲ್ಲ. ಆ ವಸ್ತುವು ಸಿಗುವುದು

ವಿರಳವಾದುದರಿಂದಲೂ, ಅದು ಸಿಗುವ ಪರಿಮಾಣಕ್ಕೆ ಪರಿಮಿತಿಯಿರುವುದರಿಂದಲೂ, ಅದಕ್ಕೆ ಮೌಲ್ಯ ಬರುವುದೆಂದು ಅವನು ಹೇಳಿದನು. ಉಪಯುಕ್ತತೆಯು ಬೇಡಿಕೆಯನ್ನೂ, ವಿರಳತ್ವವು ಸರಕಿನ ಪೂರೈಕೆಯನ್ನೂ ನಿಯಂತ್ರಿಸುವುವು ಎಂಬುದು ಈ ತರ್ಕಮಾರ್ಗದಲ್ಲಿ ಮುಂದಿನ ಹೆಜ್ಜೆ. ಬೇಡಿಕೆ-ಪೂರೈಕೆಯ ಸಂಬಂಧವು ಧಾರಣೆಯನ್ನು ರೂಪಿಸುವುದು. ಬೇಡಿಕೆಯೂ ಪೂರೈಕೆಯೂ ಸಮತೋಲದಲ್ಲಿದ್ದಾಗ ಮೌಲ್ಯವು ನಿರ್ಣೀತವಾಗುವುದು. ಇಂಥ ನಿರೂಪಣೆಯನ್ನು ವಿರೋಧಿಸುವುದರಲ್ಲಿ ಸ್ವೀಡಿಶ್ ಅರ್ಥಶಾಸ್ತ್ರಿ ವಿಕ್ಸೆಲ್ ಅಗ್ರಗಣ್ಯನು. ಇದು ನಿಜವಾದ ಮೌಲ್ಯ ನಿರೂಪಣೆ ಅಲ್ಲವೇ ಅಲ್ಲವೆಂದು ಅವನ ವಾದ. ಸಮತೋಲ ಧಾರಣೆಯಲ್ಲಿ ಪೂರೈಕೆ ಬೇಡಿಕೆಗಳು ಸರಿಸಮಾನವಾಗಿರಬೇಕೆಂದೂ, ಬೇಡಿಕೆಯು ಪೂರೈಕೆಗಿಂತ ಅಧಿಕವಾದರೆ ಧಾರಣೆಯು ಹೆಚ್ಚಾಗುವುದೆಂದೂ, ಪೂರೈಕೆಯು ಬೇಡಿಕೆಗಿಂತ ಹೆಚ್ಚಾದರೆ ಧಾರಣೆಯು ಇಳಿವುದೆಂದೂ ಹೇಳುವುದು ವಸ್ತುಸ್ಥಿತಿಯಿರಬಹುದು. ಆದರೆ ಧಾರಣೆ ಸದಾ ಸರ್ವದಾ ಏರಿಳಿಯುತ್ತಲೇ ಇರಲಾರದು. ಒಂದು ನಿಶ್ಚಿತ ಸ್ಥಾನದಲ್ಲಿ ಬೇಡಿಕೆ ಪೂರೈಕೆ ಎರಡೂ ವಿರಾಮ ಹೊಂದಲೇ ಬೇಕು. ಧಾರಣೆ ವಿರಾಮ ಹೊಂದುವುದು ನಮ್ಮ ಸಮಸ್ಯೆಯಲ್ಲ ಅದು ನಿಶ್ಚಿತವಾದ ಬಿಂದುವಿನಲ್ಲಿ ಮಾತ್ರ ಏಕೆ ವಿರಾಮ ಹೊಂದುತ್ತದೆ? ಬೇರೆ ಬೇರೆ ಸರಕಿಗೆ ಬೇರೆ ಬೇರೆ ಧಾರಣೆಯಲ್ಲಿ ವಿರಾಮ ಬಿಂದು ನಿರ್ಮಾಣವಾಗುವುದು ಏತಕ್ಕೆ? ಎಂಬುದು ನಮ್ಮ ಸಮಸ್ಯೆ. ಇದಕ್ಕೆ 'ಬೇಡಿಕೆ-ಪೂರೈಕೆ' ನಿರೂಪಣೆಯು ಉತ್ತರ ಹೇಳಲಾರದು. ಭಿನ್ನ ಭಿನ್ನ ಧಾರಣೆಗಳಿಗಿರುವ ಸಾಪೇಕ್ಷ ಭಾವವನ್ನು ತಿಳಿಯ ಹೇಳುವ ಶಕ್ತಿ ಈ ನಿರೂಪಣೆಗೆ ಇರುವುದಿಲ್ಲ. ಆದುದರಿಂದ ಧಾರಣೆಯ ಬದಲಾವಣೆಯಿಂದಾಗಿ ಬೇಡಿಕೆ ಪೂರೈಕೆಗಳಲ್ಲಿ ಉತ್ಪನ್ನವಾಗುವ ಬದಲಾವಣೆಗೆ ವಾಸ್ತವಿಕ ಕಾರಣವನ್ನು ಹುಡುಕುವ ಯತ್ನವನ್ನು ಅರ್ಥಶಾಸ್ತ್ರಿಗಳು ಮಾಡಿದರು.

**ಪರಿಶ್ರಮ ಮೀಮಾಂಸೆ ಮತ್ತು ವೆಚ್ಚ ಮೀಮಾಂಸೆ:**

ಆ್ಯಡಂ ಸ್ಮಿಥ್‌ನಿಗೂ ತನ್ನ ಮೊದಲನೆಯ ಮೀಮಾಂಸೆಯಿಂದ ತೃಪ್ತಿ ಬರಲಿಲ್ಲ. ಆತ 'ಮೌಲ್ಯದ ಸ್ವಯಂ ವಿರೋಧಕ ತತ್ವ'ದ ನೆರವು ಪಡೆದು

ಉಪಯುಕ್ತತೆಯನ್ನು ಹೊರದೂಡಿದುದರಿಂದ ಇದನ್ನು ತಿಳಿಯಬಹುದು. ಉಪಯುಕ್ತತೆಯು ಮೌಲ್ಯವನ್ನು ನಿರ್ಣಯಿಸಲಾರದು; ಪೂರೈಕೆಯ ಪಾರ್ಶ್ವದಿಂದ ವಿಚಾರಿಸಿದರೆ, ಉತ್ಪಾದನೆಯಲ್ಲಿ ಅಡಕವಾದ ಪರಿಶ್ರಮವೇ ಮೌಲ್ಯಕ್ಕೆ ಮೂಲ ಹೇತುವೆಂಬುದು ಸ್ಪಷ್ಟ ಎಂಬ ಒಂದು ಹೊಸ ವಾದವು ಹುಟ್ಟಿಕೊಂಡಿತು. "ಸರಕು ಸೇವೆಗಳ ಮೊತ್ತವೇ ಮನುಷ್ಯಜಾತಿಯ ಸಂಪತ್ತೆನಿಸಿಕೊಳ್ಳುವುದು. ಸರಕು ಸೇವೆಗಳ ಉತ್ಪನ್ನಕ್ಕೆ ಜನರ ಶಾರೀರಿಕ ಶ್ರಮವೇ ಕಾರಣ. ಆದುದರಿಂದ ಪರಿಶ್ರಮವು ವಿನಿಮಯ ಮೌಲ್ಯವನ್ನು ಅಳೆಯುವ ಸಾಧನ" ಎಂದು ಸ್ಮಿಥ್ ವಿವರಿಸಿದನು ಈ ವಾದಕ್ಕೆ ಎರಡು ರೂಪಗಳಿವೆ. ಸರಕಿನಲ್ಲಿ ಒಡಗೂಡಿರುವ ಪರಿಶ್ರಮದಿಂದ ಮೌಲ್ಯಸೃಷ್ಟಿ ಆಗುವುದೆಂಬುದು ಒಂದನೆಯ ಸುಳ್ಳುರೂಪ. ಏಕೆಂದರೆ ನಾವು ಸರಕನ್ನು ತಯಾರಿಸಲು ದುಡಿಯುವುದು ಅದಕ್ಕೆ ಮೌಲ್ಯವುಂಟೆಂದು ತಾನೇ? ನಾವು ಸಾಗರಕ್ಕಿಳಿದು ಸೋತು ಮುತ್ತನ್ನು ಆಯ್ದುಕೊಂಡುದರಿಂದ ಮುತ್ತಿಗೆ ಮೌಲ್ಯ ಬರುವುದಿಲ್ಲ; ಮುತ್ತಿಗೆ ಮೌಲ್ಯ ವಿರುವುದರಿಂದ ನಾವು ಸಾಗರದ ತಳಕ್ಕೆ ಇಳಿಯುವ ಸಾಹಸ ಮಾಡಿರುವೆವು. ಯಾವುವಾದರೂ ಎರಡು ಸರಕುಗಳ ಮೇಲೆ ನಾವು ಉಪಯೋಗಿಸುವ ಪರಿಶ್ರಮದ ಸಾಪೇಕ್ಷ ಪರಿಮಾಣವು, ಆ ಸರಕುಗಳ ವಿನಿಮಯ ದಾಮಾಶಯ(=ಮೌಲ್ಯ, ಧಾರಣೆ) ಗಳನ್ನು ನಿರ್ಣಯಿಸುವುದು ಎಂಬುದು ಎರಡನೆಯ ನಿರೂಪಣೆ. ಒಂದು ಜಿಂಕೆ ಹಿಡಿಯುವ ಹೊತ್ತಿನಲ್ಲಿ, ಪಡುವ ಪರಿಶ್ರಮದಲ್ಲಿ, ನಾಲ್ಕು ಮೊಲ ಹಿಡಿಯಲು ಸಾಧ್ಯವಾಗುವ ಪಕ್ಷಕ್ಕೆ ಜಿಂಕೆ ಮೊಲಗಳ ವಿನಿಮಯವು ೧:೪ ದಾಮಾಶಯದಲ್ಲಿ ತಾನೇ ನಡೆಯಬೇಕು? ಉತ್ಪಾದನೆಯ ಪರಿಶ್ರಮದ ವೆಚ್ಚಕ್ಕೂ, ವಿನಿಮಯ ದಾಮಾಶಯಕ್ಕೂ ಸಮಾನತ್ವವನ್ನು ಕಲ್ಪಿಸುವುದು ಪರಿಶ್ರಮ ಮೀಮಾಂಸೆಯ ಯತ್ನ. ಇಲ್ಲಿ ಮುಖ್ಯವಾದುದು ಸಾಪೇಕ್ಷ ಪರಿಶ್ರಮ ವೆಚ್ಚ ಎಂಬುದನ್ನು ಮರೆಯಲಾಗದು ಜಿಂಕೆ ಮೊಲಗಳ ವಿನಿಮಯವು ೧:೪ ದಾಮಾಶಯದಲ್ಲಿ ನಡೆಯಲು, ಅವುಗಳ ಪರಿಶ್ರಮ ವೆಚ್ಚದ ದಾಮಾಶಯವು ೪:೧ ಆಗಿರುವುದೇ ಕಾರಣ. ಆದುದರಿಂದ ಎರಡು ಸರಕುಗಳ ವಿನಿಮಯ ಧಾರಣೆಯು ಆ ಸರಕುಗಳಲ್ಲಿ ವ್ಯಯವಾದ ಪರಿಶ್ರಮದ ಗಾತ್ರವನ್ನು ಹೊಂದಿಕೊಂಡಿದೆ

**ಪರಿಶ್ರಮ ಮೀಮಾಂಸೆಗೆ ಕೆಲವು ಪ್ರಬಲವಾದ ಆಕ್ಷೇಪಗಳಿವೆ:**

(೧) ಈ ಮೀಮಾಂಸೆಯು ಪೂರೈಕೆ ಬೇಡಿಕೆಗಳ ಸಮತೋಲವನ್ನು ಒಳಗೊಂಡ ಇಡಿ ಮಾರ್ಕೆಟು ವ್ಯವಸ್ಥೆಯನ್ನು ಪ್ರಮಾಣವಿಲ್ಲದೆ ಅಂಗೀಕರಿಸುವುದು.

(೨) ವೆಚ್ಚದ ಪರಿಸ್ಥಿತಿ ಸ್ಥಿರವಾಗಿರುವುದೆಂದು ಪ್ರಮಾಣರಹಿತವಾಗಿ ಅಂಗೀಕರಿಸುವುದು. ಅಂದರೆ ಜಿಂಕೆಗಳು ಕಡಿಮೆಯಾದ ಹಾಗೆ, ಜಿಂಕೆ ಹಿಡಿಯಲು ಹೆಚ್ಚು ಪರಿಶ್ರಮ ಬೇಕು ಎಂಬುದನ್ನು ಈ ನಿರೂಪಣೆ ನಂಬುವುದಿಲ್ಲ.

(೩) ಸರಕಿಗೆ ಆರ್ಥಿಕವಾದ ಅರ್ಥದಲ್ಲಿ ಉಪಯುಕ್ತತೆ ಉಂಟು ಎಂಬುದನ್ನು ಪ್ರಮಾಣರಹಿತವಾಗಿ ಅಂಗೀಕರಿಸುವುದು.

(೪) ಸಮಾಜದಲ್ಲಿ ಪ್ರತಿಯೊಬ್ಬನೂ ಮೊಲ, ಜಿಂಕೆ ಹಿಡಿಯುವುದರಲ್ಲಿ ಸಮಾನ ಚಾತುರ್ಯವುಳ್ಳವರೆಂಬುದು ಪ್ರಮಾಣರಹಿತವಾದ ಗ್ರಹಿಕೆ.

(೫) ಸಂಚಲನೆಗೆ ಯಾವ ತೊಡಕೂ ಇಲ್ಲವೆಂದು ಪ್ರಮಾಣರಹಿತವಾಗಿ ಅಂಗೀಕರಿಸುವುದು.

(೬) ಎಲ್ಲರಿಗೂ ಜಿಂಕೆಯ ಮಾಂಸ ಒಂದೇ ತೆರನಾಗಿ ರುಚಿಸುತ್ತದೆ ಎಂದೂ, ಕಾಡುಕೋಣದ ಮಾಂಸವನ್ನು ಮೆಚ್ಚಿದವರು ಯಾರೂ ಇರಲಿಕ್ಕಿಲ್ಲವೆಂದೂ ಪ್ರಮಾಣವಿಲ್ಲದೆ ಅಂಗೀಕರಿಸುವುದು.

(೭) ಒಟ್ಟಾರೆ ಮೇಲೆ ವಿರಳ ಅವಯವವು ಒಂದೇ ಎಂದು ಪರಿಶ್ರಮ ಮೀಮಾಂಸೆ ಭಾವಿಸುವುದರಿಂದ ಸರಳ ಉತ್ಪಾದನೆಗೆ ಮಾತ್ರ ಇದು ಅನ್ವಯಿಸುವುದು. ಸರಳ ಉತ್ಪಾದನೆಗೆ ಸಮೀಪವಿರುವ ಎಸ್ಕಿಮೋ ಸಮಾಜದಂಥವು ಅರ್ವಾಚೀನ ಯುಗದಲ್ಲಿ ಕಡಿಮೆಯಾಗಿ, ಜಟಿಲ ಉತ್ಪಾದನೆಯ ಬೃಹತ್ ಸಮಸ್ಯೆ ನಮ್ಮ ಮುಂದೆ ಬಂದಿರುವುದರಿಂದ ಪರಿಶ್ರಮ ಮೀಮಾಂಸೆ ನಮ್ಮ ಸಮಾಜಕ್ಕೆ ಅಷ್ಟು ಚೆನ್ನಾಗಿ ಅನ್ವಯಿಸುವುದಿಲ್ಲ. ೩ರಿಂದ ೬ರ ವರೆಗಿನ ಪ್ರಮಾಣರಹಿತ ಅಂಗೀಕಾರಗಳು ಇಂದಿನ ಸಮಾಜಗಳಲ್ಲಿ ಸಾಧ್ಯವೇ ಇಲ್ಲ.

**ಪರಿಶ್ರಮ ಮೀಮಾಂಸೆಯ ಒಂದು ಒಳಭೇದ: ಮಾರ್ಕ್ಸನ ಆರ್ಥಿಕ ಸೂತ್ರ:**

ಮಾರ್ಕ್ಸನೂ ಅವನ ಅನುಯಾಯಿಗಳೂ, ಪ್ರಾಚೀನರಿಂದ ಪರಿಶ್ರಮ ಮೀಮಾಂಸೆಯನ್ನು ಸ್ವೀಕರಿಸಿ ಬಳಕೆಯಲ್ಲಿರುವ ಆರ್ಥಿಕ ವ್ಯವಸ್ಥೆಯ ಹುಳುಕನ್ನು ಹೊರಗೆಡವಲು ಅದನ್ನು ಉಪಯೋಗಿಸಿಕೊಂಡರು. ಉಪಯುಕ್ತತೆಯು ಒಂದು ಗುಣ, ಮೌಲ್ಯವು ಒಂದು ಪರಿಮಾಣ ಉಪಯೋಗ–ಮೌಲ್ಯವೆಂದು ಒಂದು ಸರಕನ್ನು ಪರೀಕ್ಷಿಸಿದರೆ ಅದು ಪರಿಮಾಣದಲ್ಲಿ ಮಾತ್ರ ಬೇರಾಗಬಹುದು. ಏಕೆಂದರೆ ಈ ದೃಷ್ಟಿಕೋನದಲ್ಲಿ ಅದಕ್ಕೆ ಉಪಯೋಗ ಮೌಲ್ಯವು ಇರುವುದಿಲ್ಲ ಆ ಸರಕಿನ ಒಂದು ನಿಶ್ಚಿತ ಪರಿಮಾಣವು ಇನ್ನೊಂದು ಸರಕಿನ ನಿಶ್ಚಿತ ಪರಿಮಾಣ ಯಾವುದೋ ಒಂದರ ಒಡನೆ ವಿನಿಮಯವಾಗುವುದು ಎಂಬುದನ್ನು ಆ ಸರಕಿನ ವಿನಿಮಯ ಮೌಲ್ಯವು ಸೂಚಿಸುವುದು. ಅವು ಒಂದಕ್ಕೊಂದು ಸರಿಸಮಾನವಾಗಬೇಕಾದರೆ ಹೋಲಿಕೆಗೆ ಈಡಾಗುವ ಯಾವುದೋ ಒಂದು ಸಮಾನ ಪರಿಮಾಣವು ಅವುಗಳಲ್ಲಿರಬೇಕು ಉಪಯುಕ್ತತೆಯು ಪರಿಮಾಣವಲ್ಲವಾದುದರಿಂದ ನಮ್ಮ ಪಾಲಿಗೆ ಮೌಲ್ಯವೊಂದೇ ಉಳಿಯುವುದು. ಮೌಲ್ಯವನ್ನು ಅಳೆಯುವುದೆಂತು? ಅದರೊಳಗೆ ಮೌಲ್ಯ ಸೃಷ್ಟಿಮಾಡುವ ಒಡವೆಯ ಪರಿಮಾಣ ಎಷ್ಟಿದೆ, ಅಂದರೆ ಪರಿಶ್ರಮವೆಷ್ಟಿದೆ? ಎಂದು ನೋಡೋಣ. ವಿಥ ವಿಥವಾದ ವೃತ್ತಿಗಳಲ್ಲಿಯೂ ಮೂಲಭೂತವಾದ ಪರಿಶ್ರಮ–ಶಕ್ತಿ ಇರುತ್ತದೆ. "ಸಾಮಾಜಿಕವಾಗಿ-ಅವಶ್ಯವಾಗುವ-ಪರಿಶ್ರಮ-ಸಮಯವು ಆಯಾ ಸರಕಿನ ಮೌಲ್ಯವನ್ನು ನಿರ್ಧರಿಸುವುದು ಎರಡು ಸರಕುಗಳ ಮೌಲ್ಯದ ದಾಮಾಶಯವು ಆ ಸರಕುಗಳಲ್ಲಿ ಅಂತರ್ಗತವಾದ ಸಾಮಾಜಿಕವಾಗಿ-ಅವಶ್ಯವಾಗುವ–ಪರಿಶ್ರಮ–ಸಮಯಗಳ ದಾಮಾಶಯ. ಗೌಪ್ಯವಾಗಿಟ್ಟ ಪರಿಶ್ರಮ–ಸಮಯವೇ ಸರಕುಗಳ ಮೌಲ್ಯ."ಎಂದು ಮಾರ್ಕ್ಸ ವಾದಿಸುವನು. ಮೌಲ್ಯ ಹುಟ್ಟಬೇಕಾದರೆ ಪರಿಶ್ರಮವೊಂದೇ ಕಾರಣ. ಇಲ್ಲಿಂದ ಮಾರ್ಕ್ಸನ 'ಮಿಗುತೆ ಮೌಲ್ಯ'ದ ಸೂತ್ರವು ಉತ್ಪನ್ನವಾಗುವುದು. ಬಂಡವಾಳವೂ ಜಮೀನೂ ಪರಿಶ್ರಮದ ಫಲಗಳಾದರೂ ಬಂಡವಾಳಗಾರ ಸಮಾ

ಜದಲ್ಲಿ ಶ್ರಮಜೀವಿಗೆ ಸಿಗುವುದು ಜೀವನಾಂಶದ ಕೂಲಿಮಾತ್ರ. ಪರಿಶ್ರಮವು ತಾನೇ ಎಲ್ಲಾ ಮೌಲ್ಯವನ್ನು ಸೃಷ್ಟಿಸಿದರೂ ಅದರ ಪಾಲಿಗೆ ಆ ಮೌಲ್ಯದ ಒಂದು ಕಿರಿದಾದ ಅಂಶ ಮಾತ್ರ ಕೈಸೇರುವುದು. ಉಳಿದ ಭಾಗವನ್ನು ಬಾಡಿಗೆ, ಗೇಣಿ, ಲಾಭ, ಬಡ್ಡಿಗಳ ರೂಪದಲ್ಲಿ ಬಂಡವಾಳಗಾರರು ಅವರಿಂದ ಕಿತ್ತುಕೊಳ್ಳುವರು ಸೂರೆಗಾರ ಬಂಡವಾಳ ವರ್ಗದ ವಿನಾಶವಾದಾಗ ಮಿಗುತೆ ಮೌಲ್ಯವೂ ಶ್ರಮಜೀವಿಗಳ ಸೊತ್ತಾಗುವುದು

ನಮ್ಮ ಸಾಪೇಕ್ಷ ಮೌಲ್ಯದ ಸಮಸ್ಯೆಗೆ ಮಾರ್ಕ್ಸ್‌ನ ಮಿಗುತೆ ಮೌಲ್ಯವು ಉತ್ತರ ಹೇಳಲಾರದು ತನಗೆ ಬಂಡವಾಳಗಾರ ಸಮಾಜದ ಕುರಿತು ಹೇಳಬೇಕಾಗಿದ್ದ ಮಾತನ್ನು ಮಿಗುತೆ ಮೌಲ್ಯದ ಸೂತ್ರದ ಮುಖಾಂತರವಾಗಿ ಮಾರ್ಕ್ಸ್ ಹೇಳಿದ್ದಾನೆಯೇ ಹೊರತು ಮೂಲ ಪ್ರಶ್ನೆಯಾದ ಸಾಪೇಕ್ಷ ಮೌಲ್ಯವು ಅವನ ವಿಶ್ಲೇಷಣೆಯಲ್ಲಿ ಮೂಲೆ ಪಾಲಾಗಿದೆ ಜಮೀನು ಬಂಡವಾಳಗಳು ಮೌಲ್ಯವನ್ನು ಸೃಷ್ಟಿಮಾಡಲಾರವು ಎಂದು ಮಾರ್ಕ್ಸ್ ಹೇಳಿದಾಗ ಅವನ ಉದ್ದೇಶ ಏನಿರಬಹುದು? ಬಂಡವಾಳ ಉಪಯೋಗಿಸುವುದರಿಂದ ಫಲವೃದ್ಧಿಯಾಗುವುದಿಲ್ಲವೆಂದೆ? ಮಾರ್ಕ್ಸ್‌ನ ದೃಷ್ಟಿ ಇದ್ದುದು ಜಮೀನು ಬಂಡವಾಳಗಳ ಒಡೆತನಗಳ ಕಡೆಗೆ ಮಾತ್ರ ಪ್ರಾಚೀನ ಪಂಥದವರು ಬಂಡವಾಳಗಾರರ ತ್ಯಾಗ ಬುದ್ಧಿಯನ್ನೂ ಸಂಯಮವನ್ನೂ ಪ್ರಶಂಸಿಸಿ, ಇದಕ್ಕೋಸ್ಕರ ಅವರಿಗೆ ಪ್ರತಿಫಲವು ಸಲ್ಲಬೇಕೆಂದು ಹೇಳಿದುದನ್ನು ಖಂಡಿಸುವ ಸಲುವಾಗಿಯಷ್ಟೆ ಮಾರ್ಕ್ಸ್‌ನು ಮಿಗುತೆ ಮೌಲ್ಯದ ಸೂತ್ರವನ್ನು ಉಪಯೋಗಿಸಿದನು. ಎರಡನೆಯದಾಗಿ, ಮನುಷ್ಯನು ಪ್ರತಿದಿನವೂ ತನಗೆ ಬೇಕಾದುದಷ್ಟನ್ನೇ ಸಂಪಾದಿಸುವಾಗ 'ಮಿಗುತೆ ಮೌಲ್ಯ'ವು ಸೃಷ್ಟಿಯಾಗುವುದಿಲ್ಲ ಬಂಡವಾಳಗಾರ ಪದ್ಧತಿಯಲ್ಲಿ ಶ್ರಮಜೀವಿಗಳು ಬಂಡವಾಳಗಾರರ ಕೈಯಲ್ಲಿ ಸಿಕ್ಕು ಸ್ವಾತಂತ್ರ್ಯವನ್ನು ಕಳೆದುಕೊಂಡು ಒಡೆಯರಿಗೋಸ್ಕರ ದುಡಿದು, ತಾವು ಅನುಭೋಗಿಸುವುದಕ್ಕಿಂತ ಹೆಚ್ಚಿನ ಮೌಲ್ಯವನ್ನು ಉತ್ಪಾದಿಸಿಕೊಡುವರು. 'ಮಿಗುತೆಯು ಮೌಲ್ಯ' ವೆಲ್ಲ ಬಂಡವಾಳಗಾರರ ಪಾಲಾಗುವುದು ಬಂಡವಾಳಗಾರರ ಅಧಿಕಾರ ವ್ಯವಸ್ಥೆ ಎಂದರೆ ಸಂಘಟಿತವಾದ ದರೋಡೆ ಎಂದು ಮಾರ್ಕ್ಸ್ ತೀರ್ಮಾನಿಸಿ ಸಮಾಜವಾದಿ ಸಿದ್ಧಾಂತದ ಭವ್ಯ ಮಂದಿರಕ್ಕೆ ಬುನಾದಿ ಹಾಕಿರುವನು. ಆದರೆ

ನಮಗೆ ಬಂಡವಾಳಗಾರರ ಸಮಾಜದ ರಚನೆಯೂ, ಚಲನೆಯೂ, ಚಲನೆಯ ಜೀವಾಳವಾದ ಧಾರಣೆಯ ಸೂತ್ರವೂ ಮುಖ್ಯವಲ್ಲದೆ ಅದರ ಲಯ ಕಾರ್ಯದಲ್ಲಿ ಆಕರ್ಷಣೆಯಿಲ್ಲ.

**ವಾಸ್ತವಿಕ ವೆಚ್ಚದ ಮೀಮಾಂಸೆ:**

ಆ್ಯಡಂ ಸ್ಮಿಥ್‌ನ ಪರಿಶ್ರಮ ಮೀಮಾಂಸೆಯು ಸರಳ ಉತ್ಪಾದನೆ ಅಥವಾ ಏಕ ಅವಯವ- ಉತ್ಪಾದನೆಯ ಸಮಾಜದಲ್ಲಿ ಮಾತ್ರ ಸತ್ಯವೆಂದು ಮೊದಲೇ ಕಂಡೆವು. ಏಕಾವಯವ ಭಾವನೆಯನ್ನು ತೊರೆದು, ಒಂದು ಸರಕನ್ನು ತಯಾರಿಸಲು ೨x ಮತ್ತು ೧yಯೂ ಇನ್ನೊಂದರ ತಯಾರಿಗೆ ೧x ಮತ್ತು ೨y ಯೂ ಬೇಕಾಗಿದೆ ಎಂದು ಎಣಿಸಿದರೆ x ಗೂ yಗೂ ಹೇಗಾದರೂ ಸಮಾನತ್ವವನ್ನು ಕಲ್ಪಿಸದೆ ಪರಿಶ್ರಮ ಮೀಮಾಂಸೆಯಿಂದ ಪ್ರಯೋಜನವಾಗುವಂತಿಲ್ಲ. x, y ಸಮಾನತ್ವವು ಇರುವುದು ಮೌಲ್ಯ ಮುಖೇನ ಮಾತ್ರವಾದುದರಿಂದ ಮರಳಿ ಸಾಪೇಕ್ಷಧಾರಣೆಯ ಪ್ರಶ್ನೆಯನ್ನೇ ನಾವು ಇದಿರಿಸುವೆವು ಇದಕ್ಕೆ ರಿಕಾರ್ಡೋ ಎಂಬವನು 'ವಾಸ್ತವಿಕ ವೆಚ್ಚ'ಗಳ ನಿರೂಪಣೆಯೇ ಉತ್ತರ ಎಂದನು. ಸರಕುಗಳನ್ನು ರಿಕಾರ್ಡೋ 'ಪುನರುತ್ಪಾದಿತವಾಗದುವು' ಮತ್ತು 'ಪುನರುತ್ಪಾದಿತವಾಗುವುವು' ಎಂದು ಎರಡು ವರ್ಗಗಳಾಗಿ ವಿಂಗಡಿಸಿದನು. ಮೊದಲನೆಯ ವರ್ಗದ ಮಟ್ಟಿಗೆ ಬೇಡಿಕೆಯ ಒತ್ತಡವು ಧಾರಣೆಯನ್ನು ನಿರ್ಮಿಸುವುದು. ಶಿವಾಜಿಯ ಕತ್ತಿ ಇಂಥ ಒಂದು ಸಾಮಗ್ರಿ. ಬೇಡಿಕೆಯುಳ್ಳವರು ಮೈಮೇಲೆ ಬಿದ್ದುಕೊಂಡು ಕೊಂಡರೆ ಕತ್ತಿಯ ಧಾರಣೆಯು ಲಕ್ಷಗಟ್ಟಲೆ ರೂಪಾಯಿಯಾದರೂ ಆಗಬಹುದು. ಶಿವಾಜಿಯ ಮೇಲೆ ಭಾರತೀಯರಿಗೆ ಮಮತೆ ಬತ್ತಿಹೋದ ಕಾಲದಲ್ಲಿ ಬರೇ ಲೋಹದ ಬೆಲೆಗೆ ಶಿವಾಜಿಯ ಕತ್ತಿಯು ಮಾರಾಟವಾಗಲಿಕ್ಕೂ ಸಾಕು. ಸಿಜಾನ್ನೆ, ಗೋಯಾ, ವಾನ್‌ಗೋ ಮುಂತಾದ ಐರೋಪ್ಯ ಚಿತ್ರಕಾರರು ಬಿಡಿಸಿದ ಕಲಾಕೃತಿಗಳಿಗೆ ಲಕ್ಷಗಟ್ಟಲೆ ಬೆಲೆ ಬರುವುದುಂಟು. ಪುನರುತ್ಪಾದಿತವಾಗುವಂಥವುಗಳ ಮಟ್ಟಿಗೆ ರಿಕಾರ್ಡೋನ ದೃಷ್ಟಿಯಲ್ಲಿ ಬೇರೆ ಬೇರೆ ಬಗೆಯ ಬಂಡವಾಳಗಳೂ, ಬೇರೆ ಬೇರೆ ಬಗೆಯ ಪರಿಶ್ರಮಗಳೂ ಇವೆ. ಇವುಗಳ ಭಿನ್ನ ಭಿನ್ನ ಹಿನ್ನೆಲೆಯಲ್ಲಿ ಕೆಲವು ವ್ಯಾಸ್ತವಿಕ ಶಕ್ತಿಗಳು ಕೆಲಸ ಮಾಡುವುವು. ಪರಿಶ್ರಮದಲ್ಲಿ ಶ್ರಮ

ಜೀವಿಗಳ ಯತ್ನವೂ, ಬಂಡವಾಳಗಾರರಲ್ಲಿ ಅವರ ತ್ಯಾಗ ಮತ್ತು ಸಂಯಮಗಳೂ ಈ ನೇಪಥ್ಯ ಶಕ್ತಿಗಳು. ಹಣವು ತಟಸ್ಥವೆಂದು ನಾವು ಎಣಿಸಿದರೆ ಸರಕುಗಳ ಮೌಲ್ಯವು ಅವುಗಳ ಉತ್ಪಾದನೆಯ ವಾಸ್ತವಿಕ ವೆಚ್ಚ (ಬಂಡವಾಳದ ತ್ಯಾಗ, ಸಂಯಮ; ಪರಿಶ್ರಮದ ಯತ್ನ)ದಿಂದ ನಿರ್ಣಯಿಸಲ್ಪಡುವುದು ಅಂದರೆ ಮೂಲತ. ರಿಕಾರ್ಡೋನ ನಿರೂಪಣೆಯೂ ಪರಿಶ್ರಮದ ವಿವರಣೆಯನ್ನು ಬಿಟ್ಟಿಲ್ಲ. ಯತ್ನ, ತ್ಯಾಗಗಳನ್ನು ಅಳೆಯಲು ಕೆಲವು ಅರ್ಥಶಾಸ್ತ್ರಿಗಳು ರಿಕಾರ್ಡೋನ ನಿರೂಪಣೆಯ ಪರಿಶೋಧಿಸಿದ ಸಂಸ್ಕರಣ ಒಂದನ್ನು ಪ್ರಕಟಿಸಿದರು ಇದರಲ್ಲಿ ಯತ್ನಕ್ಕೆ ಕೊಡುವ ಹಣ (ಕೂಲಿಯೂ) ತ್ಯಾಗ ಸಂಯಮಗಳಿಗೆ ಸಲ್ಲುವ ಹಣ(ಬಡ್ಡಿಯೂ) ಮೌಲ್ಯವನ್ನು ನಿರ್ಧರಿಸುವುವು ಎಂದು ವಿವರಿಸಲಾಯಿತು ಮಿಲ್ ಈ ವಾದದ ಪುರಸ್ಕರ್ತನಾದನು ಆದರೆ ಈ ವಾದದಲ್ಲಿಯೂ ಹಣ-ವೆಚ್ಚವನ್ನು ಪೃಥಕ್ಕರಿಸುತ್ತ ಹೋದಂತೆ ಮರಳಿ ಧಾರಣೆ ಮೌಲ್ಯಗಳ ಪ್ರಶ್ನೆಯೇ ಬಂದು ಒಟ್ಟಾರೆ ಮೇಲೆ ಒಂದು ಧಾರಣೆಯಿಂದ ಇನ್ನೊಂದು ಧಾರಣೆಗೆ ಅರ್ಥ ಹೇಳುವುದು ಮಾತ್ರ ಉಳಿಯುವುದು. ಆದುದರಿಂದ ಇದು ವಿವರಣೆಯೇ ಅಲ್ಲ ಎಂದು ವಿಕ್ಸೆಲ್ ಕಟುವಾಗಿ ಟೀಕಿಸಿದ್ದಾನೆ

ಎರಡನೆಯದಾಗಿ, ರಿಕಾರ್ಡೋನ ಭೂಮಿಯ ಗೇಣಿಯನ್ನು ಬಲಾತ್ಕಾರವಾಗಿ ತನ್ನ ನಿರೂಪಣೆಯಿಂದ ಹೊರದಬ್ಬಿದ್ದಾನೆ ರಿಕಾರ್ಡೋನಗೆ ಗೇಣಿಯು ವಾಸ್ತವಿಕ ವೆಚ್ಚಗಳೊಡನೆ ಸೇರದೆ ಹೋದುದರಿಂದ 'ಗೇಣಿಯು ಧಾರಣೆಯನ್ನು ನಿರ್ಧರಿಸುವುದಿಲ್ಲ. ಧಾರಣೆಯೇ ಗೇಣಿಯನ್ನು ನಿರ್ಣಯಿಸುವುದು.' ಆದರೆ ಗೇಣಿಯನ್ನು ಬಿಟ್ಟಿರುವ ಹಣ-ವೆಚ್ಚದ ನಿರೂಪಣೆಯು ಅಪೂರ್ಣವಾದುದು

ಮೂರನೆಯದಾಗಿ, ಹಣವೆಚ್ಚವನ್ನು ಪರಿಶ್ರಮ ಮತ್ತು ಬಂಡವಾಳಕ್ಕೆ ಮಾತ್ರ ಅನ್ವಯಿಸಿದುದು ತಪ್ಪು

**ಮಾರ್ಶಲನ ದ್ವೈತ ಮೀಮಾಂಸೆ:**

'ಪರಿಸರದ ಉಪಯುಕ್ತತೆ'ಯು ಚಲಾವಣೆಗೆ ಬಂದ ಮೇಲೆ ಮಾರ್ಶಲನು 'ಪುನರುತ್ಪಾದಿತವಾಗುವುವು', 'ಪುನರುತ್ಪಾದಿತವಾಗದವು' ಎಂಬ

ರಿಕಾರ್ಡೋನ ವರ್ಗೀಕರಣವನ್ನು ಳಿಸಿಕೊಂಡು, ಎರಡನೆಯದರ ಮಟ್ಟಿಗೆ ವಿರಳತ್ವವು ಧಾರಣೆಯನ್ನು ನಿರ್ಣಯಿಸುವುದೆಂದೂ, ಮೊದಲನೆಯದರ ಮಟ್ಟಿಗೆ ಉತ್ಪಾದನೆಯ ವೆಚ್ಚವು ಧಾರಣೆಯನ್ನು ನಿರ್ಣಯಿಸುವುದೆಂದೂ ಹೇಳಿದನು. ಪ್ರತಿಯೊಂದು ಸರಕಿನ ಮೌಲ್ಯವೂ ಬೇಡಿಕೆ ಪೂರೈಕೆಗಳ ಸಮತೋಲದಿಂದ ನಿರ್ಣಯವಾಗುವುದು ಬೇಡಿಕೆಯ ಕಡೆಯಿಂದ ಮೌಲ್ಯ ನಿರ್ಣಯ ಮಾಡುವಂತಹುದು ಪರಿಸರದ ಉಪಯುಕ್ತತೆ; ಪೂರೈಕೆಯ ಕಡೆಯಿಂದ, ಉತ್ಪಾದನೆಯ ವೆಚ್ಚ. ಉಪಯುಕ್ತತೆಯೂ, ಉತ್ಪಾದನೆಯ ವೆಚ್ಚವೂ ಸೇರಿ ಮೌಲ್ಯವು ನಿರ್ಣಯವಾಗುವುದು. ಧಾರಣೆಯು ನಿರ್ಣಯಿಸಲ್ಪಡುವುದು ಉಪಯುಕ್ತತೆಯಿಂದಲೋ, ಉತ್ಪಾದನೆಯ ವೆಚ್ಚದಿಂದಲೋ ಎಂದು ಕೇಳುವುದು ಕತ್ತರಿಯು ಕಾಗದ ಕತ್ತರಿಸುವುದು ಮೇಲಿನ ಅಲಗಿನಿಂದಲೋ ಕೆಳಗಿನ ಅಲಗಿನಿಂದಲೋ ಎಂದು ಕೇಳುವಷ್ಟೇ ಹೆಡ್ಡತನದ ಮಾತಾದೀತು.

ಉತ್ಪಾದನೆಯ ವೆಚ್ಚವೆಂದರೆ ಏನೋ ಗಾಳಿಯಲ್ಲಿ ಹಾರಾಡುವ ವಿತಂತು ಸರಕೆಂದು ಮಾರ್ಶಲ ತಿಳಿದಂತಿದೆ. ನಮ್ಮ ಒಂದು ಇಚ್ಛೆಯ ತೃಪ್ತಿ ಇನ್ನೊಂದು ಇಚ್ಛೆಯ ಅತೃಪ್ತಿಗೆ ಸಾಪೇಕ್ಷವಾಗಿ ನಡೆಯುವಂತೆಯೇ ವೆಚ್ಚವೂ ಕೂಡ ಸಾಂದರ್ಭಿಕ ವೆಚ್ಚವೇ ಆಗುವುದು ನಾವು ನೆರವೇರಿಸದೆ ಬಿಟ್ಟ ಒಂದು ಉಪಯುಕ್ತತೆಯೇ ನಮ್ಮ ವೆಚ್ಚ ಈ ದೃಷ್ಟಿಯಿಂದ ವೆಚ್ಚ ಮತ್ತು ಉಪಯುಕ್ತತೆ ಎಂಬುವು ಭಿನ್ನವಾದುವಲ್ಲ ಬೇಡಿಕೆ ಪೂರೈಕೆಗಳು ಭಿನ್ನ ಶಕ್ತಿಗಳಲ್ಲ ಸ್ಪರ್ಧಿಸುವ ಅನೇಕ ಬೇಡಿಕೆಗಳ ಪರಿತ್ಯಾಗವೇ ವೆಚ್ಚ

‘‘ಗಿರಾಕಿಗಳೂ ಮಾರಾಟಗಾರರೂ ಧಾರಣೆಯ ಮಾನದಂಡದ ಬೇರೆ ಬೇರೆ ಭಾಗಗಳಲ್ಲಿ ಅಥವಾ ಉತ್ಪಾದನೆಯ ಕಾರ್ಯಭಾಗದ ಭಿನ್ನ ದಿಶೆಗಳಲ್ಲಿ ಬೇಡಿಕೆಯನ್ನು ಪ್ರಚೋದಿಸುವ ಶಕ್ತಿಗಳು. ಪೂರೈಕೆಯ ಕಮಾನು ಸೌಲಭ್ಯಕ್ಕೋಸ್ಕರ ಕವುಚಿಟ್ಟ ಬೇಡಿಕೆಯ ಕಮಾನಿನ ಒಂದು ಪಾರ್ಶ್ವ” ಎಂದು ವಿಕ್‌ಸ್ಟೀಡ್ ಹೇಳಿರುವನು. ಆದುದರಿಂದ ಬೇಡಿಕೆ ಪೂರೈಕೆಗಳು ಮೌಲ್ಯವನ್ನು ಪ್ರತಿಪಾದಿಸಲು ಅಸಮರ್ಥವಾಗಿವೆ.

**ಪ್ರಯೋಜನ ಮೀಮಾಂಸೆ:**

ಸರಕುಗಳ ಧಾರಣ ಅವು ಯಾವ ವರ್ಗದ ಪ್ರಯೋಜನಕ್ಕೆ ಅನುವಾಗುವುವು ಎಂಬುದನ್ನು ಅವಲಂಬಿಸುವುದು ಎಂಬುದೇ ಪ್ರಯೋಜನವಾದಿಗಳ ತರ್ಕ ಸರಕನ್ನು ಬಳಸಿಕೊಳ್ಳುವ ಪ್ರಯೋಜನವು ಮಹತ್ತ್ವದಲ್ಲಿಯೂ ಮೌಲ್ಯದಲ್ಲಿಯೂ ಅಧಿಕವಾದಂತೆ ಸರಕಿನ ಮೌಲ್ಯವು ಹೆಚ್ಚುವುದಂತೆ. ಇದಕ್ಕೆ ವಿಪರೀತವಾದ ಸನ್ನಿವೇಶದಲ್ಲಿ ಕಡಿಮೆಯಾಗುವುದಂತೆ ವಿಚಾರಮಾಡಿದಲ್ಲಿ ಈ ಪ್ರಯೋಜನ ಮೀಮಾಂಸೆಯು ಅವಾಸ್ತವವೆಂದು ಖಚಿತವಾಗುವುದು.

೧ ಒಂದು ಸರಕನ್ನು 'ಇದು ಇಂಥ ಪ್ರಯೋಜನ ವರ್ಗಕ್ಕೆ ಸೇರಿದುದು' ಎಂದು ವಿಂಗಡಿಸುವುದು ಅಸಾಧ್ಯ. ಪ್ರಯೋಜನ ಎಂದೊಡನೆ ಯಾರಿಗೆ? ಎಂಬ ಪ್ರಶ್ನೆ ಉದ್ಭವಿಸುವುದು. ವ್ಯಕ್ತಿಯು ದುಡ್ಡು ಕೊಟ್ಟು ಯಾವ ಸರಕನ್ನೂ ಕೊಳ್ಳಬಹುದಾದ್ದರಿಂದ ಸರಕಿನಲ್ಲಿ ವರ್ಗೀಕರಣ ಸಾಧ್ಯವಿಲ್ಲ. ವ್ಯಕ್ತಿಯ ದೃಷ್ಟಿಯಿಂದ ನಾವು ಮೌಲ್ಯ ಕಟ್ಟುವುದು ತಾನೆ?

'ಇದಕ್ಕಿಷ್ಟು ಮೌಲ್ಯಕೊಡುವೆ' ಎಂದು ನಾನು ಆರೋಪಿಸಿ, ಒಂದು ಸರಕನ್ನು ಬೇಡಿದುದರಿಂದಲೇ ಅದು 'ಆರ್ಥಿಕ' ಸರಕು ಆದುದಲ್ಲದೆ ಭಗವಂತನು ಸೃಷ್ಟಿ ಮಾಡಿದುದರಿಂದಲ್ಲ.

೨. ಯಾವ ಸರಕನ್ನು ಯಾವ ವರ್ಗಕ್ಕೆ ಸೇರಿಸೋಣ? ಹಾಗೆ ಸೇರಿಸಲು ಒರೆಗಲ್ಲು ಯಾವುದು?

೩. ಪೂರೈಕೆಯ ಬದಲಾವಣೆಯಿಂದ ಸರಕಿನ ಬೆಲೆ ಬದಲಾಗುವುದಿಲ್ಲವೆ?

೪. ಪ್ರತಿಯೊಂದು ಸರಕಿಗೂ ಅನೇಕ ಪ್ರಯೋಜನಗಳಿವೆಯಲ್ಲಾ?

**ಪರಿಸರೋಪಯುಕ್ತತೆಯ ಮೀಮಾಂಸೆ:**

ಇಂಗ್ಲೆಂಡಿನಲ್ಲಿ ಜೇವನ್ಸ್, ಇಟಲಿಯಲ್ಲಿ ವಾಲ್ರಾಸ್, ಜರ್ಮನಿಯಲ್ಲಿ ಬೋಂಬೊವಾರ್ಕ, ಆಸ್ಟ್ರಿಯದಲ್ಲಿ ಮೆಂಗರ್ ತಾವು ತಾವೇ ಸ್ವತಂತ್ರವಾಗಿಯೂ, ನಿರಪೇಕ್ಷವಾಗಿಯೂ ಯೋಚಿಸಿ, ಪರಿಸರದ ಉಪಯುಕ್ತತೆಯ

ಮೀಮಾಂಸೆಯನ್ನು ಕಂಡುಹಿಡಿದರು. (೧) ಅವರು ಮೊದಲಿನಂತೆ ಸಮಗ್ರ ಉಪಯುಕ್ತತೆಯನ್ನು ಬಳಸುವುದು ಬಿಟ್ಟು, ಸರಕಿನ ಸ್ವಲ್ಪಾಂಶಗಳನ್ನು ಹಿಡಿದು ತರ್ಕಕ್ಕೆ ಆರಂಭಿಸಿದರು ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದಾಯಿತು ಈ ರೀತಿಯಾಗಿ ಪರಿಸರದ ಉಪಯುಕ್ತತೆಯೆಂಬ ಕ್ರಾಂತಿಕಾರೀ ತತ್ತ್ವವೊಂದು ಸೃಷ್ಟಿಗೊಂಡುದರಿಂದ ಆರ್ಥಿಕ ಸಿದ್ಧಾಂತ ದಲ್ಲಿ ಸ್ಪಷ್ಟತೆಯೂ, ಸಾಂಗತ್ಯವೂ ಮೂಡಿ ಬಂದುವು (೨) ಮೌಲ್ಯಕ್ಕೆ ಹಿಂದಿನವರು ಕೊಡುತ್ತಿದ್ದ ಧಾರ್ಮಿಕ ನೈತಿಕ ಅರ್ಥಗಳನ್ನು ಬಿಸುಟು, ಮಾರ್ಕೆಟಿಗೆ ಬಂದ ವ್ಯಕ್ತಿಯ ವಾಸ್ತವಿಕ ವರ್ತನೆಯನ್ನು ಪರಿಶೀಲಿಸುವುದಕ್ಕೆ ಅರ್ಥಶಾಸ್ತ್ರಿಗಳು ಆರಂಭಿಸಿದರು.

ಸಾಂಪ್ರದಾಯಿಕ ಮೀಮಾಂಸೆಯಲ್ಲಿ ಉಂಟಾಗಿದ್ದ ವಿರಳತ್ವ ಮತ್ತು ಉಪಯುಕ್ತತೆ ಎಂಬ ದ್ವೈತವು ಈಗ ಅಳಿದುಹೋಯಿತು ಏಕೆಂದರೆ ಪರಿಸರದ ಉಪಯುಕ್ತತೆಯು ವಿರಳತ್ವ ಮತ್ತು ಉಪಯುಕ್ತತೆಯ ಒಂದು ಸುಂದರ ಸಮನ್ವಯ. ಅನುಭೋಗವು ಸ್ತಬ್ಧವಾಗುವಂಥ ಉಪಯುಕ್ತ ತೆಯ ಪ್ರಮಾಣವೇ, ಆ ಮೇರೆಯೇ, ಪರಿಸರದ ಉಪಯುಕ್ತತೆ. ಅಲ್ಲಿ ವಿರಳತ್ವವು ಬರುವುದರಿಂದಲೇ ಅನುಭೋಗವು ಕೊನೆಗೊಳ್ಳತಕ್ಕುದು.

ಪರಿಸರದ ಮೀಮಾಂಸೆಯನ್ನು ಹೆಚ್ಚು ಮಟ್ಟಿಗೆ ಎಲ್ಲ ಅರ್ವಾಚೀನ ಅರ್ಥಶಾಸ್ತ್ರಿಗಳೂ ಒಪ್ಪಿಕೊಂಡಿರುತ್ತಾರೆ. ಬೇಡಿಕೆ ಪೂರೈಕೆ ಎರಡಕ್ಕೂ ಪರಿಸರದ ಮೀಮಾಂಸೆಯಲ್ಲಿ ಉಚಿತ ಪ್ರಾಶಸ್ತ್ಯವನ್ನು ಕೊಡಬಹುದಾಗಿದೆ. ಬೇಡಿಕೆಯಲ್ಲಿ ಉಪಯುಕ್ತತೆಯೂ, ಪೂರೈಕೆಯಲ್ಲಿ ಉತ್ಪಾದನೆಯ ವೆಚ್ಚ ವೂ ಗಮನೀಯ ಅಂಶಗಳು. ಪರಿಸರದ ಉಪಯುಕ್ತತೆಯೂ, ಪರಿಸರದ ವೆಚ್ಚವೂ ಎರಡೂ ಹಣದಲ್ಲಿ ನಿರೂಪಿಸಲಾಗುವುವು. ಸಮತೋಲವಾಗುವ ಬಿಂದುವಿನಲ್ಲಿ ಬೇಡಿಕೆ ಪೂರೈಕೆಗಳು ಸಮಾನವಾಗುವುವು. ಈ ಬಿಂದು ಸರಕಿನ ಮೌಲ್ಯವನ್ನು ಸೂಚಿಸುವುದು. ಅವಧಿಯು ಅಲ್ಪವಾದರೆ ಬೇಡಿ ಕೆಯ ಪರಿಸ್ಥಿತಿಯ ಪ್ರಭಾವ ಹೆಚ್ಚು ಅವಧಿಯು ದೀರ್ಘವಾದರೆ ಪೂರೈ ಕೆಯ ಪರಿಸ್ಥಿತಿಯ ಪ್ರಭಾವ ಹೆಚ್ಚು. ಪರಿಸರದ ಮೀಮಾಂಸೆಯಲ್ಲಿ 'ಮೌಲ್ಯದ ಸ್ವಯಂ ವಿರುದ್ಧೋಕ್ತಿ'ಯು ಮಾಯವಾಗುವುದು. ಸರಕಿನ ಸಮಗ್ರ ಉಪಯುಕ್ತತೆ ಅತ್ಯಧಿಕವಾಗಿರುವುದು ಮುಖ್ಯವಲ್ಲ, ಅದರ ಪೂರೈ

ಕೆಯೂ ಅತ್ಯಧಿಕವಾಗಿದ್ದು, ಪರಿಸರದ ಏಕಾಂಶದ ಉಪಯುಕ್ತತೆಯು ಶೂನ್ಯವನ್ನು ಸಮೀಪಿಸಿದರೆ ಆ ಸರಕಿನ ಮೌಲ್ಯವೂ ಶೂನ್ಯವಾಗುವುದು. ಮೌಲ್ಯ ನಿರ್ಣಯಮಾಡಲು ಪರಿಸರದ ಕ್ರಮವು ಹೆಚ್ಚು ಸೂಕ್ತವೆಂದಷ್ಟೇ ತಾತ್ಪರ್ಯವಲ್ಲದೆ ಇದರಲ್ಲೂ ಆಕ್ಷೇಪಾರ್ಹ ವಿಷಯಗಳು ಇಲ್ಲವೆಂದಲ್ಲ.

(೧) ಉಪಯುಕ್ತತೆ ಮತ್ತು ವೆಚ್ಚಗಳನ್ನು ಹಣದ ರೂಪದಲ್ಲಿ ಹೇಳುವುದು ಜಟಿಲವಾದ 'ವ್ಯಕ್ತಿಪರ' ಹಾಗೂ 'ವಸ್ತುಪರ' ಶಕ್ತಿಗಳನ್ನು ಬದಿಗೆ ತಳ್ಳುವ ಪ್ರಯತ್ನವಾಗಿದೆ. (೨) ಉಪಯುಕ್ತತೆಯನ್ನೂ, ಉತ್ಪಾದನೆಯ ವೆಚ್ಚವನ್ನೂ ಪರಿಸರ ಮೀಮಾಂಸೆಯು ಬಯಸುವಷ್ಟು ಚಿಕ್ಕ ಚಿಕ್ಕ ಖಂಡ ಗಳಾಗಿ, ಏಕಾಂಶಗಳಾಗಿ ವಿಭಜಿಸುವುದೂ ಆ ಮೇಲೆ ಅವನ್ನು ಅಳೆಯು ವುದೂ ಕಷ್ಟದ ಕೆಲಸ (೩) ಅನುಭೋಗಿಗಳೂ, ಉತ್ಪಾದಕರೂ, ಈ ರೀತಿ ಚಿಕ್ಕ ಚಿಕ್ಕ ಪ್ರಮಾಣಗಳನ್ನು ಪ್ರತಿನಿಧಾನ ಮಾಡುವುದರಲ್ಲಿ ನಿಜಕ್ಕೂ ಕಾಲಹರಣ ಮಾಡುತ್ತಾರೆಯೆ? (೪) ಹಾಗೆ ಮಾಡುವುದು ಮನುಷ್ಯನ ಸ್ವಾಭಾವಿಕ ವರ್ತನೆಯಾದೀತೆ? ಎಂಬುದು ಮನೋಜ್ಞವಾದ ವಿಚಾರ ಮತ್ತು ಮನೋ ವೈಜ್ಞಾನಿಕರಿಗೂ ನಿಚ್ಚಳವಾಗಿ ತಿಳಿಯದಿರುವ ವಿವರ. (೫) ವ್ಯಕ್ತಿಯ ವಿನಿಮಯ ವರ್ತನೆಯು ಎಲ್ಲ ಕಾಲಕ್ಕೂ ಒಂದೇ ಬಗೆಯಾಗಿ ಇರುವುದಿಲ್ಲ ಸದಾ ಚಾಂಚಲ್ಯವೇ ಅದರ ಲಕ್ಷಣ ಎನ್ನುವವರೂ ಇದ್ದಾರೆ (೬) ವ್ಯಕ್ತಿಯ ವರಮಾನವು ಬದಲಾವಣೆ ಹೊಂದಿದಂತೆ ಅವನು ಮೌಲ್ಯ ಕಟ್ಟುವ ಕ್ರಮವೂ ಪರಿವರ್ತನೆಯಾಗುವುದು.

ಯಾವ ಆಕ್ಷೇಪಗಳಿದ್ದರೂ, ಆರ್ಥಿಕ ವ್ಯವಸ್ಥೆಯಲ್ಲಿ ಕ್ರಿಯಾಶೀಲ ವಾದ ಶಕ್ತಿಗಳ ಸಂಘರ್ಷ, ಸಮ್ಮಿಳನಗಳನ್ನು ಪರಿಶೀಲಿಸುವುದಕ್ಕೆ ಪರಿಸರ ಕ್ಕಿಂತ ಉತ್ತಮವಾದ ಸ್ಥಾನವು ಬೇರಿಲ್ಲ. ಅದಕ್ಕೆ ಮೌಲ್ಯವನ್ನು ನಿರ್ಣ ಯಿಸುವ ಸಂಪೂರ್ಣ ಶಕ್ತಿ ಇಲ್ಲದಿದ್ದರೂ, ಮೌಲ್ಯ ನಿರ್ಣಯದ ಜಟಿಲ ಸಮಸ್ಯೆಯನ್ನು ಪರಿಸರದಲ್ಲಿ ಕಾಣುವಂತೆ ಬೇರೆಲ್ಲಿಯೂ ನಾವು ಕಾಣಲಾ ರವು. ಆದುದರಿಂದ ಪರಿಸರದ ಮೀಮಾಂಸೆಯು ಸರ್ವಶಕ್ತವಲ್ಲವಾದರೂ, ಬೇರೆ ಮೀಮಾಂಸೆಗಳಿಗಿಂತ ಸರ್ವೋತ್ತಮವಾದ ವಿವರಣೆಯೆಂದು ಅರ್ಥ ಶಾಸ್ತ್ರಿಗಳು ಪರಿಗಣಿಸುವರು.

ಆರನೆಯ ಅಧ್ಯಾಯ

# ಉತ್ಪಾದನೆ

ಇನ್ನು ಮುಂದೆ ಸರಕುಗಳ ಉತ್ಪಾದನೆಯ ಸಮಸ್ಯೆಯನ್ನು ಚರ್ಚಿಸೋಣ. ಈ ವರೆಗೆ ಸರಕುಗಳು ಹೇಗೋ, ಎಲ್ಲಿಂದಲೋ, ಬಂದು ಬೇಡಿಕೆಗಾಗಿ ಕಾತರಿಸಿಕೊಂಡಿದ್ದ ಚಿತ್ರವೊಂದೇ ನಮ್ಮ ಕಣ್ಣಮುಂದಿತ್ತು. ಆದರೆ ಈ ಬಗೆಯ ಅಲ್ಲಾವುದ್ದೀನನ ವಿಚಿತ್ರ ದೀಪವು ಕಲಿಯುಗದಲ್ಲಿ ವಾಸ್ತವವಾಗಿ ನೋಡಸಿಗುವುದು ವಿರಳವಾದುದರಿಂದ ಸರಕು ಹೇಗೆ ಉತ್ಪಾದಿತವಾಯಿತು? ಎಲ್ಲಿ? ಯಾರಿಂದ? ಏಕೆ? ಎಂಬ ಪ್ರಶ್ನೆಗಳನ್ನೂ ನಾವು ಆಲೋಚಿಸತಕ್ಕದು ಸರಕಿನ ಸೃಷ್ಟಿಯನ್ನು ನಾವು ಸರಕು ತಯಾರಿಸುವ ಉತ್ಪಾದಕರ ದೃಷ್ಟಿಯಿಂದ ನೋಡಬೇಕು. ಮುಂಬೈಯ ಹಿಂದ್ ಸ್ಯಾಕಲ್ ಉತ್ಪಾದಕರು ಕಾರ್ಖಾನೆಯನ್ನು ಮುಂಬೈಯಲ್ಲಿ ಏಕೆ ತೆರೆದಿರುವುದು? ಅವರ ಉತ್ಪಾದನೆಯ ವೆಚ್ಚಗಳು ಯಾವುವು? ಉತ್ಪಾದನೆಯ ಅವಯವಗಳು ಯಾವುವು? ದೇಶದ ಒಟ್ಟು ಸ್ಯಾಕಲು ಉತ್ಪಾದನೆಯಲ್ಲಿ ಇವರದು ಎಷ್ಟು ಅಂಶ? ಪರದೇಶದಿಂದ ಸುಧಾರಿತ ಯಂತ್ರಗಳನ್ನು ತರಿಸಿ, ಅವರು ತಮ್ಮ ಉತ್ಪಾದನೆಯ ಗಾತ್ರವನ್ನು ಹೆಚ್ಚಿಸಿದರೆ ಮಿತವ್ಯಯವೋ, ಇದ್ದ ಯಂತ್ರಗಳಿಂದಲೇ ಆದಷ್ಟು ದೀರ್ಘಕಾಲ ಕೆಲಸ ನಡೆಯಿಸಿದರೆ ಹೆಚ್ಚು ಲಾಭವೋ? ಸೈಕಲಿನ ಉತ್ಪಾದನೆಯಲ್ಲಿ ಎಷ್ಟು ಶ್ರಮವಿಭಾಗಗಳಿವೆ? ಹಿಂದ್ ಸೈಕಲ್ ಸಂಸ್ಥೆಯು ಖಾಸಗಿ ಸಂಸ್ಥೆಯೋ ಅಥವಾ ಕೂಡು ಬಂಡವಾಳದ ಸಂಸ್ಥೆಯೋ? ಹಿಂದ್ ಸೈಕಲ್‌ನ ಉತ್ಪಾದನೆಯು, ಇತರ ಸೈಕಲ್ ಉತ್ಪಾದನೆಯವರ ಪೈಪೋಟಿಯಿಂದ ಎಷ್ಟುಮಟ್ಟಿಗೆ ಪ್ರಭಾವಿತವಾಗಿದೆ?— ಮುಂತಾದ ನೂರಾರು ಸಮಸ್ಯೆಗಳು ಉತ್ಪಾದನೆಯ ಸಮಸ್ಯೆಯ ಅಂಗಗಳಾಗಿವೆ. ಒಂದು ದೇಶದ ಒಟ್ಟು ಉತ್ಪಾದನೆಯ ಗಾತ್ರವನ್ನು ತೆಗೆದುಕೊಂಡಾಗಲೂ ಇಂತಹ ಸಮಸ್ಯೆಗಳು ಇದ್ದೇ ಇವೆ. ಆದರೆ ಸ್ವತಂತ್ರವಾದ, ಕೇಂದ್ರ ಯೋಜನೆಯಿಲ್ಲದ, ಬಂಡವಾಳಗಾರ ಸಮಾಜದಲ್ಲಿ ಖಾಸಗಿ ವ್ಯಕ್ತಿಗಳು ಹಲವರು, ಹಲವು ಕಡೆಯಲ್ಲಿ

ಮಾರ್ಕೆಟು ಧಾರಣೆಯನ್ನೂ, ಜನರ ಬೇಡಿಕೆಯನ್ನೂ, ಪ್ರತಿಸ್ಪರ್ಧಿಗಳ ಪೈಪೋಟಿಯನ್ನೂ, ಅಹರ್ನಿಶಿ ಗಮನದಲ್ಲಿಟ್ಟುಕೊಂಡು ಸ್ವಂತ ನಿರ್ಣಯ ಗಳನ್ನು ಮಾಡಿ ಸರಕುಗಳನ್ನು ಉತ್ಪಾದಿಸುವರು ರಶಿಯದಂಥ ಯೋಜ ನಾತ್ಮಕ ಸಮಾಜಗಳಲ್ಲಿ ಇಡಿಯ ರಾಷ್ಟ್ರದಬಗ್ಗೆ ನಿರ್ಣಯಗಳನ್ನು ಮಾಡುವ ಕೇಂದ್ರ ಸಂಸ್ಥೆ ಇರುವುದು. ಎಲ್ಲಾ ಉತ್ಪಾದಕರೂ, ಆ ಸಂಸ್ಥೆಯ ಅಪ್ಪ ಣೆಗೊಳಗಾಗಿ, ಅದು ಹೇಳಿದಷ್ಟು ಪರಿಮಾಣದ ಸರಕುಗಳನ್ನು ಇಂತಿಷ್ಟೇ ಅವಧಿಯೊಳಗಾಗಿ ತಯಾರಿಸಿ ಒಪ್ಪಿಸಬೇಕೆಂಬ ಕಟ್ಟಪ್ಪಣೆ ಇರುತ್ತದೆ ಈ ಎರಡು ಬಗೆಯ ಸಮಾಜಗಳಲ್ಲಿಯೂ ಉತ್ಪಾದನೆಯ ಕಾರ್ಯಕ್ರಮದಲ್ಲ ಸೇರುವ ಅವಯವಗಳೂ ಅವುಗಳನ್ನು ಬೆರೆಯಿಸುವ ಪ್ರಶ್ನೆಯೂ ಒಂದೇ ಜಾತಿಯವು

ಉತ್ಪಾದನೆಯ ಮುಖ್ಯಗುರಿ ಯಾವುದು? ಎಂದು ಯಾರನ್ನು ಕೇಳಿ ದರೂ ಜನರ ಬಡತನವನ್ನು ಹೋಗಲಾಡಿಸಿ, ಅವರ ಜೀವನದ ಮಟ್ಟ ವನ್ನು ವರ್ಧಿಸುವುದು ಎಂಬ ಸಮರ್ಪಕವಾದ ಉತ್ತರ ಸಿಕ್ಕೀತು ಬೇಟೆ ಯಾಡಿ ಜೀವಿಸುತ್ತಿದ್ದ ಮನುಷ್ಯ ಹೂಟ ಹೂಡಲು ಪ್ರಾರಂಭಿಸಿ, ಸಮಾಜ ವನ್ನು ರಚಿಸಿಕೊಂಡೊಡನೆಯೇ ಉತ್ಪಾದನೆಯ ಸಮಸ್ಯೆ ಜನಿಸಿತು. ಮನೆಯಲ್ಲಿ ಎರಡುಮಂದಿ ಇದ್ದಾಗಿನ ಪ್ರಶ್ನೆಯೇ ಬೇರೆ, ನಾಲ್ಕುಮಂದಿ ಮಕ್ಕಳಾದಮೇಲಿನ ಪ್ರಶ್ನೆಯೇ ಬೇರೆ. ಹಿಂದೆ ವಾರಕ್ಕೆ ಹತ್ತುಸೇರು ಕಾಳು ಉತ್ಪಾದಿಸುತ್ತಿರುವಲ್ಲಿ ಈಗ ಹೆಚ್ಚು ಬೆಳೆಯಬೇಕು ಹೆಚ್ಚು ಹೇಗೆ ಬೆಳೆಯೋಣ? ಕಾಡುಕಡಿದು ಹೊಸ ಉಳುನೆಲವನ್ನು ಹೂಡೋ ಣವೇ? ಇದ್ದ ಹೊಲದಲ್ಲೇ ಎರಡು ಬೆಳೆಯನ್ನು ಬೆಳೆಸೋಣವೇ? ಎಂಬುದು ಉತ್ಪಾದಕನ ಸಮಸ್ಯೆ. ನಾಗರಿಕ ಸಮಾಜದಲ್ಲಿ ಔದ್ಯೋಗೀಕರಣವೂ ಸಂಭವಿಸಿದ ಬಳಿಕ, ಜನಜೀವನದ ಮಟ್ಟದ ಸುಧಾರಣೆ ಬಹುಮಟ್ಟಿಗೆ ಊರ್ಜಿತಕ್ಕೆ ಬರಲು ಉತ್ಪಾದನೆಯ ವೇಗವು ಅತಿಶಯವಾದುದೇ ಕಾರಣ. ಒಂದು ಹೊತ್ತಿಗೂ ಗಂಜಿಗೆ ಗತಿಯಿಲ್ಲದ ಏಶಿಯದ ಹಿಂದುಳಿದ ರಾಷ್ಟ್ರದ ಜನಗಳ ಬಡತನವು ಕಣ್ಣುಕುಕ್ಕುವಂತಿರುವುದರಿಂದ ನಮ್ಮ ಜನರು ಈಗ ಔದ್ಯೋಗೀಕರಣದ ಸುವರ್ಣ ಮೃಗವನ್ನು ಮೋಹಿಸುವುದು ಸಹಜವಾಗಿದೆ. ಔದ್ಯೋಗೀಕರಣದಿಂದ ದೇಶವು ಸಂಪನ್ನವಾಗುವುದು. ಪ್ರತಿಯೊಬ್ಬನಿಗೂ

ಉಣಲು ಹೆಚ್ಚು ಮತ್ತು ಪೌಷ್ಟಿಕ ಆಹಾರವೂ, ಉಡಲು ಉತ್ತಮವಾದ ಅರಿವೆಯೂ, ಇರಲು ಸುಖಕರವಾದ ಮನೆಯೂ, ಮಕ್ಕಳಿಗೆ ಹಿತಕರವಾದ ಶಾಲೆಗಳೂ ಇದ್ದರೆ ಆ ದೇಶದ ಜನರ ಜೀವನದ ಮಟ್ಟವು ಉನ್ನತವಾಗಿದೆ ಎಂದು ನಾವು ನಂಬಿದ್ದೇವೆ ಆದರೆ ಇಂಗ್ಲೆಂಡಿನಂಥ ಮುಂಬರಿದ ರಾಷ್ಟ್ರಗಳ ಜನರಲ್ಲಿಯೂ, ಪೌಷ್ಟಿಕ ಆಹಾರವೂ, ರೋಗಕ್ಕೆ ಬಲಿಯಾಗದ ಕನಿಷ್ಠಾವಧಿ ಪೌಷ್ಟಿಕ ಪದಾರ್ಥಗಳೂ, ಅಧಿಕಾಂಶ ಜನತೆಗ ಲಭಿಸುವುದಿಲ್ಲ ಎಂಬುದನ್ನು ಕೇಳಿದರೆ ಆಶ್ಚರ್ಯವಾಗುವುದು ಇದರಿಂದ ನಾವು ಪಾಠ ಕಲಿಯಬೇಕು. ರಾಮರಾಜ್ಯವೇ ಆಗಲೊಲ್ಲದೇಕೆ, ಸರಕುಗಳ ಉತ್ಪನ್ನವಾಗದಿದ್ದರ, ಅಲ್ಲಿಯ ಜನ ದರಿದ್ರರಾಗಿಯೇ ಇರುವರು. ಒಮ್ಮೆಲೇ ಸರಕುಗಳನ್ನು ಉತ್ಪಾದಿಸುವುದು ಸಾಧ್ಯವೆ? ಹತ್ತುಮಣ ಬೆಳವ ಹತ್ತಿಯ ನೆಲದಲ್ಲಿ ಹನ್ನೊಂದು ಮಣ ಬೆಳೆಯಬೇಕಾದರೂ, ಹೆಚ್ಚು ಅವಯವ (ಜನ) ಗಳನ್ನು ಉಪಯೋಗಿಸಬೇಕು, ಹೆಚ್ಚು ಗೊಬ್ಬರ ಹಾಕಬೇಕು, ಟ್ರ್ಯಾಕ್ಟರು ತರಬೇಕು (= ಬಂಡವಾಳ ಬೇಕು). ಕಡೆಗ ಯಾವುದೂ ಇಲ್ಲದೆಯೂ ನೂರುಮಣ ತಯಾರಾಗಲೇ ಬೇಕಾದರೆ ನೆರೆಯುವನ ಹೊಲವನ್ನಾದರೂ ಆಕ್ರಮಿಸಬೇಕು ಟ್ರಾಕ್ಟರು ಉಪಯೋಗಿಸುವುದರಿಂದ ನೂರು ಮಣ ಹತ್ತಿ ಬೆಳೆದೀತು; ಆದರೆ ಉಳುವ ಕೆಲಸವನ್ನು ಮಾತ್ರ ಬಲ್ಲ ಕೆಲಸಗಾರರಿಗೆ ಏನುಗತಿ? ಅವರು ನಿರುದ್ಯೋಗಿಗಳಾದರೆ ಅವರ ಉತ್ಪಾದನಾ ಶಕ್ತಿಯಲ್ಲಿ ದುರ್ವ್ಯಯವಾಗದೆ? ಹಚ್ಚು ಬಟ್ಟೆ ಬೇಕೆಂದರೆ ಸಾಲದು; ಹೆಚ್ಚು ಹತ್ತಿಯೂ ಹೆಚ್ಚು ಗಿರಣಿಗಳೂ ಸೃಷ್ಟಿಯಾಗಬೇಕು. ಅನುಭೋಗದ ಪ್ರಮಾಣವು ಬೆಳೆಯಬೇಕಾದರೆ ಉತ್ಪಾದನೆಯ ಗಾತ್ರ ಬೆಳೆಯಬೇಕು. ಒಂದೊಮ್ಮೆ ಅನುಭೋಗಕ್ಕೆಯೆ ಪ್ರಾಶಸ್ತ್ಯಕೊಟ್ಟು ಮೂಲಸಾಮಗ್ರಿಗಳನ್ನು ಯಂತ್ರೋತ್ಪಾದನೆಯಿಂದ ತಿರುಗಿಸಿ, ಅನುಭೋಗ ಸಾಮಗ್ರಿಗಳ ನೇರವಾದ ಉತ್ಪಾದನೆಗೆ ಹಚ್ಚಿ, ಜೀವನದ ಮಟ್ಟವನ್ನೇರಿಸಿಕೊಳ್ಳಲು ಬರುವುದುಂಟು. ಆದರೆ ಇದು ಬಹುಕಾಲ ನಡೆಯಲಾರದು. ಇದ್ದ ಯಂತ್ರ ಸಲಕರಣೆ, ಹಡಗು, ರೈಲು, ಜೀರ್ಣಿಸುತ್ತಾ ಬಂದಹಾಗೆ, ಅವುಗಳ ಉದ್ಧಾರವೂ ಹೊಸ ಸಾಮಗ್ರಿಗಳ ಉತ್ಪಾದನೆಯೂ, ಆಗದೆ ಹೋದ ಪಕ್ಷಕ್ಕೆ, ಈ ಪ್ರವೃತ್ತಿ ಸರ್ವನಾಶಕ್ಕೆ ಕಾರಣವಾಗಬಹುದು.

ಯಾವ ದೂರದರ್ಶಿ ಸಮಾಜವೂ ಇಂಥ ಮೂರ್ಖತನಕ್ಕೆ ಇಳಿಯದು. ಜೀವನದ ಮಟ್ಟದ ಉನ್ನತಿಗೆ ಒಳದಾರಿಯಿಲ್ಲ. ಉತ್ಪಾದನೆಯ ಒಟ್ಟು ಗಾತ್ರ–ಎರಡು ಬಗೆಯ ಸರಕುಗಳದೂ–ಜತೆ ಜತೆಯಾಗಿಯೇ ಬೆಳೆದು ಬರಬೇಕು. ನಿರ್ದಿಷ್ಟ ಜನಸಂಖ್ಯೆಯುಳ್ಳ ಸಮಾಜದ ಜೀವನದ ಮಟ್ಟವನ್ನು ಉತ್ಪಾದನೆಯ ಗಾತ್ರವೇ ನಿರ್ಣಯಿಸುವುದು.

ನಮ್ಮ ದೇಶದ ಉತ್ಪಾದನೆಯ ಗಾತ್ರಕ್ಕೂ, ಇಂಗ್ಲಾಂಡ್, ಆಸ್ಟ್ರೇಲಿಯಾ, ಅಮೇರಿಕಗಳಂಥ ಆರ್ಥಿಕೋನ್ನತಿಯಲ್ಲಿ ಮುಂಬರಿದ ರಾಷ್ಟ್ರಗಳ ಉತ್ಪಾದನೆಗೂ ಅಜಗಜಾಂತರ ಇರುವುದರಿಂದಲೇ ನಮ್ಮ ಜನರ ಜೀವನದ ಮಟ್ಟವು ಕೆಳಗಿನ ಅಂತಸ್ತಿನಲ್ಲಿಯೂ, ಅವರದು ಮೇಲಿನ ಅಂತಸ್ತಿನಲ್ಲಿಯೂ ಇರಲು ಕಾರಣ.

**ಕೆಲವು ತಪ್ಪೆಣಿಕೆಗಳು:**

ಉತ್ಪಾದನೆಯ ಬಗ್ಗೆ ಜನರಿಗಿರುವ ಕೆಲವು ತಪ್ಪೆಣಿಕೆಗಳನ್ನು ಆರಂಭದಲ್ಲೇ ತಿದ್ದುವುದು ಲೇಸೆಂದು ಕಾಣುವುದು.

೧. ಪರದೇಶದವರ ದಾನಧರ್ಮದ ಮೂಲಕ ಕೆಲವರು ತಮ್ಮ ದೇಶದ ಉತ್ಪಾದನೆಯ ಗಾತ್ರವನ್ನು ಹೆಚ್ಚಿಸಿಕೊಳ್ಳಬಹುದೆಂದು ಭಾವಿಸುವರು. ಇಂತಹ ಅಂತರ ರಾಷ್ಟ್ರೀಯ ದಾನಕ್ಕೆ ಅಂಟಿಕೊಂಡಿರುವ ರಾಜಕೀಯ ಶರ್ತಗಳನ್ನು ಮನ್ನಿಸುವುದು ಸ್ವೀಕರಿಸುವ ರಾಷ್ಟ್ರದ ಆತ್ಮಗೌರವಕ್ಕೆ ಕುಂದು. ಅಂಥಲ್ಲಿ ಯಾವ ಬಗೆಯ ಶರ್ತಗಳಿಲ್ಲದಿದ್ದರೂ, ಅಂತರ ರಾಷ್ಟ್ರೀಯ ದಾನವು ಸದಾ ಕಾಲವೂ ನಮ್ಮ ಉತ್ಪಾದನೆಗೆ ನೆರವಾಗದು. 'ಉದ್ಧರೇದಾತ್ಮನಾತ್ಮಾನಂ'. ನಮ್ಮ ಉತ್ಪಾದನೆಯಿಂದಲೇ ನಮ್ಮ ಬೆಳವಣಿಗೆಯಾಗಬೇಕು.

೨. ಬ್ಯಾಂಕಿಂಗ್ ಪದ್ಧತಿಯನ್ನು ಪರಿವರ್ತಿಸಿ, ತಂತ್ರಜ್ಞರ ನೈಪುಣ್ಯದ ಲಾಭವನ್ನು ಪಡೆದು, ಆರ್ಥಿಕ ಯಂತ್ರವನ್ನು ಸುಸೂತ್ರವಾಗಿ ನಡೆಯಿಸಿ ಅಲ್ಪಕಾಲದಲ್ಲೇ ಪ್ರಪಂಚವನ್ನು ನಂದನವನವನ್ನಾಗಿ ಮಾಡುವೆವೆಂದು ಭಾವಿಸುವ ಕೆಲವು ಉತ್ಸಾಹಿಗಳಿದ್ದಾರೆ. ಒಬ್ಬನಿಗೆ ವರ್ಷಕ್ಕೆ ೧೩೦ ರೂಪಾಯಿ ವರಮಾನ ಬರುವಲ್ಲಿಗೆ ಮೂರು ಪಾಲಷ್ಟು ಅಂದರೆ ೩೯೦ ರೂಪಾಯಿ

ಬರುವಂತೆ ಮಾಡಬೇಕಾದ ಪಕ್ಷಕ್ಕೆ ದೇಶದ ಉತ್ಪಾದನೆಯು ನಾಲ್ಕರಷ್ಟು, ಐದರಷ್ಟು ಅಧಿಕವಾಗಬೇಕಾಗುವುದು. ಹೀಗೆ ಲೆಕ್ಕ ಹಾಕುವುದು ಸುಲಭವಾದರೂ ಕೆಲಸ ಬಹಳ ಕಠಿನವಾದುದು. ಹತ್ತಿಯ ಗಿರಣಿಯ ಉತ್ಪಾದನೆ ಹೆಚ್ಚಿಸೋಣ ಎಂದು ನಿರ್ಧರಿಸಿದರೆ ಹೆಚ್ಚು ಕಾಮಗಾರರು ಬೇಕಾದಾರು. ಅವರನ್ನು ಎಲ್ಲಿಂದ ಎಳೆದು ತರೋಣ? ಬೇರೆ ಉದ್ಯಮಗಳಿಂದ ಆಕರ್ಷಿಸಬೇಕು ತಾನೆ? ಅಂದರೆ ಆ ಉದ್ಯಮಗಳ ಶಕ್ತಿ ಕುಗ್ಗುವುದಿಲ್ಲವೆ? ಇದರಿಂದ ದೇಶದ ಒಟ್ಟು ಉತ್ಪಾದನೆಯ' ಗಾತ್ರ ಎಲ್ಲಿ ಬೆಳೆಯಿತು? ಈ ರೀತಿಯಾಗಿ ಕಲ್ಪಿಸುವವರ ದೃಷ್ಟಿಯಲ್ಲಿರುವುದು ಔದ್ಯೋಗೀಕರಣದ ಗಾಯತ್ರಿಯಾಗಿರುವ–'ಬೃಹತ್ ಉತ್ಪಾದನೆ'ಯ ಕಲ್ಪನೆ. ಬೃಹತ್ ಉತ್ಪಾದನೆಯೇ ಇರಲಿ, ಇನ್ನಾವುದೇ ಐಂದ್ರಜಾಲವಿರಲಿ, ದೇಶದ ಉತ್ಪಾದನೆಯು ವರ್ಷಕ್ಕೆ ೪% ಯಾ ೫% ಕ್ಕಿಂತ ಹೆಚ್ಚು ಪ್ರಮಾಣದಲ್ಲಿ ಬೆಳೆಯುವುದು ಅಸಾಧ್ಯವಾದ ಮಾತು

(೩) ಇನ್ನು ಕೆಲವು 'ಬಿಸಿ ರಕುತದ ಧಮನಿಯವರಿ'ಗೆ ಬಿರ್ಲಾ, ಡಾಲ್ಮಿಯಾರವರ ರೋಮಾಂಚಕ ವಿಹಾರ ವ್ಯವಹಾರಗಳನ್ನೂ, ಅವರ ವಹಿವಾಟಿನ ಬೃಹದಾಕೃತಿಯನ್ನೂ ನೋಡಿ, ಸಮಾನತ್ವದ ಭೂತಸಂಚಾರವಾಗುವುದುಂಟು ಭಾರತದಂಥ ದರಿದ್ರ ದೇಶದಲ್ಲಿ ಇಂಥ ಲಕ್ಷ್ಮೀಪುತ್ರರು ಕೇವಲ ಕೆಲವೇ ಜನ ಇರುವುದರಿಂದಲೂ, ಅವರ ಹತ್ತಿರವಿರುವ ಬಂಡವಾಳವು ದೇಶದ ಸಮಗ್ರ ಉತ್ಪಾದನೆಯ ಬರಿಯ ಅಲ್ಪಾಂಶವಾದುದರಿಂದಲೂ, ಅವರ ಐಶ್ವರ್ಯವನ್ನೆಲ್ಲಾ ಬಡಬಗ್ಗರಿಗೆ ಹಂಚಿ, ಸುಭಿಕ್ಷೆಯನ್ನು ಸ್ಥಾಪಿಸುವ 'ಸರ್ವೇ ಜನಾಃ ಸುಖಿನೋ ಭವಂತು' ಹಂಬಲು ಅರ್ಥವಿಲ್ಲದ ಅಣಕವೇ ಸರಿ.

(೪) ಸೇವಕರು, ಜವಾನರು, ನಟ ಸಾರ್ವಭೌಮರು, ಸಂಗೀತಗಾರರು ಮುಂತಾದವರ ಕೆಲಸದಿಂದ ಕಣ್ಣಿಗೆ ಕಾಣುವ ಯಾವ ಪದಾರ್ಥವೂ ಸೃಷ್ಟಿಯಾಗದೆ ಇರುವುದರಿಂದ ಇವರ ಸೇವೆ 'ನಿಷ್ಫಲ' ಎಂಬ ಒಂದು ವಾದವುಂಟು. ವ್ಯಕ್ತಿಯ ದೃಷ್ಟಿಯಲ್ಲಿ ಅವನಿಗೆ ವರಮಾನ ಸಿಗುವ ಯಾವ ವೃತ್ತಿಯೂ ಫಲದಾಯಕವಾದುದು ಒಂದು ಹಾಡು ಹೇಳಿ ನಾಲ್ಕು ರೂಪಾಯಿ ಸಂಪಾದಿಸುವ ಸಂಗೀತಗಾರನು ಸೋಮಾರಿಯಲ್ಲ; ಅವನು

ಮಾಡುವ ಕೆಲಸ ನಿಷ್ಫಲವಲ್ಲ; ಯಾರದೋ ಬೇಡಿಕೆಯನ್ನು ಅವನು ಪೂರೈಸಿದುದರಿಂದಲೇ ಕೈಗೆ ನಾಲ್ಕು ರೂಪಾಯಿ ದಕ್ಕಿಸಿಕೊಂಡನು ಎಂದು ನಾವು ತಿಳಿಯಬೇಕು. ಬೇಡಿಕೆ ಯೋಗ್ಯವೇ, ಈತನು ಪೂರೈಸಿದುದು ನ್ಯಾಯುವೇ? ಎಂದು ಕೇಳುವ ನ್ಯಾಯಾಧೀಶತನ ನಮಗೆ ಅಗತ್ಯವಿಲ್ಲ ಬಂಡವಾಳಗಾರನು ಈ ರೀತಿಯ ಸಮಾಜದಲ್ಲಿ 'ನಿಷ್ಫಲ' ಎಂದು ಭಾವಿಸಿದರೂ, ಅತ್ಯಾವಶ್ಯಕವಾದ ಕೆಲಸಗಳನ್ನು ನಿರ್ವಹಿಸುವ ಮಧ್ಯಸ್ಥರು ಅತಿಯಾಗಿದ್ದಾರೆ. ಅವರನ್ನು ಉಚ್ಚಾಟನೆಮಾಡೋಣ ಎಂದು ಪ್ರತಿಜ್ಞಾಪೂರ್ವಕವಾಗಿಯೂ ಯೋಜನಾತ್ಮಕವಾಗಿಯೂ ಕಾರ್ಯಪ್ರವೃತ್ತವಾದ ಸೋವಿಯಟ್ ಸರಕಾರವು ಕೂಡ, ಕಟ್ಟಕಡೆಗೆ 'ಹೊಸ ಆರ್ಥಿಕಧೋರಣೆ' ಎಂದು ನಾಮಕರಣ ಮಾಡಿ ಹಳಬರಾದ ಮಧ್ಯಸ್ಥರಿಗೆಯೆ ಶರಣುಹೋದ ಒಂದು ನಿದರ್ಶನದಿಂದ ಮಧ್ಯಸ್ಥರು ಉತ್ಪಾದನೆಗೆ ಬೇಕಾದವರೆಂಬುದು ಸಿದ್ಧವಾಯಿತು.

(೫) ಮಾನವ ಜನಾಂಗದ ಅಳಿವು-ಉಳಿವುಗಳಿಗೆ ಕಾರಣಭೂತವಾದ ಒಂದು ಪ್ರಶ್ನೆಯನ್ನು ಇಲ್ಲಿ ಪ್ರಸ್ತಾವಿಸಬಹುದು. ಉತ್ಪಾದನೆಯು ಅನುಭೋಗಕ್ಕಾಗಿ ಎಂದು ಎಲ್ಲ ಅರ್ಥಶಾಸ್ತ್ರಿಗಳೂ ಮುಕ್ತ ಕಂಠದಿಂದ ಸಾರಿರುವರಾದರೂ ಕೆಲವೊಂದು ಸಲ ನಮ್ಮ ದೇಶದ ಉತ್ಪಾದನೆಯು ನೆರೆ ಹೊರೆಯ ರಾಷ್ಟ್ರಗಳ ಉತ್ಪಾದನಾ ಶಕ್ತಿಯನ್ನು ಕುಗ್ಗಿಸುವುದಕ್ಕೂ ಅವರ ಔದ್ಯಮಿಕ ಕೇಂದ್ರಗಳನ್ನು ಭಸ್ಮಗೊಳಿಸುವುದಕ್ಕೂ ಪ್ರವೃತ್ತಿ ಮಾಡುವುದೇಕೆ? ಮನುಷ್ಯರು ಬಿಲ್ಲು ಬಾಣಗಳಿಂದ ಹೊಡೆದಾಡಿಕೊಳ್ಳುತ್ತಿದ್ದಾಗ ದೇಶದ ಆರ್ಥಿಕ ವ್ಯವಸ್ಥೆಗೆ ವಿಶೇಷ ಹಾನಿ ಸಂಭವಿಸುತ್ತಿರಲಿಲ್ಲ. ದ್ವಿತೀಯ ಮಹಾಯುದ್ಧದಲ್ಲಿಯೇ ಆದರೂ ಸಿಡಿಮದ್ದಿನ ಧಾಳಿಯ ಹಾನಿಯನ್ನು ನಾಲ್ಕೈದು ವರುಷಗಳಲ್ಲಿ ತುಂಬಿಕೊಂಡು ಆರ್ಥಿಕ ಪುನರ್-ರಚನೆ ನಡೆಯಲು ಸಾಧ್ಯವಾಯಿತು. ಆದರೆ ನಾಲ್ಕಾರು ಡಜನು ಆಟಂ ಬಾಂಬು ಉಪಯೋಗಿಸಿ ಮಹಾ ಮಹಾ ಔದ್ಯಮಿಕ ರಾಷ್ಟ್ರಗಳನ್ನಾದರೂ 'ಜಂಗ್ಲೀ' ರಾಷ್ಟ್ರಗಳನ್ನಾಗಿ ಪರಿವರ್ತಿಸುವುದು ಮುಂದಿನ ಮಹಾ ಯುದ್ಧದಲ್ಲಿ ಅಶಕ್ಯವೆಂದು ತೋರುವುದಿಲ್ಲ. ಇಂಥ ನಿಷ್ಠುರ ಪ್ರಸಂಗವನ್ನು ಹೇಗೆ ನಿವಾರಿಸೋಣ? ಎಂಬ ಪ್ರಶ್ನೆ ಅರ್ಥಶಾಸ್ತ್ರದ ಶಕ್ತಿಗೆ ಮೀರಿದುದು. ಆರ್ಥಿಕ ವ್ಯವಸ್ಥೆಯಲ್ಲಿ–ಮು

ಖ್ಯವಾಗಿ ಅದರ ಜೀವಾಳವಾದ ಉತ್ಪಾದನೆಯ ಕ್ಷೇತ್ರದಲ್ಲಿ–'ಸುಧಾರಿತ' ಯುದ್ಧಸನ್ನಾಹಗಳು ಮಾಡಬಲ್ಲ ಅನರ್ಥಗಳನ್ನು ಎಣಿಸಿಕೊಂಡರೆ ಎದೆ ನಡುಗುವುದು.

**ಉತ್ಪಾದನೆ ಮತ್ತು ಮೌಲ್ಯ:**

ಸರಕು ಸೇವೆಗಳ ಪೂರೈಕೆಯನ್ನು ಚರ್ಚಿಸುವುದು ಉತ್ಪಾದನ ಮೀಮಾಂಸೆಯ ಕರ್ತವ್ಯ ಹೊಸ ಸರಕು ಸೇವೆಗಳನ್ನು ಸೃಷ್ಟಿಸುವುದೂ, ಹಳೆಯುವನ್ನು ತೇಪೆಹಾಕಿ ಕಾರ್ಯ ಯೋಗ್ಯವಾಗಿ ಮಾಡುವುದೂ, ಹಳೆಯವು ನಿರುಪಯೋಗವೆಂದು ಖಾತ್ರಿಯಾದರೆ ಅವುಗಳ ಸ್ಥಾನದಲ್ಲಿ ಹೊಸ ಸರಕು ಸೇವೆಗಳನ್ನು ಕೆಲಸಕ್ಕೆ ತಂದುಕೊಳ್ಳುವುದೂ, ಉತ್ಪಾದನೆಯ ಹಲವು ಮುಖಗಳು ಇಷ್ಟರಿಂದ ವಿನಿಮಯ ಮತ್ತು ಮೌಲ್ಯ ಸಂದರ್ಭಗಳಲ್ಲಿ ಉತ್ಪಾದನೆಯೂ, ಉತ್ಪಾದನೆಯಲ್ಲಿ ವಿನಿಮಯ ಮೌಲ್ಯಗಳೂ ಸೇರಿಕೊಂಡಿರುವುದನ್ನು ಕಾಣಬಹುದು ವಿನಿಮಯದ ಸಮಸ್ಯೆ ಇಲ್ಲದೆಯೂ ಉತ್ಪಾದನೆಯ ಸಮಸ್ಯೆ ಇರಲು ಸಾಧ್ಯವುಂಟು. ಉದಾ: ಮಂಗಳಗ್ರಹಕ್ಕೆ ಹೋದ ಏಕಾಕಿ ಮನುಷ್ಯನು ತನ್ನ ಹತ್ತಿರ ಇರುವ ನಾಲ್ಕು ಬಿಸ್ಕೀಟುಗಳನ್ನು ಈಗಲೇ ಮುಕ್ಕಿಬಿಡಲೆ, ಸ್ವಲ್ಪ ತಡೆದು ತಿನ್ನಲೇ ಎಂದು ವಿಮರ್ಶಿಸುವುದು ಒಂದು ಬಗೆಯ ಉತ್ಪಾದನೆಯ ಸಮಸ್ಯೆ. ಉತ್ಪಾದನೆಗೂ ಮೌಲ್ಯಕ್ಕೂ ನಿಕಟ ಸಂಬಂಧವುಂಟು.

**ಉತ್ಪಾದನೆಯ ಗಾತ್ರವನ್ನು ಅಳೆಯುವುದು:**

''ಸಮಯದ ಏಕಾಂಶದಲ್ಲಿ ಸಮಾಜದಲ್ಲಿ ತಯಾರಾಗುವ ಸರಕು ಸೇವೆಗಳ ಮೊತ್ತವು ಉತ್ಪಾದನೆಯ ಗಾತ್ರ ''ವೆಂದು ಬೆನಹ್ಯಾಮ್ ಹೇಳಿರುವನು ''ಒಂದು ದೇಶದ ಮೂಲಸಂಪತ್ತಿನ ಮೇಲೆ ಪರಿಶ್ರಮವೂ ಬಂಡವಾಳವೂ ಸಕ್ರಿಯವಾಗಿ ವರ್ತಿಸಿ ವರ್ಷಒಂದಕ್ಕೆ ಭೌತಿಕವೂ, ನಭೌತಿಕವೂ ಆದ ಸರಕುಸೇವೆಗಳ ನಿಶ್ಚಿತವಾದ ಮೊತ್ತವನ್ನು ಸತ್ಯವೂ ನಿವ್ವಳವೂ ಆದ ರಾಷ್ಟ್ರೀಯ ವರಮಾನ''ವೆಂದು ಮಾರ್ಶಲ್ ಕರೆದಿರುವನು. ಅರ್ವಾಚೀನ ಪ್ರಪಂಚದಲ್ಲಿ ಹಲವು ಬಗೆಯ ಸರಕುಸೇವೆಗಳನ್ನು ಅಳೆಯುವ ಸಾಮಾನ್ಯ ಮಾನದಂಡವು ಹಣವೆಂಬುದು ನಿಜವಾದರೂ ಆರ್ಥಿಕ ವ್ಯವಸ್ಥೆಯ ಅಡಿ

ಗಲ್ಲು ಉತ್ಪಾದನೆಯೇ ಎಂಬುದರಲ್ಲಿ ಸಂದೇಹವಿಲ್ಲ. ಜನರ ಜೀವನದ ಮಟ್ಟವು ಹೇಗೆ ಉತ್ಪಾದನೆಯ ಗಾತ್ರವನ್ನು ಹೊಂದಿರುವುದೆಂಬುದನ್ನು ಮೊದಲೇ ವಿವರಿಸಿರುವೆವು. ಭಾರತದ ಪ್ರತಿಯೊಬ್ಬ ಪ್ರಜೆಗೂ ವರ್ಷಕ್ಕೆ (೧೯೩೮ರ ಧಾರಣೆಯಲ್ಲಿ) ೧೩೦ ರುಪಾಯಿ ಕೊಡಬೇಕಾದರೆ ಉತ್ಪಾದನೆಯ ಗಾತ್ರವನ್ನು ಇನ್ನು ಹದಿನೈದು ವರ್ಷಗಳಲ್ಲಿ ಮೂರರಷ್ಟು ಹೆಚ್ಚಿಸಬೇಕಂತೆ. ಇಂಗ್ಲೆಂಡಿನ ಎಲ್ಲಾ ಮೂಲಸಂಪತ್ತನ್ನು ಉಪಯೋಗಿಸಿಕೊಂಡರೂ ಉತ್ಪಾದನೆಯ ಗಾತ್ರವು ವರ್ಷಕ್ಕೆ ೪% ಅಥವಾ ೫% ಮಾತ್ರವೇ ಬೆಳೆದೀತೆಂದು ಕೋಲಿನ್ ಕ್ಲಾರ್ಕ ಸೂಚಿಸಿರುವನು

(೧) ರಾಷ್ಟ್ರೀಯ ವರಮಾನವು ಇಂಥದೇ ಎಂದು ನಿಶ್ಚಯವಾಗಿ ಹೇಳಬೇಕಾದರೆ ಯಾವ ಕಾಲಾವಧಿ (ವರ್ಷ, ದಶಕ, ಶತಮಾನ ಮೊದಲಾದುವು) ಎಂಬುದು ತಿಳಿಯತಕ್ಕುದು

(೨) ರಾಷ್ಟ್ರೀಯ ವರಮಾನದಲ್ಲಿ ಉತ್ಪಾದಕರ ಸರಕು ಮಾತ್ರವಲ್ಲದೆ ಅನುಭೋಗದ ಸರಕುಗಳೂ ಸೇರತಕ್ಕುದು.

(೩) ರಾಷ್ಟ್ರೀಯ ವರಮಾನದ ಪರಿಭಾಷೆಯನ್ನು ಸೂಚಿಸುವಾಗಲೂ, ಅದನ್ನಳೆಯುವಾಗಲೂ ದುಬಾರಿ ಲೆಕ್ಕವು ನಡೆಯದಹಾಗೆ ಎಚ್ಚರಿಕೆಯಿಂದಿರಬೇಕು. ಹಿಟ್ಟಿನ ಬೆಲೆಯನ್ನು ಸೇರಿಸಿಕೊಂಡಮೇಲೆ ಮರಳಿ ಗೋಧಿಕಾಳು, ಬೀಸುವ ವೆಚ್ಚ, ಸಾಗುವಾಡಿನ ವೆಚ್ಚಗಳನ್ನು ಅದರಲ್ಲಿ ಸೇರಿಸಲಾಗದು.

(೪) ರಾಷ್ಟ್ರೀಯ ವರಮಾನದ ಸ್ವಲ್ಪಾಂಶವನ್ನು ಇಳಿಮಾನದ ವೆಚ್ಚಕ್ಕೆ (ಡಿಪ್ರಿಶಿಯೇಶನ್ನಿಗೆ) ಮೀಸಲಾಗಿರಿಸುವುದು ನಮ್ಮ ಕರ್ತವ್ಯ. ನಮ್ಮ ಪೂರ್ವಿಕರು ಮಾಡಿಟ್ಟ ಅಸಲು ಸರಕುಗಳನ್ನು ನಾವು ಈ ವರ್ಷ ಉಪಯೋಗಿಸಿಕೊಂಡು ಮುಂದಿನ ವರ್ಷದವರಿಗೆ ಕೈ ಎತ್ತಿ ಕೊಡುವಾಗ ಅಸಲು ಸರಕುಗಳಲ್ಲಿ ಉಂಟಾಗುವ ಸಾಮಾನ್ಯ ನಷ್ಟಕ್ಕೆ ಇಳಿಮಾನವೆಂಬ ರೂಢಿಯ ಹೆಸರಿದೆ. ಅಸಲು ಸರಕನ್ನು ಇದ್ದಂತಿರಿಸುವುದು ನಮ್ಮ ಕರ್ತವ್ಯವಾಗಿದೆ. ಆದುದರಿಂದ ಈ ವರ್ಷದ ರಾಷ್ಟ್ರೀಯ ವರಮಾನದಲ್ಲಿ ಸ್ವಲ್ಪಾಂಶವು ಇಳಿಮಾನದ ವೆಚ್ಚಕ್ಕೂ ಮತ್ತೆ ಸ್ವಲ್ಪಾಂಶವು ಹೊಸ ಅಸಲು (ಬಂಡವಾಳ) ಸರಕುಗಳ ಉತ್ಪಾದನೆಗೂ ವಿನಿಯೋಗಿಸಲ್ಪಡಬೇಕು.

## ರಾಷ್ಟ್ರೀಯ ವರವಮಾನವನ್ನು ಅಳೆಯುವುದು ಹೇಗೆ?

ರಾಷ್ಟ್ರೀಯ ವರಮಾನವೆಂಬ ಶಬ್ದವು ಬಹಳ ಚಲಾವಣೆಯಲ್ಲಿದ್ದರೂ ಅದರ ಬಗ್ಗೆ ತಿಳಿವಳಿಕೆ ಇರುವವರು ಕಡಮೆ. ಅದನ್ನು ಅಳೆಯುವುದು ಸುಲಭವಲ್ಲ ಯಾವ ಸರಕು ಸೇರಿಸೋಣ, ಯಾವುದನ್ನು ಬಿಡೋಣ? ಯಾರ ಬಳಕೆಯ ಸರಕಾದೀತು?-ಶ್ರೀಮಂತರದೋ ಬಡವರದೋ ಎಂಬ ಸಂದಿಗ್ಧಗಳು ಇಲ್ಲಿ ಏಳುವುವು. ಎರಡು ರಾಷ್ಟ್ರಗಳ ವರಮಾನವನ್ನು ಅಥವಾ ಎರಡು ಕಾಲಗಳಲ್ಲಿ ಒಂದು ರಾಷ್ಟ್ರದ ವರಮಾನವನ್ನು ಹೋಲಿಸುವಾಗ ನಾವು ಸಂಕಟದಲ್ಲಿ ಬೀಳುವೆವು ನಿರಕಿನಿಂದ ಹೇಳುವುದಾದರೆ ರಾಷ್ಟ್ರೀಯ ವರಮಾನದ ಪರಿಭಾಷೆಯು ಬಹಳ ವಿಸ್ತೃತವಾಗುವುದು: ಎರಡು ಕಾಲಾವಧಿಗಳನ್ನು ಹೋಲಿಸುವಾಗ ಮೊತ್ತಮೊದಲು ಜನರ ಅಭಿರುಚಿಯೂ ವರಮಾನದ ವಿತರಣೆಯ ಪದ್ಧತಿಯೂ ಅಚಂಚಲವೆಂದು ಪರಿಗಣಿಸಬೇಕು. ಇವುಗಳ ಪೈಕಿ ಎರಡನೆಯ ಕಾಲಾವಧಿಯಲ್ಲಿ ತಯಾರಿಸಲ್ಪಡದೆ ಇರುವ ವಸ್ತುಗಳಿಗಿಂತ ವಾಸ್ತವವಾಗಿ ಒಂದನೆಯ ಕಾಲಾವಧಿಯಲ್ಲಿ ತಯಾರಾದ ಸರಕುಗಳಿಗೆ ಅನುಭೋಗಿಗಳು ಹೆಚ್ಚು ಧಾರಣೆಯನ್ನು ತೆರಲು ಸಿದ್ಧರಾಗಿರುವ ಪಕ್ಷಕ್ಕೆ, ಎರಡನೆಯ ಕಾಲಾವಧಿಯ ವರಮಾನವು ಒಂದನೆಯ ಕಾಲಾವಧಿಯ ರಾಷ್ಟ್ರೀಯ ವರಮಾನಕ್ಕಿಂತ ಹೆಚ್ಚಾಗಿದೆ ಎಂದು ನಿರ್ಧರಿಸಬಹುದು.

ಸರಿಯೇ. ಆದರೆ ವಾಸ್ತವಿಕ ವರಮಾನದಲ್ಲಿ ಉಂಟಾಗುವ ಬದಲಾವಣೆಗಳನ್ನು ಅಳೆಯುವುದು ಹೇಗೆ?

(೧) ಸಮಾಜದ ಎಲ್ಲ ಸರಕುಸೇವೆಗಳ ಸಮಗ್ರ ಮೌಲ್ಯವನ್ನು ಹಣದ ರೂಪದಲ್ಲಿ ಎಣಿಸಿದರೆ ತಪ್ಪಾಗುವುದು. ಡಚ್ಚರು ಇಂಡೋನೇಶಿಯದವರಿಗಿಂತ ದರಿದ್ರರಾದಾರು! ಹೆಚ್ಚು ಜನಸಾಂದ್ರತೆಯುಳ್ಳ ರಾಷ್ಟ್ರವು ತಲಾವೊಂದರ ವರಮಾನವು ಅಧಿಕವಾಗಿರುವ ರಾಷ್ಟ್ರಕ್ಕಿಂತಲೂ ಹೆಚ್ಚಿನ ಸಿರಿವಂತಿಗೆಯನ್ನು ಮೆರೆಯಿಸಬಹುದು,

(೨) ತಲಾ ಹಣ-ವರಮಾನವನ್ನೇ ಅಳತೆಯಾಗಿ ಸ್ವೀಕರಿಸೋಣ ಎಂದರೆ ಹಣದ ಉಬ್ಬರದ ಸಮಯ ನಿಷ್ಕಾರಣವಾಗಿ ನಾಲ್ಕಾರು ಪಟ್ಟು ಪುಟಿದ ವರಮಾನವನ್ನು ವಾಸ್ತವಿಕ ವರಮಾನವೆಂದು ಯಾವ ಬಾಯಿ

ಯಿಂದ ಕರೆಯೋಣ? ನಾಲ್ಕು ಪಾಲಷ್ಟು ಜಾಸ್ತಿ ವರಮಾನವು ಬಂದರೂ ಜೀವನದ ಮಟ್ಟವು ಎರಡರಷ್ಟೂ ಏರದ ಹಣದ ಉಬ್ಬರದ ಕಾಲಗಳಿಲ್ಲವೆ?

(೩) ಉಪಯುಕ್ತತೆಯು ಅಳೆಯಲು ಬಾರದ ಗುಣವಾದುದರಿಂದ ವರಮಾನವನ್ನು ಉಪಯುಕ್ತತೆಯ ಮೊತ್ತವೆಂದು ಕರೆಯುವಂತಿಲ್ಲ

(೪) ಆದುದರಿಂದ ತಲಾವೊಂದರ ವಾಸ್ತವಿಕ ವರಮಾನ–ಅಕ್ಕಿ, ಕಾಫಿಹುಡಿ, ಹಾಲು, ಎಣ್ಣೆ. ಬೆಣ್ಣೆ, ಅರಿವೆ, ಕಟ್ಟಿಗೆ ಇತ್ಯಾದಿಗಳ ಪರಿಮಾಣ ಎಷ್ಟು ಎಂದು ಕಂಡುಹಿಡಿಯುವುದೊಂದೇ ನಮಗೆ ಉಳಿದಿರುವ ದಾರಿ.

ಅಳೆಯುವುದಕ್ಕೆ ಹಣಕ್ಕಿಂತ ಉತ್ತಮವಾದ ಬೇರೆ ಮಾನವು ಖಂಡಿತ ವಾಗಿಯೂ ಇಲ್ಲ ಸೂಚೀಸಂಖ್ಯೆಯ ತಂತ್ರದಿಂದ ವಾಸ್ತವಿಕ ವರಮಾನ ವನ್ನು ನಿರ್ಣಯಿಸುವುದು ಅಧುನಿಕರ ಕ್ರಮ ಜನಸಂಖ್ಯೆಯ ರಚನೆ ಯಲ್ಲಿಯೂ (ಒಮ್ಮೆ ಹಲ್ಲುದುರಿದ ಮುದುಕರ ಹೆಚ್ಚಳ, ಇನ್ನೊಮ್ಮೆ ಹಲ್ಲು ಬಾರದ ಮಕ್ಕಳ ಹೆಚ್ಚಳ) ಅವರ ಅಭಿರುಚಿಗಳಲ್ಲಿಯೂ ಸಂಪತ್ತಿನ ವಿತರಣೆ ಯಲ್ಲಿಯೂ ಸರಕುಗಳ ಉತ್ಪಾದನೆಯಲ್ಲಿಯೂ (ಪೆನಿಸಿಲಿನ್ ಇತ್ತೀಚೆಗೆ ಬಂದ ಜನಪ್ರಿಯ ಸರಕು, ಹತ್ತು ವರ್ಷ ಹಿಂದೆ ಅದು ಹುಟ್ಟಿರಲಿಲ್ಲ.) ಬರುವ ವ್ಯತ್ಯಾಸಗಳ ದೆಸೆಯಿಂದಾಗಿ ಸೂಚೀಸಂಖ್ಯೆಯ ಕ್ರಮವನ್ನು ಪೂರ್ಣ ನಿರ್ದುಷ್ಟವಾದುದೆಂದು ನಂಬಲಾಗುವುದಿಲ್ಲ ನಿಜ. ಆದರೂ ಹತ್ತಿರದ ಹತ್ತಿರದ ಎರಡು ವರ್ಷಗಳನ್ನು ಆರಿಸಿಕೊಂಡು ಅನುಭೋಗಿ ಸರಕುಗಳ ಮೇಲಿನ ವೆಚ್ಚವನ್ನೂ ಸೇರಿಸಿಕೊಂಡರೆ ಇದ್ದ ಮಟ್ಟಿಗೆ ಸೂಚೀ ಸಂಖ್ಯಾ ತಂತ್ರದಷ್ಟು ಉತ್ತಮವಾದುದು ಬೇರಿಲ್ಲ ಎಂದು ಒಪ್ಪಬೇಕಾ ಗುವುದು.

**ಉತ್ಪಾದನೆಯ ಅವಯವಗಳು:**

ಉತ್ಪಾದನೆಯ ಗಾತ್ರದ ಮೇಲೆ ಅನೇಕ ಶಕ್ತಿಗಳು ಪ್ರಭಾವ ಬೀರು ವುವು. (೧) ಸಂಸ್ಥಾ ಶಕ್ತಿಗಳು ನಮ್ಮ ಸಾಮಾಜಿಕ ಸಂಸ್ಥೆಗಳೂ, ನ್ಯಾಯ ತೀರ್ಮಾನ ಮಾಡುವ ಸಂಸ್ಥೆಗಳೂ ಉತ್ಪಾದನೆಯ ಸ್ವಭಾವವನ್ನೂ, ಗಾತ್ರವನ್ನೂ ರೂಪಿಸುವುವು. ಪ್ರಪಂಚದಲ್ಲಿ ಈಗಿರುವ ಸಮಾಜಗಳಲ್ಲಿ ಪ್ರಾಯಃ ಖಾಸಗಿ ಒಡೆತನ; ಪಿತ್ರರ್ಜಿತ ಯಾ ಉತ್ತರಾಧಿಕಾರದ

ಕಾನೂನು, ಲಾಭದ ನಿರೀಕ್ಷೆ ಮತ್ತು ಧಾರಣೆಯ ಪದ್ಧತಿ ಮುಂತಾದ ಸಂಘಟಿತ ಶಕ್ತಿಗಳ ನಿಯಂತ್ರಣಕ್ಕೆ ಒಳಗಾಗಿಯೇ ಉತ್ಪಾದನೆಯು ನಡೆಯಬೇಕು. ಇವುಗಳನ್ನು ಮನುಷ್ಯನು ಕಾಲಕಾಲಕ್ಕೆ ಬದಲಾಯಿಸಿಕೊಳ್ಳಲು ಸಾಧ್ಯವುಂಟು (೨) ಹಾಗೆ ಮನುಷ್ಯನ ಸ್ವಾತಂತ್ರ್ಯದಲ್ಲಿ ಇರದ ನೈಸರ್ಗಿಕ ಸನ್ನಿವೇಶಗಳು: ಭೂಕಂಪ, ನೆರೆಹಾವಳಿ, ಮಿಡಿತೆದಾಳಿ ಮುಂತಾದುವು. (೩) ಹೊಸ ಹೊಸ ಶೋಧನೆಗಳಿಂದಲೂ, ತಾಂತ್ರಿಕ ಜ್ಞಾನದ ವಿಕಸನದಿಂದಲೂ ಉತ್ಪಾದನೆಯ ಕ್ರಮವೂ, ಗಾತ್ರವೂ, ಬದಲಾವಣೆಹೊಂದುವುವು. ಉಗಿಶಕ್ತಿಯನ್ನು ಬಿಟ್ಟು ವಿದ್ಯುಚ್ಛಕ್ತಿಯ ಶೋಧವಾಗಿ ಉತ್ಪಾದನೆಯು ಅಖಂಡವಾಗಿ ಏರಿದುದನ್ನು ನಾವು ನೋಡಿದ್ದೇವೆ, ಅಂತೆಯೇ ವಿನಾಶಕ ಶಕ್ತಿಯಾದ, ಭಯೋತ್ಪಾದಕವಾದ, ಅಣುಶಕ್ತಿಯಿಂದ ಹಡಗು ವಿಮಾನ, ರೈಲು ಯಂತ್ರಗಳನ್ನು ನಡೆಸಲು ಶಕ್ಯವಾದರ ಉತ್ಪಾಪನೆಯ ವೇಗವು ಅದೆಷ್ಟು ಅಧಿಕವಾಗಲಾರದು? (೪) ಆದರೆ ನಮ್ಮ ಉತ್ಪಾದನೆಯ ನಿತ್ಯ ಸಮಸ್ಯೆಗಳಲ್ಲಿ ತಲೆ ಹಾಕುವ ಶಕ್ತಿಗಳು ಎಲ್ಲವೂ ಈ ರೀತಿ ನಮ್ಮ ಕೈಮೀರಿ ನಿಂತುವಲ್ಲ. ನಮ್ಮ ಅಧೀನದಲ್ಲಿರುವ ಶಕ್ತಿ ವಿಶೇಷಗಳನ್ನು 'ಉತ್ಪಾದನೆಯ ಅವಯುವಗಳು' ಎಂದು ಕರೆಯುವರು.



ಬಹಳ ಹಿಂದಿನ ಕಾಲದಲ್ಲಿ ಉತ್ಪಾದನೆಯು ಸರಳವಾಗಿತ್ತು. ಆಗ ಭೂಮಿ ಮತ್ತು ಪರಿಶ್ರಮ—ಎರಡೇ ಉತ್ಪಾದನೆಯ ಅವಯವಗಳಾಗಿದ್ದುವು. ಉತ್ಪಾದನೆಯ ಮೊದಲ ಹೆಜ್ಜೆಗೂ (ಉದಾ. ಗೋಧಿಯ ನೆಲವನ್ನು ಉಳುವುದು) ಕೊನೆಯ ಹೆಜ್ಜೆಗೂ (ಗೋಧಿ ಕೊಯ್ಯುವುದು) ನಡುವೆ ಹೆಚ್ಚು ಸಮಯ ಕಳೆಯುತ್ತಿದ್ದಿಲ್ಲ ಮನುಷ್ಯ ಸಮಾಜವು ಮುಂದುವರಿದಂತೆ ಮನುಷ್ಯನ ಬೇಡಿಕೆಗಳು ಅಧಿಕವಾದುವು; ಅದಕ್ಕನುಗುಣವಾಗಿ ಉತ್ಪಾದನೆಯ ಕ್ರಮಗಳೂ ವ್ಯತ್ಯಾಸವಾದುವು. ಗೊಬ್ಬರ ತಯಾರಿಸೋಣ ಎಂದು ನಿಶ್ಚಯಿಸಿದ ನಾಲ್ಕಾರು ತಿಂಗಳಲ್ಲಿ ಸಿಂದ್ರಿಯ ಗೊಬ್ಬರವು ತಯಾರಾಗುವುದಿಲ್ಲ. ಯಂತ್ರಗಳನ್ನು ತರಿಸಿ, ಕಾರ್ಖಾನೆಗಳನ್ನು ಕಟ್ಟಿ, ಕೆಲಸಗಾರರನ್ನು ಕಲೆಹಾಕಿ, ಕಚ್ಚಾಮಾಲು ತಂದು. ಸಿಂದ್ರಿಯ ಕೃತಕ ಗೊಬ್ಬರವು ತಯಾರಾಗಲು ಮೂರು ನಾಲ್ಕು ವರ್ಷಗಳು ಬೇಕಾದಾವು. ಯಂತ್ರ ಹಾಗೂ ಕಚ್ಚಾಮಾಲು ತರಿಸಲು ಹಣ ಬೇಕು. ಈ ಹಣವು ಎಲ್ಲಿಂದ ಬಂತು? ಕಳೆದ ವರ್ಷದ ಯಾ ಹಿಂದಿನ ವರ್ಷದ ಉತ್ಪಾದನೆಯ ಸ್ವಲ್ಪ ಅಂಶವನ್ನು ಉಳಿಸಿ ಅದನ್ನು ಸಿಂದ್ರಿಯ ಗೊಬ್ಬರದ ಕಾರ್ಖಾನೆಗೆ ಹೂಡಬೇಕಲ್ಲವೆ? ಇದೇ ಬಂಡವಾಳ—ಮೂರನೆಯ ಅವಯವ ಭೂಮಿ, ಪರಿಶ್ರಮ. ಬಂಡವಾಳಗಳನ್ನು ಉಚಿತ ಪ್ರಮಾಣಗಳಲ್ಲಿ ಬೆರೆಯಿಸಿ, ಕೆಲಸವನ್ನು ಸಾಂಗಗೊಳಿಸುವ ನಿಯೋಜಕತನ, ಸಂಚಾಲಕತನಗಳಿಗೆ 'ಸಾಹಸ' ಎಂದು ಹೆಸರಿಟ್ಟು, ನಾಲ್ಕನೆಯ ಅವಯುವವನ್ನು ಕಲಿಸಬಹುದು ಆದರೆ ಇದೂ ಒಂದು ಬಗೆಯ ಪರಿಶ್ರಮ ಎಂಬುದನ್ನು ಮರೆಯಬಾರದು. ಕೂಲಿ, ಲಾಭಗಳನ್ನು ಗುರುತಿಸುವ ಅನುಕೂಲಕ್ಕೋಸ್ಕರ ಮಾತ್ರವೇ ನಾವು ಈ ಅವಯವವನ್ನು ಬೇರ್ಪಡಿಸಿರುವೆವು.

ಭೂಮಿ, ಪರಿಶ್ರಮ. ಬಂಡವಾಳ, ಸಾಹಸ ಎಂಬ ಚತುರ್ವಿಭಾಗಗಳನ್ನು ನಿರ್ಮಿಸಿದ ಪ್ರಾಚೀನಪಂಥದವರು ಮಾಡಿದುದೆಲ್ಲ ಸರಿಯೆ? ಎಂದು ವಿಚಾರಿಸೋಣ. (೧) ಭೂಮಿ ಎಂಬುದು ಭೌತಿಕವಾದ, ಬಹುಕಾಲ ಬಾಳುವ ಒಂದು ವಸ್ತು ಪರಿಶ್ರಮ ಎಂಬುದು ಕಾಲಕಾಲಕ್ಕೆ ಸಲ್ಲಿಸುವ ಸೇವೆ ಆದರೆ ನಮಗೆ ಭೂಮಿ ಮುಖ್ಯವೋ? ಅದು ಸಲ್ಲಿಸುವ ಸೇವೆ ಮುಖ್ಯವೊ? 'ಪರಿಶ್ರಮ' ಮುಖ್ಯವೋ, ಅದರಿಂದಾಗುವ ಕೆಲಸ

ಮುಖ್ಯವೂ? 'ಪರಿಶ್ರಮ' ಮಾಡುವ ಕೂಲಿಯವನ ದುಡಿಮೆ ತಾನೇ ನಮಗೆ ಬೇಕಾದುದು? ಈ ದೃಷ್ಟಿಯಿಂದ ನೋಡಿದರೆ ಅವಯವಗಳನ್ನು 'ಭೂಮಿ' 'ಪರಿಶ್ರಮ' ಎಂದು ಕಟ್ಟುಸಿಟ್ಟಾಗಿ ವಿಭಜಿಸಲು ಬರುವುದಿಲ್ಲ. ಭೂಮಿಗಳು, ಪರಿಶ್ರಮಗಳು, ಅವು ಸಲ್ಲಿಸುವ ಸೇವೆಗಳು ಎಂದು ಪೃಥಕ್ಕರಿಸಿ ಹೇಳಬೇಕು.

೨. 'ಪರಿಶ್ರಮ' ಎಂಬ ನಾಲ್ಕಕ್ಷರದಲ್ಲಿ ಭಂಗಿಯು ತೋಡುವ ಕೆಲಸ ದಿಂದ ಆರಂಭಿಸಿ ರಾಜ್ಯಾಧ್ಯಕ್ಷರೂ ರಾಯಭಾರಿಯೂ ಮಾತೋಡಿಸುವ ವರೆಗಿನ ಎಂತೆಂತಹ ಕಾರ್ಯಗಳು ಜರಗುವುದಿಲ್ಲ? ಎಲ್ಲವನ್ನೂ ಏಕತ್ರ ವಾಗಿ ಪರಿಶ್ರಮ ಎನ್ನುವುದು ಉಚಿತವಾಗಲಾರದು. ಭೂಮಿ, ಬಂಡವಾಳ ಗಳೂ ಹೀಗೆಯೇ ಭೂಮಿಯಲ್ಲಿ ಬೈಲು, ಮಜಲು, ಬೆಟ್ಟು, ಹಡಿಲು, ಹಾಡಿ, ಕಾಡು, ಬಂಡವಾಳದಲ್ಲಿ ಸೈಕಲು, ಚೂರಿ, ಮೊಳೆ, ಮೋಟರು, ದಸ್ತಾವೇಜು, ಕಿರುವಾಯಿದೆ ಹಣ, ನಿಡುವಾಯಿದೆ ಸಾಲ, ಷಯರು-ಏನೆಲ್ಲ ಇವೆ! ಸಮರೂಪವಿಲ್ಲದ ಇಂಥವನ್ನು ನಾಲ್ಕೇ ವರ್ಗವಾಗಿ ವಿಂಗಡಿಸುವುದು ಸಮರ್ಪಕವಾದೀತೆ?

೩ ಭೂಮಿ, ಬಂಡವಾಳಗಳು ಬೇರೆ ಬೇರೆಯು? ಎಂಬುದನ್ನು ವಿಚಾರಿಸುವ. ನಾವು ಈಗ ಭೂಮಿಯ ಮೇಲೆ ಎತ್ತುಗಳನ್ನು ಹೂಡಿ ದಂತೆ, ನಮ್ಮ ಪೂರ್ವಿಕರ ಲಾಗಾಯಿತು ಅದರ ಸಾರದ ರಕ್ಷಣೆಗೂ, ಪೋಷ ಣೆಗೂ, ಎಷ್ಟೆಲ್ಲ ಬಂಡವಾಳ, ಎಷ್ಟಲ್ಲಿ ಶ್ರಮ ವಿನಿಯೋಗಿಸಿಲ್ಲ? ಹಾಗಾ ದರ ಭೂಮಿಯಲ್ಲೂ ಬಂಡವಾಳ, ಶ್ರಮ ಸೇರಿಕೊಂಡಿವೆ ಎಂದ ಹಾಗಾ ಯಿತು ಒಂಡವಾಳ ಮನುಷ್ಯಕೃತವಾದುದೆಂದೂ, ಭೂಮಿ ನೈಸರ್ಗಿಕ ಉತ್ಪನ್ನವೆಂದೂ ನಂಬುವುದು ತಪ್ಪು.

೪ ರಸ್ತೆಗಳು 'ಹೈವೇ' ಇಲಾಖೆಯುವರ ಕೈಗೆ ಬಂದ ಮೇಲೆ ನಮ್ಮಲ್ಲಿ ಉಗಿಯ ರೋಲರ್ ಬಂದಿದೆ ಅದು ಮಾಡುವ ಕೆಲಸವನ್ನು ಪೂರ್ವದಲ್ಲಿ ನಲ್ವತ್ತು ಜನ ಕೂಲಿಯವರು ಮಾಡುತ್ತಿದ್ದರು ಸಲ್ಲಿಸುವ ಸೇವೆ ಒಂದೇ ಎನ್ನುವಾಗ 'ಉಗಿಯ ರೋಲರು' (ಬಂಡವಾಳ) 'ಕೂಲಿಗಳು' (ಪರಿಶ್ರಮ) ಒಂದೇ ವರ್ಗಕ್ಕೆ ಸೇರಬೇಕಾಗುವುದು.

೫ ರೈಲುಹಳಿ, ತಂತಿಕಂಬ, ಅಣೆಕಟ್ಟುಗಳಿಂದ ಹಿಡಿದು, ಬಿಂದಿಗೆ, ಸೈಕಲು ಪಂಪು, ಚೂರಿ ಕತ್ತರಿಗಳ ತನಕವೂ ವ್ಯಾಪಿಸಿರುವ 'ಬಂಡ

ವಾಳ'ದ ಪ್ರಭೇದಗಳನ್ನು ಒಂದೇ ಶಬ್ದದಲ್ಲಿ ತುರುಕುವುದು ಸೂಕ್ತವಾಗಲಾರದು

೬. ಹಲವಾರು ಬಗೆಯ 'ಪರಿಶ್ರಮ' 'ಬಂಡವಾಳ' ಇತ್ಯಾದಿಗಳನ್ನು ಒಂದೆರಡು ವಿಶಿಷ್ಟ ವರ್ಗಗಳಲ್ಲಿ ಸೇರಿಸಿದುದರಿಂದ ಪರಿಸರದ ವಿಶ್ಲೇಷಣೆಯು ದುಸ್ಸಾಧ್ಯವಾಯಿತು.

## ಉತ್ಪಾದನೆಯ ಅವಯವಗಳು ಯಾವುವು?

ಉತ್ಪಾದನೆಯ ಕಾರ್ಯದಲ್ಲಿ ನೆರವಾಗುವ ಪ್ರತಿಯೊಂದೂ ಉತ್ಪಾದನೆಯ ಅವಯವವೆಂದು ಕರೆಯಲರ್ಹವಾಗಿದೆ. ಉತ್ಪಾದನೆಯ ಕಾರ್ಯಭಾಗದಲ್ಲಿ ಅದನ್ನು ಎಲ್ಲಿ ಉಪಯೋಗಿಸಿದರೂ ಸರಿಯೇ, ಅದು ಉತ್ಪಾದನೆಯ ಅವಯವವಾಗುವುದು. ಕಲ್ಲಿದ್ದಲಿನ ಗಸಿಯ ಒಡೆಯನಿಗೆ ಕಲ್ಲಿದ್ದಲು ಉತ್ಪತ್ತಿ, ಆದರೆ ಅದೇ ಕಲ್ಲಿದ್ದಲು ರೈಲು ಬಂಡಿಗೆ ಅವಯವ-ಸಾಗುವಾಡಿನ ಸೇವೆಯ ಅವಯವ. ಅವಯವ ಮುಖ್ಯವಲ್ಲ, ಅವಯವ ಮಾಡುವ ಸೇವೆ ಮುಖ್ಯ ಎಂದು ನಾವು ಇದರಿಂದ ತಿಳಿಯಬಹುದು ಪರಿಶ್ರಮದ ಪೂರೈಕೆ ಎಂಬುದನ್ನು ಚೆನ್ನಾಗಿ ತಿಳಿಯಬೇಕಾದರೆ ಎಷ್ಟು ತಾಸು ಕೆಲಸ (ಮನುಷ್ಯ-ಕೆಲಸ, ಆಳು-ಕೆಲಸದ ಘಂಟೆ) ಎಂದು ಹೇಳಿದರೆ ವಿವರವಾಗುವುದು ಕಾಮಗಾರರು ಸಂಪು ಹೂಡಿದರು ಎಂದರೆ ಸಾಲದು, ಸಂಪಿನಿಂದ ಎಷ್ಟು ತಾಸು ಕೆಲಸ ನಿಂತಿತು ಎಂದು ಹೇಳಿದರೆ ಉತ್ಪಾದನೆಯ ಮೇಲೆ ಆದ ಪರಿಣಾಮವನ್ನು ನಿಚ್ಚಳವಾಗಿ ಗುರುತಿಸಬಹುದು.

ಅವಯವಗಳು ಎಂದರೆ ಅವು ಸಲ್ಲಿಸುವ ಸೇವೆಗಳು ಎಂದು ತಿಳಿದುಕೊಂಡರೆ ಅವುಗಳನ್ನು ವರ್ಗೀಕರಿಸಲು ಉಳಿಯುವುದು ಒಂದೇ ಮಾರ್ಗ. ಭೂಮಿ, ಪರಿಶ್ರಮ, ಬಂಡವಾಳಗಳನ್ನು ಚಿಕ್ಕ ಚಿಕ್ಕ ಏಕಾಂಶಗಳಾಗಿ ವಿಂಗಡಿಸಿ, ಸಮಾನ ಏಕಾಂಶಗಳನ್ನೆಲ್ಲ ಕಲೆಹಾಕಿ ಒಂದೊಂದು ಏಕಾಂಶ ಸಮೂಹವು ಇನ್ನೊಂದಕ್ಕೆ ಪ್ರತಿನಿಧಾನವಾಗುವಂತೆ ಏರ್ಪಡಿಸಿದರೆ ಆಗ 'ಅವಯವ'ಕ್ಕೆ ಸಂಪೂರ್ಣ ನಿರ್ದೋಷ ಅರ್ಥ ಬಂದಂತಾಗುವುದು. ಉತ್ಪಾದನೆಗೆ ನೆರವಾಗುವ ಅವಯವಗಳು ಸಮಾನ ರೂಪದುವೂ, ಪ್ರತಿನಿಧಾನದ ಗುಣವುಳ್ಳವೂ, ಆಗುವುದರಿಂದ ಅವು ಚಾತುರ್ವರ್ಣ್ಯದಲ್ಲಿ ಯಾವ

ಗುಂಪಿಗೆ ಸೇರಿದುವೆಂಬುದು ಅಪ್ರಸ್ತುತ ವಾಸ್ತವಿಕ ಉತ್ಪಾದನೆಯ ಸಮಸ್ಯೆ ನಮ್ಮ ಮುಂದೆ ಬರಲು ಈ ಚಾತುರ್ವರ್ಣ್ಯವು ಹೊಣೆಯಲ್ಲ. ಉತ್ಪಾದನೆಯನ್ನು ಒಂದು, ಎರಡು, ಅನೇಕ ಅವಯವಗಳಿಂದ ನಡೆಸಲು ಬರುವುದರಿಂದ ನಮ್ಮ ಆರ್ಥಿಕ ಜೀವನದಲ್ಲಿ ಸ್ಥೈರ್ಯವೂ, ಜಟಿಲತೆಯೂ, ಉಂಟಾಗಿದೆ.

**ಶ್ರಮವಿಭಾಗ:**

ಅನಾಗರಿಕ ಸಮಾಜದಲ್ಲಿಯೂ ಶ್ರಮವಿಭಾಗವು ಇಲ್ಲದಿಲ್ಲ ಗಂಡು ಹೊಲ ಉತ್ತರೆ, ಹೆಣ್ಣು ಮನೆಯಲ್ಲಿ ನೂಲು ನೇಯುತಿತ್ತು. ಗಂಡು ಯುದ್ಧಕ್ಕೆ, ಬೇಟೆಗೆ ಹೋದರೆ, ಹೆಣ್ಣು ಮಕ್ಕಳನ್ನು ಸಾಕುತ್ತಿತ್ತು. ಕುಪ್ಪಳ್ಳಿಯುವರು ಕೋಳಿ ಸಾಕಿದರೆ, ಗುಟ್ಟಳ್ಳಿಯುವರು ದನಗಳನ್ನು ಸಾಕಿ, ತಂತಮ್ಮ ಉತ್ಪತ್ತಿಗಳ ವಿನಿಮಯದಿಂದ ಒಟ್ಟು ಉತ್ಪಾದನೆಯ ಗಾತ್ರ ವನ್ನು ಹೆಚ್ಚಿಸುತ್ತಿದ್ದರು ಇದನ್ನು ನಾವು ಮೊದಲೇ ಪರಿಶೀಲಿಸಿ, ಪ್ರಾವೀಣ್ಯ ಎಂದು ಕರೆದಿದ್ದೆವು. ಇದೂ ಒಂದುಬಗೆಯ ಶ್ರಮವಿಭಾಗವೇ. ಆದರೆ ಈಗ ನಾವು ಚರ್ಚಿಸಲಿರುವುದು–ಒಂದೇ ಉತ್ಪಾದನೆಯ ಕೆಲಸದಲ್ಲಿ ನಿರತರಾದ ವ್ಯಕ್ತಿಗಳು, ಅವಯವಗಳು, ಆ ಕೆಲಸದ ಒಂದು ಭಾಗದಲ್ಲಿ ಮಾತ್ರ ಪ್ರಾವೀಣ್ಯವನ್ನು ಸಂಪಾದಿಸಿದುದರಿಂದ ಒಟ್ಟು ಉತ್ಪಾದನೆಯು ಅಧಿಕವಾಗುವ–ಎರಡನೆಯ ಬಗೆ ಇದು ಆಧುನಿಕ ಉದ್ಯಮಗಳಲ್ಲಿ ಅತಿ ಶಯವಾಗಿ ಕಂಡುಬರುವ ಶ್ರಮವಿಭಾಗ ಜಿಡುಕಿನ ಕೆಲಸ ಒಂದಿದ್ದರೆ– ಉದ್ಯಮಗಳ ಕೆಲಸ ಜಟಿಲವೇ ಆಗಿರುವುದು ನಿಯಮ–ಅದರ ವಿಶಿಷ್ಟ ಭಾಗಗಳನ್ನು ಬೇರೆ ಬೇರೆಯುವರು ಮಾಡುವುದರಿಂದ ಕೆಲಸವು ಬೇಗನೆ ನಡೆಯುವುದು. ಅಥವಾ ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವು ದಾದರೆ ನಿಶ್ಚಿತ ಕಾಲಾವಧಿಯಲ್ಲಿ ಉತ್ಪಾದನೆಯ ಗಾತ್ರವನ್ನು ಹೆಚ್ಚಿಸ ಬಹುದು.

**ಶ್ರಮವಿಭಾಗದ ಪ್ರಯೋಜನ:**

೧. ವ್ಯಕ್ತಿಯ ಸಾಮರ್ಥ್ಯದ ಸಂಪೂರ್ಣ ವಿಕಾಸಕ್ಕೆ ಅವಕಾಶ ಒದ ಗುವುದು. ಒಬ್ಬನು ಯಾವುದರಲ್ಲಿ ಹುಷಾರಿ ಆಗಿದ್ದಾನೋ ಆ ಕೆಲಸ ವನ್ನೇ ಪದೇ ಪದೇ ಮಾಡಿ ಪ್ರಾವೀಣ್ಯವನ್ನು ಸಂಪಾದಿಸುವನು.

೨. ಯಂತ್ರ ಸಲಕರಣೆಗಳ ಬಳಕೆ ರೂಢವಾಗುವುದು ಶ್ರಮ ವಿಭಾಗದ ಇನ್ನೊಂದು ಪ್ರಯೋಜನ. ಕಾಯಕಷ್ಟವನ್ನು ಆದಷ್ಟು ಕಡಿಮೆ ಮಾಡುವುದು ಯಂತ್ರಗಳ ಕೆಲಸ ಇದರಿಂದ ಹಲವರು ನಿರುದ್ಯೋಗಿಗಳಾಗುವುದಿಲ್ಲವೆ? ಎಂಬ ಸಂದೇಹ ಬರುವುದು ಸಹಜ. ಪರಿಶ್ರಮವನ್ನು ಉಳಿಸುವ ಯಂತ್ರಗಳಿಂದ ನಿರುದ್ಯೋಗ ಬೆಳೆಯುವುದು ಸಹಜವಾದರೂ, ಆ ಯಂತ್ರಗಳಿಂದ ಉತ್ಪಾದಿತವಾದ ಸಾಮಗ್ರಿಯನ್ನು ಕಾಮಗಾರರೇ ಉಪಯೋಗಿಸಿದರೆ ಅವರ ವರಮಾನವು ಹೆಚ್ಚುವುದು ವರಮಾನ ಹೆಚ್ಚಾದಂತೆ ಬೇರೆ ಇತರ ಸರಕುಗಳಿಗೆ ಬೇಡಿಕೆ ವೃದ್ಧಿಯಾಗುವುದು. ಯಂತ್ರಗಳನ್ನು ಬಳಕೆಗೆ ತಂದರೆ ಸಹಜವಾಗಿ ಸರಕಿನ ಧಾರಣೆ ಇಳಿಯುವುದು. ಸರಕಿನ ಬೇಡಿಕೆಯು ಸ್ಥಿತಿಸ್ಥಾಪಕಗುಣ ಉಳ್ಳುದಾದರೆ ಹೆಚ್ಚು ಸರಕು ಉತ್ಪಾದಿಸುವ ಪರಿಸ್ಥಿತಿಯೂ ಉಂಟಾಗಬಹುದು ಆಗ ನಿರುದ್ಯೋಗಿಗಳಲ್ಲಿ ಕೆಲವರನ್ನು ಅದೇ ಉದ್ಯಮಕ್ಕೆ ಮರಳಿ ಸೇರಿಸಿಕೊಳ್ಳುವ ಸಂದರ್ಭ ಒದಗುವುದು. ಯಂತ್ರಗಳನ್ನೇ ಉತ್ಪಾದಿಸುವ ಕಾರ್ಖಾನೆಯಲ್ಲಿಯೂ ಇತರ ಉದ್ಯಮಗಳಲ್ಲಿಯೂ ಹೊಸದಾಗಿ ಉದ್ಯೋಗಗಳು ಹುಟ್ಟಿಕೊಳ್ಳುವುವು. ಯಂತ್ರಗಳಿಂದ ತಯಾರಾದ ಅಗ್ಗದ ಸರಕನ್ನು ಜನ ಬಯಸದೆ ಇದ್ದರೂ, ಸರಕಿನ ಕಡಿಮೆ ಧಾರಣೆಯಿಂದಾಗಿ, ಅದರಲ್ಲಿ ವೆಚ್ಚಮಾಡುವ ಹಣವು ಕಡಿಮೆಯಾಗಿ, ಬೇರೆ ಸರಕುಗಳಿಗಾಗಿ ವಯಿಸಲು ಹೆಚ್ಚು ಹಣ ಸಿಗುವುದರಿಂದ ಆ ಸರಕುಗಳನ್ನು ತಯಾರಿಸುವ ಉದ್ಯಮದಲ್ಲಿ ಹೆಚ್ಚು ಕಾಮಗಾರರನ್ನು ತುಂಬಿಕೊಳ್ಳುವ ಶಕ್ತಿ ಬರಬಹುದು. ಆ ಸರಕುಗಳ ಉತ್ಪಾದನೆಯಲ್ಲಿ ನಿರುದ್ಯೋಗಿಗಳನ್ನು ಕೆಲಸಕ್ಕೆ ತೆಗೆದುಕೊಳ್ಳಲು ಶಕ್ಯವಿದೆ ಬರೇ ಬಂಡವಾಳವನ್ನುಳಿಸುವ ಯಂತ್ರಗಳೂ ಇವೆ. ಅವುಗಳನ್ನು ಬಳಸಿದುದರಿಂದ, ಸಮಾಜದ ಒಟ್ಟು ಉತ್ಪಾದನೆಯು ಹೆಚ್ಚಿ ಕಾಮಗಾರರ ವರಮಾನಕ್ಕೆ ಕಡಿತ ಬೀಳುವುದರ ಬದಲಿಗೆ ಅಗ್ಗದ ಸಾಮಾನುಗಳ ದೆಸೆಯಿಂದ ವಾಸ್ತವಿಕ ವರಮಾನವು ಹಿಗ್ಗಲು ಆಸ್ಪದ ಉಂಟಾದೀತು.

ಕೃಷಿಕರ ನಾಡಾದ ಭಾರತದಲ್ಲಿ ಎಷ್ಟುಮಟ್ಟಿಗೆ ಯಂತ್ರಗಳನ್ನು ಬಳಸಬಹುದು, ಶ್ರಮವಿಭಾಗದ ಲಾಭ ಎತ್ತಬಹುದು? ಎಂಬುದನ್ನು ಪರಿ

ಶೀಲಿಸುವ ಅಗತ್ಯವಿದೆ. ಸಾವಿರಜನಕ್ಕೆ ಕೆಲಸ ಕೊಡುತ್ತಿದ್ದ ಹತ್ತಿಯ ಹೊಲದಲ್ಲಿ ನಾಲ್ಕಾರು ಟ್ರ್ಯಾಕ್ಟರ್ ಕಂಬೈನರುಗಳನ್ನು ತರಿಸಿಕೊಂಡು, ಉತ್ಪಾದನೆಯ ವೇಗ ಹೆಚ್ಚಿಸಲು ಸಾಧ್ಯವುಂಟು. ಆದರೆ ನಿರುದ್ಯೋಗಿಗಳ ಪ್ರಶ್ನೆಯು ಇಲ್ಲಿ ಬಲವತ್ತರವಾಗಿ ಮೇಲೆ ಬರುತ್ತದೆ ಟ್ರ್ಯಾಕ್ಟರಿನ ದೆಸೆಯಿಂದ ಕೆಲಸ ಹೋದವರನ್ನು ಬೇರೆಕಡೆ ಉಪಯೋಗಿಸಿಕೊಳ್ಳುವ ಉದ್ಯಮಗಳು ಸೃಷ್ಟಿಯಾಗುವ ತನಕ ಟ್ರ್ಯಾಕ್ಟರು ಉಪಯೋಗಿಸದಿರುವುದೇ ಚೆನ್ನು. ನಿರುದ್ಯೋಗಿಯಾಗಿ ಅಲೆಯುವುದಕ್ಕಿಂತ, ಅರೆಹೊಟ್ಟೆ ಉಣ್ಣುವುದು ಲೇಸಲ್ಲವೆ? ಔದ್ಯೋಗೀಕರಣವು ಮುಂದೆ ಸಾಗಿದಂತೆಲ್ಲ, ಕೃಷಿಯಿಂದ ಹೆಚ್ಚು ಹೆಚ್ಚು ಜನರನ್ನು ಆಕರ್ಷಿಸಿ ಉದ್ಯಮಗಳಿಗೆ ಸೇರಿಸಿಕೊಳ್ಳಲು ಸಾಧ್ಯವಿದೆ. ದೇಶದ ಕೃಷಿ ಉತ್ಪಾದನೆಯ ಸಮಸ್ಯೆಯೂ, ಔದ್ಯೋಗೀಕರಣದ ಸಮಸ್ಯೆಯೂ ಒಂದರೊಡನೊಂದು ಹಾಸುಹೊಕ್ಕಾಗಿವೆ. ಪಾಶ್ಚಾತ್ಯ ದೇಶಗಳಲ್ಲಿ ಕೃಷಿ ಸುಧಾರಣೆಯಾಗಿ, ಕೆಲವು ವರ್ಷಗಳ ಮೇಲೆ ಔದ್ಯೋಗೀಕರಣವು ಬಂದಿತು. ಕೋಟಿಗಟ್ಟಲೆ ಜನಸಂಖ್ಯೆಯುಳ್ಳ ನಮ್ಮ ದೇಶದಲ್ಲಿ ಎರಡೂ ಏಕಕಾಲದಲ್ಲಿ ಜರಗಬೇಕಾಗಿರುವುದರಿಂದ ಸಮಸ್ಯೆಯು ಭೀಕರ ರೂಪಕ್ಕೆ ಬಂದಿದೆ.

೩ ಬೃಹತ್ಪ್ರಮಾಣದ ಉತ್ಪಾದನೆಯು ಜರಗಲು ಶ್ರಮವಿಭಾಗವು ಸಹಾಯಕವಾಗಿದೆ.

೪ ನಮಗೆ ತಯಾರಿಸಿಕೊಳ್ಳಲಾಗದ ಸರಕುಗಳು ನಮ್ಮ ಉಪಯೋಗಕ್ಕೆ ದೊರಕುವುವು. ಉದಾ: ಕೆನೇಡಿಯನ್ ರೈಲು ಇಂಜಿನು.

೫ ಅಂತರ ರಾಷ್ಟ್ರೀಯ ಶ್ರಮ ವಿಭಾಗದಿಂದ ಪ್ರಪಂಚದ ಉತ್ಪಾದನೆಯು ಅಧಿಕವಾಗುವುದು.

**ಶ್ರಮ ವಿಭಾಗದ ತೊಂದರೆಗಳು:**

೧ ಬೋಲ್ಟಿಗೆ ಸುತ್ತಿಗೆಯಿಂದ ಹೊಡೆಯುವುದನ್ನೇ ಒಬ್ಬನು ದಿನಕ್ಕೆ ಎಂಟು ತಾಸಿನಂತೆ ಜೀವನವೆಲ್ಲಾ ಮಾಡುವ ಪ್ರಸಂಗ ಬಂದರೆ, ಅವನಿಗೆ ತನ್ನ ಕೆಲಸದ ಮೇಲೆ ಏನೂ ಅಭಿಮಾನ ಉಳಿಯಲಾರದು. ಅಂದರೆ, ಶ್ರಮ ವಿಭಾಗದಿಂದ ಬೇಸರಿಕೆ ಬರುವ ಸಂಭವವುಂಟು.

(೨) ಗಾಜಿನ ದಪ್ಪವನ್ನು ಅಳೆಯುವ ಕಾಮಗಾರರಿಗೆ ಗಾಜಿನ ಉದ್ಯಮದ ಇಳಿತ-ಭರತಗಳಿಂದ ತುಂಬಾ ಪರಿಣಾಮವಾಗುವುದು. ಬೇರೆ ಕೆಲಸಗಳನ್ನು ಅರಿಯದ ಈ ಜನರು ಇಡೀ ಉದ್ಯಮವೇ ಇಳಿತದಲ್ಲಿರುವಾಗ ಒಂದೂರಿಂದ ಒಂದೂರಿಗೆ ಸಂಚಲಿಸುವ ಹಾಗಿಲ್ಲ. ಹೀಗಾಗಿ ಪರಿಶ್ರಮದ ಸಂಚಲನೆಗೆ ತೊಡಕುಂಟಾಗುವುದು.

(೩) ಜವಾಬುದಾರಿತನ ಮಾಯವಾಗುವುದು

(೪) ಕುಶಲರಾದ ಕಾಮಗಾರರ ಕೌಶಲ್ಯವು ವ್ಯರ್ಥವಾಗುವುದು ಮನುಷ್ಯನ ನರಗಳ ಮೇಲೆ ಯಂತ್ರದ ಸದ್ದಿನಿಂದಲೂ, ಅದರೊಡನೆ ಕೆಲಸ ಮಾಡುವುದರಿಂದಲೂ ದುಷ್ಪರಿಣಾಮವಾಗುವುದು. ಗೋಕುಲದ ಸ್ವಚ್ಛಂದ ಬಂಧುರವಾದ ಗೋಪಾಲಕತನವೆಲ್ಲಿ, ಅದೇ ಮಥುರೆಯ ಗಿರಣಿಯ ಕಾಮಗಾರನ ನಿಷ್ಠುರ ಕಾರ್ಯಸನ್ನಿವೇಶಗಳೆಲ್ಲಿ?

(೫) ಗಿರಣಿಯ ಜೀವನವೂ, ಜನನಿಬಿಡವಾದ ನಗರವಾಸವೂ, ಮನುಷ್ಯನ ಕೋಮಲ ಭಾವನೆಗಳನ್ನೆಲ್ಲಾ ಕೊಂದು, ಅವನನ್ನು ನಿರ್ಜೀವ ಯಂತ್ರವನ್ನಾಗಿ ಮಾರ್ಪಡಿಸುವುವು.

**ಶ್ರಮವಿಭಾಗದ ಗಡಿ:**

ಬೇಡಿಕೆ ಕಡಿಮೆಯಿರುವ ಸರಕಿನ ಉತ್ಪಾದನೆಯಲ್ಲಿಯೂ, ಮಾರ್ಕೆಟಿನ ಧಾರಣೆಯು ಪೂರೈಕೆಯ ಸ್ವಲ್ಪ ಹೆಚ್ಚಳದಿಂದಲೇ ಬಹಳವಾಗಿ ಇಳಿಯುವ ಸಂದರ್ಭವಿದ್ದರೂ, ಇಳಿಮುಖವಾದ ಫಲಿತಾಂಶ ಹೊರಡಲು ಆರಂಭವಾದರೂ, ಶ್ರಮವಿಭಾಗವು ನಿರರ್ಥಕವಾಗುವುದು.

**ಸ್ಥಾನ ನಿರ್ಣಯ:**

ಭಾರತದಲ್ಲಿ ಮೊತ್ತಮೊದಲಿನ ಗಿರಣಿಗಳು ಮುಂಬೈಯಲ್ಲಿ ಹುಟ್ಟಿಕೊಳ್ಳಲು, ಮುಂಬೈಯು ಯಂತ್ರಗಳನ್ನು ತರಿಸಿಕೊಳ್ಳಲು ಅನುಕೂಲವಾದ ಭಾಗದಲ್ಲಿದ್ದುದೂ, ಹತ್ತಿ ಬೆಳೆಯುವ ಪ್ರದೇಶವು ಅದರ ಹಿನ್ನಾಡಾಗಿದ್ದುದೂ ಕಾರಣ. ಕಲ್ಕತ್ತೆಯಲ್ಲಿ ಸಣಬಿನ ಕಾರ್ಖಾನೆಯಿರಲು, ಬಂಗಾಳದ ಸಣಬು ಹತ್ತಿರವೇ ದೊರೆಯುತ್ತಿರುವುದೂ, ಜಮಶೇದ್ ಪುರದಲ್ಲಿ ಉಕ್ಕುತಯಾರಾಗಲು ಕಬ್ಬಿಣ ಕಲ್ಲಿದ್ದಲುಗಳು ಸಮೀಪದಲ್ಲಿಯೇ ಅಗೆಯು

ಲ್ಪಡುವುದೂ ಕಾರಣವೆಂದು ಎಲ್ಲರಿಗೂ ಗೊತ್ತಿದೆ. ಉದ್ಯಮವನ್ನು ಆರಂಭಿಸುವ ಸಂಚಾಲಕನು ಅದಕ್ಕಾಗಿ ಅತ್ಯುತ್ತಮ ಸ್ಥಾನವನ್ನೇ ಹುಡುಕುತ್ತಾನೆ.

೧ ನೈಸರ್ಗಿಕ ಸನ್ನಿವೇಶಗಳು. ಅಂದರೆ ಬೇಕಾಗುವ ಕಚ್ಚಾಮಾಲು ಸಮೀಪದಲ್ಲಿರುವುದು—ಭದ್ರಾವತಿಯ ಕಾಗದದ ಕಾರ್ಖಾನೆಗೆ ಗಟ್ಟದ ತಪ್ಪಲಿನ ಬಿದಿರಿನ ಸರಬರಾಯಿ, ಹವಾಮಾನ ಚೆನ್ನಾಗಿರುವುದು-ಸುಂದರಬನದಲ್ಲಿ ಸಣಬು ಚೆನ್ನಾಗಿ ಬೆಳೆದರೂ, ಅಲ್ಲಿ ಕಾರ್ಖಾನೆ ಸ್ಥಾಪಿಸಿದರೆ ಮಲೇರಿಯಾ ಕಾಟದಿಂದ ಕಾಮಗಾರರು ಉಳಿಯುವುದಿಲ್ಲ; ನೀರುದಾರಿಯಂಥ ಸಾಗುವಾಡಿನ ಸೌಕರ್ಯಗಳಿರುವುದು

೨. ಬಂಡವಾಳವೂ, ಪರಿಶ್ರಮವೂ ಸುಲಭವಾಗಿ, ಬೇಕಷ್ಟು ಸಿಗುವ ಪರಿಸ್ಥಿತಿಯಿದೆಯೆ? ವಿಶಿಷ್ಟ ಉದ್ಯಮದಲ್ಲಿ ಪ್ರಾವೀಣ್ಯಪಡೆದವರಿರುವ ಸ್ಥಳದಲ್ಲಿಯೇ ಉದ್ಯಮವನ್ನು ತೆರೆಯುವುದು ಲೇಸಲ್ಲವೆ? (ಜರ್ಮನಿಯ ರಾಸಾಯನಿಕ ಉದ್ಯಮ, ಸ್ವಿಝರ್ಲೆಂಡಿನ ವಾಚು ತಯಾರಿ, ಜಪಾನಿನ ಆಟದ ಬೊಂಬೆಗಳು).

೩. ನಮ್ಮ ಉದ್ಯಮಕ್ಕೆ ಅವಯವಗಳನ್ನೊದಗಿಸುವಂಥ, ಉತ್ಪಾದನೆಯ ಕಾರ್ಯಭಾಗಕ್ಕೆ ನೆರವಾಗುವಂಥ ಪೂರಕ ಉದ್ಯಮಗಳು ನಮ್ಮ ಬಳಿಯೇ ಜನಿಸುವ ಸಂಭವವಿದೆಯೇ? (ಬೆಂಕಿಪೆಟ್ಟಿಗೆಯ ಕಾರ್ಖಾನೆಯ ಬಳಿಯಲ್ಲೇ ಮರಸಿಗಿಯುವ ಕಾರ್ಖಾನೆ).

೪. ಶೀಘ್ರವೇ ಸಾಗುವಾಡಿನ ಸೌಕರ್ಯ—ರೈಲುಹಾದಿಗಳು-ಉಂಟಾಗುವ ಲಕ್ಷಣ ಇದೆಯೇ?

—ಎಂದು ಮೊದಲಾಗಿ ಯೋಚಿಸಿ ಬಂಡವಾಳಗಾರನು ತನ್ನ ಉದ್ಯಮದ ಸ್ಥಾನ ನಿರ್ಣಯವನ್ನು ಮಾಡುವನು.

**ಅವಯವಗಳ ಸಂಚಲನೆ:**

ನಮ್ಮ ಶರೀರದಲ್ಲಿರುವ ಅವಯವಗಳು ಚಲಿಸಿದರೂ, ಇದ್ದಲ್ಲೇ ಚಲಿಸುವುವು. ಆರ್ಥಿಕ ಶರೀರಕ್ಕೆ ಪುಷ್ಟಿಯನ್ನು ಕೊಡುವ ಅವಯವಗಳು ಒಂದೆಡೆಯಿಂದ ಇನ್ನೊಂದಡೆಗೆ ಚಲಿಸುವುವು. ಅವಯವಗಳನ್ನು ಜೋಡಿಸುವ ಸಂಚಾಲಕನಿಗೆ ಅತಿ ಹೆಚ್ಚು ಫಲದಾಯಕವಾಗಿರುವ ಅವಯವಗಳನ್ನು

ಉಚಿತವಾದ ದಾಮಾಶಯದಲ್ಲಿ ಬೆರೆಸಬೇಕೆಂಬ ಹಂಬಲಿರುವುದು. ಸ್ವತಃ ಅವಯುವಗಳಿಗೂ, ಅಧಿಕಾಧಿಕ ಪ್ರತಿಫಲವು ದೊರೆಯುಬೇಕೆಂಬ ಆಸೆ ಇದೆಯುಷ್ಟೆ. ಹೆಚ್ಚಿನ ಅವಯುವಗಳು ಒಂದಕ್ಕಿಂತ ಹೆಚ್ಚಿನ ಉಪಯೋಗಕ್ಕೆ ಬೀಳುವುದರಿಂದ ಒಂದು ಅವಯುವವನ್ನು ಅನೇಕ ವಿಧಗಳಲ್ಲಿ ಉಪಯೋಗಿಸುವರು. ಇದರಿಂದ ಮಾನವ ಸಮಾಜದ ಆರ್ಥಿಕ ಪ್ರಗತಿ ಉಂಟಾಗಿರುವುದನ್ನು ಗಮನಿಸಬೇಕು ನಾಲ್ಕು ಬಣ್ಣಗಳಿಂದ ನಲ್ವತ್ತು ಬಣ್ಣಗಳನ್ನು ಸೃಷ್ಟಿಸಿ ಸುಂದರ ನಿಸರ್ಗವನ್ನು ಚಿತ್ರಿಸುವ ಕಲೆಗಾರನಿಗಿಂತ, ನಾಲ್ಕು ಅವಯುವಗಳಿಂದ ನಾಲ್ನೂರು ಸರಕುಗಳನ್ನು ಉತ್ಪಾದಿಸುವ ಉತ್ಪಾದಕನು ಎಷ್ಟಕ್ಕೂ ಕಡಿಮೆಯಲ್ಲ. ಒಂದು ಅವಯುವವನ್ನು ತಿದ್ದಿ ಬೇರೆ ಮಾಡಬಹುದು, ಅಥವಾ ಇನ್ನೊಂದನ್ನು ಪ್ರತಿನಿಧಾನವಾಗಿ ತರಬಹುದು ಅರ್ವಾಚೀನ ಉತ್ಪಾದನಾ ಕ್ರಮದಲ್ಲಿ ಅನೇಕ ಕಾರ್ಯಭಾಗಗಳಿರುವುದರಿಂದ ಒಂದೇ ಅವಯುವವನ್ನು ವಿವಿಧ ಅವಸ್ಥಾಂತರಗಳಲ್ಲಿ ವಿಧವಿಧವಾದ ಕೆಲಸಗಳಿಗೆ ಬಳಸಿಕೊಳ್ಳಬಹುದು ಇಲ್ಲಿ ಒಂದು ಉದ್ಯಮದ ಅಂತರ್ಯದಲ್ಲೇ ಅವಯುವ ಸಂಚಲನೆ ನಡೆದಿದೆ ಅವಯುವಗಳು ಒಂದು ವೃತ್ತಿಯಿಂದ ಇನ್ನೊಂದು ವೃತ್ತಿಗೂ (ಉಪಾಧ್ಯಾಯನು ಸೈನ್ಯಕ್ಕೆ ಸೇರುವುದು, ಕುರಿ ಮೇಯಿಸುವವನು ಪೈಗಂಬರನಾಗುವುದು) ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೂ, (ಕನ್ನಡ ಜಿಲ್ಲೆಯ ಕೂಲಿಗಳು ಕಾಫಿ, ಯಾಲಕ್ಕಿ ತೋಟಗಳಿಗೂ, ಅಮೇರಿಕದ ಬಂಡವಾಳವು ಹಿಂದುಳಿದ ಏಶಿಯದ ದೇಶಗಳಿಗೂ), ಒಂದು ಉದ್ಯಮದಿಂದ ಇನ್ನೊಂದು ಉದ್ಯಮಕ್ಕೂ (ಕೃಷಿಯಿಂದ ಮದ್ದುಗುಂಡಿನ ಕಾರ್ಖಾನೆಗೆ) ಚಲಿಸುವುವು.

**ಪರಿಶ್ರಮ, ಕಾಮಗಾರರು:**

ಕಾಮಗಾರರು ಒಂದು ಉದ್ಯಮದಿಂದ ಇನ್ನೊಂದು ಉದ್ಯಮಕ್ಕೆ ಸಂಚಲಿಸುವುದು ಸುಲಭ ಸಾಧ್ಯವಾಗಬೇಕಾದರೆ ಅವರು ಕೈಗೊಳ್ಳುವ ಉದ್ಯಮದಲ್ಲಿ ಅವರ ಹಿಂದಿನ ಉದ್ಯಮದ ಅನುಭವವು ಉಪಯೋಗಕ್ಕೆ ಬೀಳತಕ್ಕುದು. ಎಲ್ಲಿ ಹೋದರೂ ಕಲ್ಲು ಹೊಡೆಯುವವನಿಗೆ ಕೊಯು ಮುತ್ತೂರೇನು ಉಡುಪಿಯೇನು? ಅಂತೆಯೇ ಡೀಸೆಲ್ ಯಂತ್ರಜ್ಞನು ಟ್ಯಾಂಕುಗಳನ್ನು ಸುಲಭವಾಗಿ ನಡೆಯಿಸಬಹುದು; ಮೋಟರು ಡ್ರೈವರನು

ವಿಮಾನ ಹಾರಿಸಬಲ್ಲನು ಆದರೂ ಕಾಮಗಾರರು ತಮ್ಮ ಮನೆಮಾರು ಮಕ್ಕಳು, ಮಿತ್ರರು, ಪರಿಚಿತ ಸನ್ನಿವೇಶಗಳನ್ನು ಬಿಟ್ಟು ದೂರ ತೊಲಗಲು ಅಪೇಕ್ಷಿಸುವುದಿಲ್ಲ ಹೊಸ ಸ್ಥಳ, ಹೊಸ ಭಾಷೆ, ಹೊಸ ಹವೆಯ ಬೆದರಿಕೆ ಯಾವಾಗಲೂ ಇದ್ದೇ ಇದೆ. ಅದರಲ್ಲಿಯೂ ಹೊಸ ಉದ್ಯೋಗ ಆರಂಭಿಸಲು ವಿಶಿಷ್ಟ ಶಿಕ್ಷಣವೂ ಬೇಕಾಗಿದ್ದಲ್ಲಿ ಉತ್ಸಾಹ ಇನ್ನಷ್ಟು ಕಡಿಮೆಯಾಗುವುದು ಹೊಸ ಕೂಲಿಯ ಹೆಚ್ಚಳದಿಂದ ಈ ಎಲ್ಲ ತೊಂದರೆಗಳು ಪರಿಹಾರವಾಗುವಷ್ಟು ಆಕರ್ಷಣೆಗಳಿದ್ದರೆ, ಕಾಮಗಾರನು ಸಂಚಲಿಸಿಯಾನು ಎಳೆವಯಸ್ಸಿನ ಕಾಮಗಾರರು ಚಲಿಸಿದಷ್ಟು ಮುದುಕರು ಚಲಿಸುವುದಿಲ್ಲ. ನಮಗೆ ಎಷ್ಟೇ ಉತ್ಸಾಹವಿದ್ದರೂ ಒಂದು ದೇಶದಿಂದ ಹೊರಗೆ ಚಲಿಸಲು ಆ ದೇಶದ ಪರವಾನಿಗೆ ಬೇಕು ಆಸ್ಟ್ರೇಲಿಯಾದ ಉತ್ತರಭಾಗದ ಹವೆಯು ಭಾರತೀಯರಿಗೆ ಅನುಕೂಲವಾಗಿದ್ದು, ಇಲ್ಲಿಂದ ಆಸ್ಟ್ರೇಲಿಯಾಕ್ಕೆ ಹೋಗುವ ಸ್ವಯಂ ಸೇವಕರು ಬೇಕಾದಷ್ಟಿದ್ದರೂ, ಆಸ್ಟ್ರೇಲಿಯದ ಸರಕಾರವು ಬಾಗಿಲು ಮುಚ್ಚಿದರೆ ಸಂಚಲನೆ ಸಾಧ್ಯವಿಲ್ಲ. ಸಾಮಾನ್ಯ ಮನುಷ್ಯನಿಗೆ ಎಂ ಬಿ ಬಿ. ಎಸ್. ವೈದ್ಯನಾಗಲು ಸಾಧ್ಯವಿಲ್ಲ, ಅವನ ಅಪ್ಪನ ಹತ್ತಿರ ದುಡ್ಡು ಬೇಕು. ಕೆಲವು ಪ್ರಾಂತಗಳಲ್ಲಿ ವಿಶಿಷ್ಟ ಜಾತಿಗಳವರಿಗೆ ಉದ್ಯೋಗಕ್ಕೆ ಪ್ರವೇಶಿಸದ ಹಾಗೆ ಬಂಧನವಿದೆ. ಇಂಥ ಸಾಮಾಜಿಕ ಕಾರಣಗಳಿಂದಲೂ ಸಂಚಲನೆಗೆ ತೊಡಕುಂಟಾಗುವುದು. ಭಾರತದಂಥ ನಿರುದ್ಯೋಗ, ಅಲ್ಪೋದ್ಯೋಗಗಳು ಹೇರಳವಾಗಿರುವ ರಾಷ್ಟ್ರಗಳಲ್ಲಿ ಹಳ್ಳಿಯಿಂದ ಶಹರಿಗೆ ಸಂಚಲಿಸುವವರೂ, ಅಂತರರಾಷ್ಟ್ರೀಯ ಸಂಚಲನೆಗೆ, ಅಥವಾ ದೇಶಾಂತರಕ್ಕೆ ಹೋಗಲು ಸಂತೋಷದಿಂದ ಸಿದ್ಧರಾದವರೂ ಲಕ್ಷಗಟ್ಟಲೆ ಇದ್ದಾರೆ ಮುಂದುವರಿದ ರಾಷ್ಟ್ರಗಳಲ್ಲಿ ಕಾಮಗಾರರನ್ನು ಒಂದು ಕೆಲಸದಿಂದ ಇನ್ನೊಂದು ಕೆಲಸಕ್ಕೆ ವರ್ಗಾಯಿಸಲು 'ಎಂಪ್ಲೋಯ್‌ಮೆಂಟ್ ಎಕ್ಸ್‌ಛೇಂಜ್' ಗಳಿವೆ. ನಮ್ಮ ದೇಶದಲ್ಲಿಯೂ ಯುದ್ಧಾನಂತರ ದೊಡ್ಡ ಶಹರುಗಳಲ್ಲಿ ಈ ಎಕ್ಸ್‌ಛೇಂಜುಗಳನ್ನು ಸ್ಥಾಪಿಸಿದ್ದಾರೆ ಕಾಮಗಾರರ ಬೇಡಿಕೆ ಉಳ್ಳ ಸಂಚಾಲಕರನ್ನೂ, ಉದ್ಯೋಗವನ್ನು ಬಯಸುವ ಕಾಮಗಾರರನ್ನೂ ಕ್ಷಿಪ್ರದಲ್ಲಿ ಭೇಟಿ ಮಾಡಿಸುವುದು 'ಎಕ್ಸ್‌ಛೇಂಜ್'ನ ಕೆಲಸ. ಯಾವ ಹುಡುಗನಿಗೆ ಯಾವ ವೃತ್ತಿಯಲ್ಲಿ

ಅಭಿರುಚಿಯಿದೆ? ಎಂಬುದನ್ನು ಹೆತ್ತವರೂ, ಉಪಾಧ್ಯಾಯರೂ ಗಮನಕ್ಕೆ ತಂದು, ಅವನನ್ನು ಆ ಉದ್ಯೋಗಕ್ಕೆ ಹಚ್ಚುವುದು ದೇಶದ ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಮಹತ್ತ್ವದ ವಿಷಯ

**ಭೂಮಿ:**

'ಮಣ್ಣಿನ ಮೂಲಭೂತವಾದ ಅವಿನಾಶಿಶಕ್ತಿ'ಯನ್ನು ಭೂಮಿಯೆಂದು ಆರಾಧಿಸುವ ನಿಸರ್ಗ ಪೂಜಕರನ್ನು ನಾವು ವಿಶೇಷವಾಗಿ ಗಮನಿಸಬೇಕಾದುದಿಲ್ಲ ಅಡವಿಯಲ್ಲದ ಉಳುನೆಲವೆಲ್ಲವೂ ಮಾನವ ನಿರ್ಮಿತವಾದುದು. ಈ ನೆಲವು ಒಂದು ಕಡೆಯಿಂದ ಇನ್ನೊಂದು ಕಡೆಗೆ ಕಾಲು ಹಾಕದಿದ್ದರೂ, ಹೂಟಿಯಿಂದ ಭೂಮಿಯ ಉತ್ಪನ್ನವನ್ನು ಹೆಚ್ಚಿಸಬಹುದು. ಆಣೆಕಟ್ಟು ಹಾಕಬಹುದು, ನೀರಾವರಿ ಮಾಡಬಹುದು, ಮಲೇರಿಯಾನಿರೋಧಕ ಕಾರ್ಯಕ್ರಮ ಕೈಗೊಳ್ಳಬಹುದು. ಫೋಸ್ಫೇಟು ಹಾಕಬಹುದು. ಆದರೆ ಅರೇಬಿಯಾದಲ್ಲಿ ಮಾವಿನ ಮರವನ್ನೂ, ಮದರಾಸಿನಲ್ಲಿ ಖರ್ಜೂರದ ಮರವನ್ನೂ ಬೆಳೆಯಿಸುವ ಛಲ ಮಾತ್ರ ಸಲ್ಲದು. ಆದರೂ ಒಂದು ಹವಾಮಾನದ ಹೊಲದಲ್ಲಿ ಗೋಧಿಯನ್ನೂ ತೊಗರಿಯನ್ನೂ ಅಕ್ಕಿಯನ್ನೂ ಕಬ್ಬನ್ನೂ ಬೆಳೆಯಿಸಬಹುದು; ಚರಾವನ್ನು ಉಳಬಹುದು, ಉಳುನೆಲವನ್ನು ಕಾರ್ಖಾನೆಗಾಗಿ ಉಪಯೋಗಿಸಬಹುದು, ಹೀಗೆ ಪರಿವರ್ತನೆ ಮಾಡುತ್ತಿರುವಾಗ ಬಂಡವಾಳವನ್ನು ಉಪಯೋಗಿಸುವೆವು. ಅಂತೂ ಬಂಡವಾಳದ ಉಪಯೋಗದಿಂದ ಉತ್ಪಾದನೆ ಹೆಚ್ಚಿಸಬಹುದು. ಈ ದೃಷ್ಟಿಯಲ್ಲಿ ಭೂಮಿಯೂ ಚಲಿಸುತ್ತದೆ.

**ಬಂಡವಾಳ:**

ಇದ್ದ ಕಾರ್ಖಾನೆ, ಕಟ್ಟಿದ ಶಾಲೆ, ಕಾಲೇಜು, ಆಸ್ಪತ್ರೆ, ಹಾಕಿದ ರೈಲುಹಾದಿ, ತಂತಿ ಕಂಬಗಳು ದೇಶದ ಬಂಡವಾಳ ತಾನೆ? ಇವಕ್ಕೆ ಸಂಚಲನೆ ಇಲ್ಲವೆಂದು ಮೊದಲಿಗೆ ಕಂಡರೂ, ಆಳವಾಗಿ ವಿಚಾರಮಾಡಿದರೆ, ಅಲ್ಲೂ ಚಲನೆಯು ಇದ್ದೇ ಇದೆ. ನಮ್ಮೂರಿನ ಸೋಪು ಕಾರ್ಖಾನೆಯೊಂದರಲ್ಲಿ ಈಗ ಗಂಡುಮಕ್ಕಳ ಟ್ರೈನಿಂಗ್ ಶಾಲೆಯಿದೆ; ಹಟ್ಟಿಯೆಂದು ನಿರ್ಮಿಸಿದ್ದು ಅಚ್ಚಿನ ಮನೆಯಾಗಿದೆ. ಹುಬ್ಬಳ್ಳಿಯ ರೈಲ್ವೆ ವರ್ಕ್‌ಶಾಪಿನಲ್ಲಿ ಯುದ್ಧಕಾಲದಲ್ಲಿ ಗುಂಡು ತಯಾರಿಸುತ್ತಿದ್ದರು. ನಾಳೆ ನಮ್ಮ

ಜಿಲ್ಲೆಗೆ ಗೇರುಸೊಪ್ಪೆಯಿಂದ ವಿದ್ಯುತು ಬಂದರೆ, ಇಲ್ಲಿನ ಪ್ರೆಸ್ಸುಗಳು ವಿದ್ಯುತ್ತನ್ನುಪಯೊಗಿಸಿ ಊರಿಗೆ ಹನ್ನೆರಡು ಇರುವ ಪತ್ರಿಕೆಗಳು, ನೂರಾ ಹನ್ನೆರಡು ಆಗಬಹುದು. ನಗರ ಸಭೆಯವರು ಹಗಲು ರಾತ್ರಿ ದೀಪ ಉರಿಸಬಹುದು, ಗುಡ್ಡದ ಕಗ್ಗಲ್ಲಿನ ಅದುರಲ್ಲಿ ಕಬ್ಬಿಣವನ್ನು ಆರಿಸುವ ಕಾರ್ಖಾನೆ ತೆರೆದು, ಪ್ರಾಂತದ ಉಕ್ಕಿನ ಉತ್ಪಾದನೆ ಅಧಿಕವಾದೀತು. ಹೀಗೆ ಸ್ಥಿರಬಂಡವಾಳವು ಇದ್ದ ಹಾಗೆ ಇದ್ದಲ್ಲೇ ಇದ್ದರೂ, ಉತ್ಪನ್ನಗಳಲ್ಲಿ ವೈವಿಧ್ಯವೂ, ಅವುಗಳ ಗಾತ್ರದಲ್ಲಿ ವೈಶಾಲ್ಯವೂ ಜನಿಸಬಹುದು. ಚರಬಂಡವಾಳವು ಬಡ್ಡಿಯ ಆಕರ್ಷಣೆಯಿಂದ ಅತಿ ಚಂಚಲವಾಗಿ ಅಂತರರಾಷ್ಟ್ರೀಯ ಪರ್ಯಟನೆ ಮಾಡುವ ಸ್ವಭಾವವುಳ್ಳದು.

**ಸಂಯುಕ್ತ ಉತ್ಪಾದನೆ:**

ಈಗಿನ ಕಾಲದಲ್ಲಿ ಸರಕುಗಳ ಉತ್ಪಾದನೆಯು ಸರ್ವಸಾಮಾನ್ಯವಾಗಿ ಒಂದಕ್ಕಿಂತ ಹೆಚ್ಚು ಅವಯವಗಳ ಉಪಯೋಗದಿಂದ ನಡೆಯುವ ಸಂಯುಕ್ತ ಉತ್ಪಾದನೆ ಎಂದು ಮೊದಲೇ ಹೇಳಿರುವೆವು. ಸಂಯುಕ್ತ ಉತ್ಪಾದನೆಯ ಜವಾಬ್ದಾರಿ ವಹಿಸಿಕೊಂಡ ಸಂಚಾಲಕನಿಗೆ ಮೂರು ಸಮಸ್ಯೆಗಳಿವೆ. (೧) ಅವಯವಗಳಿಗೆ ಕೊಡಬೇಕಾದ ಧಾರಣೆ (೨) ಬಗೆ ಬಗೆಯ ಉತ್ಪಾದನೆಯ ಮಾರ್ಗಗಳಲ್ಲಿ ವಿಧವಿಧವಾದ ದಾಮಾಶಯದಲ್ಲಿ ಅವಯವಗಳನ್ನು ಉಪಯೋಗಿಸುವುದು. (ಅ) ಸರಳ ಉತ್ಪಾದನೆಯ ಸಂಬಂಧದಲ್ಲಿ ಉತ್ಪಾದಿತ ಸರಕಿನ ಧಾರಣೆಯೇ ಅವಯವಗಳ ಧಾರಣೆಯನ್ನು ನಿರ್ಣಯಿಸುವುದು. ಸಂಯುಕ್ತ ಉತ್ಪಾದನೆಯ ಅವಸರದಲ್ಲಿ ಪ್ರತಿಯೊಂದು ಅವಯವಕ್ಕೂ ಎಷ್ಟು ಪ್ರತಿಫಲ ಸಲ್ಲಬೇಕು ಎಂಬುದನ್ನು ಸಂಚಾಲಕನು ನಿರ್ಣಯಿಸಬೇಕು. ಇದು ವಿತರಣಾ ಮೀಮಾಂಸೆಯ ಪ್ರಶ್ನೆ ಆಯಿತು (ಆ) ಒಂದೇ ಸರಕಿನ ತಯಾರಿಯಲ್ಲಿ ಅವಯವಗಳನ್ನು ಬೇರೆ ಬೇರೆ ದಾಮಾಶಯದಲ್ಲಿ ಸಂಯೋಜನೆ ಮಾಡುವುದು ಸಂಯುಕ್ತ ಉತ್ಪಾದನೆಯ ಪ್ರಾಮುಖ್ಯ ಸಮಸ್ಯೆ. ಅವಯುವ ಸಂಯೋಜನೆಯ ಸಮಸ್ಯೆ ಎಂದು ಇದನ್ನು ಕರೆಯೋಣ. (೩) ಮೇಲಿನ ಎರಡರಲ್ಲಿಯೂ ಪೂರೈಕೆಯು ಇದ್ದಂತಿರುವುದೆಂದು ನಂಬಿದೆವು. ಆದರೆ ಪೂರೈಕೆಯಲ್ಲಿ ವ್ಯತ್ಯಾಸ ಉಂಟಾಗುವಾಗ ಅವಯವಗಳ ಧಾರಣೆ ಹೇಗೆ ನಿಲ್ಲುವುದು? ಎಂಬುದು ಸಂಚಾಲಕನ ಮೂರನೆಯ

ಸಮಸ್ಯೆ. ಮೊದಲಿನವು ಅಲ್ಪಾವಧಿಯ ಸಮಸ್ಯೆಗಳಾದರೆ, ಕೊನೆಯದು ದೀರ್ಘಾವಧಿಯ ಪ್ರಶ್ನೆ. ಉದಾ: ಅಲ್ಪಾವಧಿಯಲ್ಲಿ ಬಂಡವಾಳ ಸರಕುಗಳನ್ನು ಬದಲಿಸಲು ಬರುವುದಿಲ್ಲ. ಅವುಗಳಿಗೆ ಕೊಟ್ಟ ಧಾರಣೆಯು ಸ್ಥಿರವಾಗಿಯೇ ಇರುವುದು. ದೀರ್ಘಾವಧಿಯಲ್ಲಿ ಅದೇ ಯಂತ್ರವನ್ನು ಉಪಯೋಗಿಸಬೇಕೆಂದಿಲ್ಲ ಹೊಸ ಯಂತ್ರವು ಅಗ್ಗದಲ್ಲಿ ದೊರೆಯಬಹುದು. ಬಂಡವಾಳ ಸರಕುಗಳ ಕತೆಯೇ ಹೀಗಾದ ಬಳಿಕ, ಇತರ ಅವಯುವಗಳಲ್ಲಿ ಇನ್ನೆಷ್ಟು ಶೀಘ್ರದಲ್ಲಿ ಬದಲಾವಣೆ ಮಾಡಲು ಬರುವುದೆಂದು ಬೇರೆ ಹೇಳಬೇಕಾಗಿಲ್ಲ. ಅವಯುವಗಳನ್ನು ಒಟ್ಟುಕೂಡಿಸುವ ದಾಮಾಶಯವನ್ನು ಬದಲಾಯಿಸಿದರೆ ಉತ್ಪನ್ನದ ಮೇಲೆ ಏನು ಪರಿಣಾಮ? ಎಂಬುದನ್ನು "ಇಳಿಮುಖವಾದ ಪ್ರತಿಫಲದಸೂತ್ರ"ವು ಚರ್ಚಿಸುವುದು

**ಇಳಿಮುಖವಾದ ಪ್ರತಿಫಲದ ಸೂತ್ರ:**

(ಕೃಷಿವಿಧಾನದಲ್ಲಿ ಸಮಕಾಲದಲ್ಲೇ ಪರಿವರ್ತನೆಯು ಆಗದಿದ್ದರೆ) ಜಮೀನು ಕೃಷಿಮಾಡುವಾಗ ಅದಕ್ಕೆ ಹಾಕುವ ಬಂಡವಾಳ, ಪರಿಶ್ರಮಗಳನ್ನು ಯಾವ ದಾಮಾಶಯದಲ್ಲಿ ಹೆಚ್ಚಿಸುತ್ತೇವೋ, ಅದೇ ದಾಮಾಶಯದಲ್ಲಿ ಉತ್ಪನ್ನವೂ ಹೆಚ್ಚುವುದಿಲ್ಲ ಎಂದು ಮಾರ್ಶಲ್ ಇಳಿಮುಖವಾದ ಪ್ರತಿಫಲದ ಸೂತ್ರವನ್ನು ಜಮೀನಿಗೆ ಅನ್ವಯಿಸಿ ಹೇಳಿ ಕೆಲವು ಶಂಕೆಗಳಿಗೆ ಎಡೆಕೊಟ್ಟನು. ಜಮೀನಿಗೆ ಮಾತ್ರ ಈ ನಿಯಮವು ಅನ್ವಯಿಸುವುದೆಂದೂ, ಜಮೀನು ಸ್ಥಿರ ಅವಯುವ, ಉಳಿದುವು ವ್ಯತ್ಯಸ್ತವಾಗುವುವು ಎಂದೂ, ಮಾರ್ಶಲ್‌ನ ದೃಷ್ಟಿಯಲ್ಲಿ ಕ್ಷೀಣವಾಗುವುದು ಸರಾಸರಿ ಪ್ರತಿಫಲವೇ, ಪರಿಸರದ ಪ್ರತಿಫಲವೋ ಎಂದೂ, ಹಲವು ಸಂದೇಹಗಳು ಮೂಡಿದುವು. ಇದಕ್ಕಾಗಿ ನೈಟ್ ಮಹಾಶಯನು ನಿಷ್ಕಳಂಕವಾದ ಶಾಸ್ತ್ರೀಯ ವಿಶ್ಲೇಷಣೆಯನ್ನು ಕೊಟ್ಟಿರುವನು. "ಯಾವುದಾದರೂ ಒಂದು ಉತ್ಪಾದನೆಯ ಕಾರ್ಯದಲ್ಲಿ ಎರಡು ಅವಯುವಗಳನ್ನು ಸಂಯೋಜಿಸುವಾಗ ಪ್ರಥಮ ಅವಸ್ಥೆಯಲ್ಲಿ ಎರಡು ಅವಯುವಗಳ ಏಕಾಂಶ ಉತ್ಪತ್ತಿಯೂ ಅಧಿಕವಾಗುವುದು; ದ್ವಿತೀಯಾವಸ್ಥೆಯಲ್ಲಿ ಸಾಪೇಕ್ಷವಾಗಿ ಹೆಚ್ಚಿಸಿದ ಅವಯುವದ ಏಕಾಂಶ ಉತ್ಪತ್ತಿಯು ಕ್ಷೀಣವಾಗಿ, ಸಾಪೇಕ್ಷವಾಗಿ ಕಡಮೆಮಾಡಿದ ಅವಯುವದ ಏಕಾಂಶ ಉತ್ಪತ್ತಿಯು ವರ್ಧಿಸುವುದು. ಕಟ್ಟಕಡೆಗೆ ತೃತೀ

ಯಾವಸ್ಥೆಯಲ್ಲಿ ಎರಡು ಅವಯುವಗಳಿಂದ ಬರುವ ಉತ್ಪತ್ತಿಯೂ ಕ್ಷೀಣವಾಗುವುದು.

ಪ್ರಪಂಚದಲ್ಲಿ ಪ್ರಥಮ ಮತ್ತು ತೃತೀಯ ಅವಸ್ಥೆಗಳು ಕಾಣಸಿಗುವುದಿಲ್ಲ. ಸಂಯೋಜಿತ ಅವಯುವಗಳ ಪೈಕಿ ಯಾವುದಾದರೂ ಒಂದನ್ನು ಹೆಚ್ಚು ಹೆಚ್ಚಾಗಿ ಉಪಯೋಗಿಸಿದರೆ, ಸರಾಸರಿ ಉತ್ಪತ್ತಿಯೂ, ಪರಿಸರದ ಉತ್ಪತ್ತಿಯೂ, ಎರಡೂ ಕ್ಷೀಣವಾಗುವ ಒಂದು ಸಂದರ್ಭ ಬಂದೇ ಬರುವುದು.



| ಐದು ಜನರನ್ನು ನೇಮಿಸಿರುವ ಎಕರೆಗಳು | ಸಮಗ್ರ ಉತ್ಪತ್ತಿ (ಮಣ) | ಎಕರೆಯೊಂದಕ್ಕೆ ಸರಾಸರಿ ಉತ್ಪತ್ತಿ (ಮಣ) | ಪರಿಸರದ ಉತ್ಪತ್ತಿ |
|---|---|---|---|
| ೦ | ೦ | ? | |
| ೧ | ೧೪೦ | ೧೪೦·೦ | ೧೪೦ |
| ೨ | ೩೦೦ | ೧೫೦ ೦ | ೧೬೦ |
| ೩ | ೪೦೦ | ೧೩೩ ೩ | ೧೦೦ |
| ೪ | ೫೦೦ | ೧೨೫ ೦ | ೧೦೦ |
| ೫ | ೬೦೦ | ೧೨೦·೦ | ೧೦೦ |
| ೬ | ೭೦೦ | ೧೧೬ ೬ | ೧೦೦ |
| ೭ | ೭೮೦ | ೧೧೧ ೪ | ೮೦ |
| ೮ | ೮೪೦ | ೧೦೫·೦ | ೬೦ |
| ೯ | ೯೦೦ | ೧೦೦·೦ | ೬೦ |
| ೧೦ | ೯೪೦ | ೯೪ ೦ | ೪೦ |

ಇಲ್ಲಿ ನಾವು ಪರಿಶ್ರಮ (ಕಾಮುಗಾರರು) ವು ಸ್ಥಿರವಾಗಿರುವುದೆಂದೂ, ಜಮೀನಿನ ವಿಸ್ತೀರ್ಣವನ್ನು ಬದಲಿಸಬಹುದೆಂದೂ ಭಾವಿಸಿಕೊಂಡಿದ್ದೇವೆ. ಪ್ರಥಮ ಅವಸ್ಥೆಯಲ್ಲಿ ಮೂರೆಕರೆ ಜಮೀನು ಬಳಸುವ ತನಕ ಸರಾಸರಿ ಉತ್ಪತ್ತಿಯೂ, ಪರಿಸರದ ಉತ್ಪತ್ತಿಯೂ ಅಧಿಕವಾಗುವುವು ಆ ಮೇಲೆ, ಕೃಷಿ ಮಾಡುವ ಜಮೀನು ವಿಶಾಲವಾದಂತೆ ಸಮಗ್ರ ಉತ್ಪತ್ತಿಯು ಏರುತ್ತಲೇ ಇದ್ದರೂ, ಸರಾಸರಿ ಮತ್ತು ಪರಿಸರದ ಉತ್ಪತ್ತಿಗಳು ಏರುವು ದಿಲ್ಲ, ಇಳಿಯುವುವು ಜಮೀನು ನೂರಾರು ಎಕರೆಯಷ್ಟು ಲಭಿಸಿದರೂ, ಐದು ಜನರ ಪರಿಶ್ರಮಕ್ಕೆ ಒಂದು ಶಾರೀರಿಕವಾದ ಮಿತಿ ಇಲ್ಲವೆ? ಆದು ದರಿಂದ ಅವರು ಮೂರೆಕರೆಯಲ್ಲಿ ಬೇಸಾಯ ಮಾಡುವುದೇ ಉತ್ತಮ. ನಾಲ್ಕನೇ, ಐದನೇ, ಆರನೇ ಎಕರೆಗಳಲ್ಲಿ ಕೆಲಸಮಾಡಿದ ಹಾಗೆ ಸರಾಸರಿ ಉತ್ಪತ್ತಿಯೂ ಪರಿಸರದ ಉತ್ಪತ್ತಿಯೂ ಕಡಮೆಯಾಗುವುವಷ್ಟೇ ಅಲ್ಲ, ಪರಿಸರದ ಉತ್ಪತ್ತಿಯು ಸರಾಸರಿ ಉತ್ಪತ್ತಿಗಿಂತ ಹೆಚ್ಚಾಗಿ ಪತನವಾಗು ವುದನ್ನೂ ಗಮನಿಸಬೇಕು. ಒಟ್ಟಾರೆ ಮೇಲೆ, ಅವಯುವ ಸಂಯೋಜನೆಯ

ಸಮಯ ಯಾವುದಾದರೂ ಒಂದು ಅವಯವವನ್ನು ಹೆಚ್ಚು ದಾಮಾಶಯದಲ್ಲಿ ಉಪಯೋಗಿಸಿದಲ್ಲಿ, ಒಂದು ನಿಶ್ಚಿತ ಬಿಂದುವು ಕಳೆದ ಬಳಿಕ ಆ ಅವಯವದ ಸರಾಸರಿ ಹಾಗೂ ಪರಿಸರದ ಉತ್ಪತ್ತಿಗಳೆರಡೂ ಕ್ಷೀಣಿಸುವುವು ಎಂಬುದು ಇಳಿಮುಖವಾದ ಪ್ರತಿಫಲ ಸೂತ್ರದ ಸಾರ

**ಉದ್ಯಮಗಳಿಗೆ ಅವಯವಗಳನ್ನು ಹಂಚಿ ಹಾಕುವುದು:**

ಐದು ಜನಕ್ಕೆ ಮೂರೆಕರೆಗಿಂತ ಹೆಚ್ಚು ಜಮೀನು ಕೊಡುವುದು ಬುದ್ಧಿವಂತಿಕೆಯಲ್ಲ ನಾಲ್ಕನೆಯ ಎಕರೆಯಲ್ಲಿ ಬೇರೊಂದು ಉತ್ಪತ್ತಿಯನ್ನು ಬೆಳೆಸಬಹುದು. ಬೇರೆ ಸರಕಿನ ಪರಿಸರದ ಉತ್ಪತ್ತಿಯು ಇದಕ್ಕಿಂತ ಅಧಿಕವಾಗಿರಬಹುದು. ಭೂಮಿಯನ್ನುಪಯೋಗಿಸುವ ಎಲ್ಲ ಉದ್ಯಮಗಳಲ್ಲಿಯೂ, ಭೂಮಿಯಿಂದ ಬರುವ ಪರಿಸರದ ಉತ್ಪತ್ತಿಯು ಸಮಾನವಾಗುವ ವರೆಗೆ ದಾಮಾಶಯದಲ್ಲಿ ವ್ಯತ್ಯಾಸ ಉಂಟಾಗುವುದು ಸಮಾಜವು ಯಾವುದೇ ಅವಯವದ ಮಟ್ಟಿಗೆ, ಪ್ರತಿಯೊಂದು ಉದ್ಯಮದಲ್ಲಿಯೂ, ಒಂದೇ ಪರಿಸರದ ಉತ್ಪತ್ತಿಯನ್ನು ಪಡೆದರೆ ಆಗ ಸಮತೋಲ ಸ್ಥಿತಿಯಿದೆ ಎಂದು ನಾವು ಎಣಿಸಬಹುದು. ವಿಶಾಖಪಟ್ಟಣದಲ್ಲಿ ಹಡಗಿನ ತಯಾರಿಯು ಆರಂಭವಾದಾಗ ಸಾವಿರ ಜನ ಕೆಲಸಗಾರರಿಗೆ ಉದ್ಯಮ ದೊರೆಯಿತೆನ್ನೋಣ ಈ ಕಾಮಗಾರರು ಮೊದಲು ಬೀಡಿ ಕಾರ್ಖಾನೆಯಲ್ಲಿದ್ದವರಾದರೆ ಅವರು ಹಡಗಿನ ಕಾರ್ಖಾನೆಯಲ್ಲಿ ತಯಾರಿಸುವ ಉತ್ಪತ್ತಿಯ ಪರಿಸರದ ಮೌಲ್ಯವು ಬೀಡಿ ಕಾರ್ಖಾನೆಯಲ್ಲಿದ್ದುದಕ್ಕಿಂತ ಹೆಚ್ಚಿರಬೇಕು. ಹಾಗಾದಲ್ಲಿ ಮಾತ್ರ ಅವರನ್ನು ಬೀಡಿ ಕಾರ್ಖಾನೆಯಿಂದ ಆಕರ್ಷಿಸಿಕೊಂಡುದು ಸಾರ್ಥಕವಾಗುವುದು. ಒಟ್ಟು ಸಮಾಜದ ದೃಷ್ಟಿಯಿಂದ ಲಾಭದಾಯಕವಾಗುವುದು ಇದೇ ವಾದಸರಣಿಯನ್ನು ಭೂಮಿ, ಪರಿಶ್ರಮ ಮಾತ್ರವಲ್ಲದೆ ಇತರ ಅವಯವಗಳಿಗೂ ಅನ್ವಯಿಸಬಹುದು.

**ಆರೋಹಣೋನ್ಮುಖ ಪ್ರತಿಫಲ, ಅಚಲ ಪ್ರತಿಫಲ:**

ಇಳಿಮುಖವಾದ ಪ್ರತಿಫಲವು ಉತ್ಪಾದನೆಗೆ ಸಾರ್ವತ್ರಿಕವಾಗಿ ಅನ್ವಯಿಸುವ ಸೂತ್ರವಾದರೂ, ಕೆಲವು ಸಂದರ್ಭಗಳಲ್ಲಿ ಅವಯವ ಸಂಯೋಜನೆಯ ದಾಮಾಶಯವನ್ನು ಹೆಚ್ಚು ಕಡಿಮೆ ಮಾಡಿದಾಗ ಪ್ರತಿಫಲವು ಏರಿ

ದಂತೆ ತೋರುವುದುಂಟು ಬೃಹತ್ ಉತ್ಪಾದನೆಯ ವಿಷಯದಲ್ಲಿ ಈ ಮಾತು ಅನೇಕ ಸಲ ಸತ್ಯವಾಗುವುದು ಇದಕ್ಕೆ ಕೆಳಗಿನ ಕಾರಣಗಳನ್ನು ಕೊಡಬಹುದು (೧) ಅತಿ ಅಗ್ಗದ ವೆಚ್ಚದಲ್ಲಿ ತಯಾರಿಸಲು ಸಾಧ್ಯವಿರುವಂಥ ಸ್ಥಳಕ್ಕೆ ಉದ್ಯಮವು ಹೋಗಬಹುದು ಅಥವಾ ಅಲ್ಲಿ ಇರಬಹುದು (೨) ಹೊಸಬಗೆಯ ತಾಂತ್ರಿಕ ಪ್ರಗತಿಯಿಂದ ಬಂದ ಯಂತ್ರಗಳನ್ನು ಬಳಸಿಕೊಂಡರೆ ಸರಾಸರಿ ಪ್ರತಿಫಲವೂ, ಪರಿಸರದ ಪ್ರತಿಫಲವೂ ಇಳಿಯುವ ಬದಲು ಏರಬಹುದು. (೪) ಕಚ್ಚಾ ಮಾಲನ್ನೋ ಪರಿಶ್ರಮವನ್ನೋ ಮಿತವ್ಯಯದಿಂದ ಉಪಯೋಗಿಸಬಹುದು. (೪) ರಕಮಾಗಿ ಕೊಳ್ಳುವಾಗಲೂ, ಮಾರುವಾಗಲೂ ಉಂಟಾಗುವ ಮಿತವ್ಯಯ (೫) ಕೌಶಲವನ್ನು ಮಿತವ್ಯಯದಿಂದ ಬಳಸುವುದು (೬) ಸಂಚಾಲಕರ ಮಿತವ್ಯಯ (೭) ಅವಿಭಾಜ್ಯ ಅವಯುವಗಳು ದೊಡ್ಡ ಕಡೆಯುವ ಕಲ್ಲೊಂದನ್ನು ನಾಲ್ಕು ಜನ ಹೊರಲಾರರು. ಎಂಟು ಜನ ಹೊತ್ತಾಗ ಕಲ್ಲು ಇನ್ನು ನಾಲ್ಕು ಮಣ ಭಾರ ಇದ್ದರೂ ನಡೆಯುವುದು—ಎನ್ನುವಾಗ ಪರಿಶ್ರಮವನ್ನು ಎರಡು ಪಾಲಷ್ಟು ಏರಿಸಿದರೆ ಉತ್ಪತ್ತಿಯು ಎರಡು ಪಾಲಿಗಿಂತ ಹೆಚ್ಚು ಪ್ರಮಾಣದಲ್ಲಿ ಬೆಳೆಯುವುದನ್ನು ನೋಡುತ್ತೇವೆ

ನಿರ್ದಿಷ್ಟ ಉಪಯೋಗಕ್ಕೆ ಬರುವ ಅವಯುವಗಳ ವಿಷಯದಲ್ಲಿ ಏರುವ ಮತ್ತು ಅಚಲ ಪ್ರತಿಫಲಗಳಿಗೆ ಅವಕಾಶ ಹೆಚ್ಚು ಉಳಿದ ಸಮಯ ಸಂಪೂರ್ಣ ಉಪಯೋಗಕ್ಕೆ ಬಾರದೆ ಹೋದರೂ, ಸಾಯಂಕಾಲವೂ ಮುಂಜಾನೆಯೂ ಇರುವ ಗಲಾಟೆಯನ್ನು ನಿರ್ವಹಿಸಿಕೊಂಡು ಹೋಗಲು ಹೊಟೇಲಿನಲ್ಲಿ ಹೆಚ್ಚು ಕಾಮಗಾರರನ್ನಿಡಬೇಕಾಗುವುದು ಒಂದು ಹಡಗು ಈ ಹಿಂದೆ ತನ್ನ ಸಾಮರ್ಥ್ಯಕ್ಕಿಂತ ಕಡಿಮೆ ಕೆಲಸ ಮಾಡುತ್ತಿತ್ತೆಂದು ಎಣಿಸುವ. ಅದರಲ್ಲಿನ ಖಲಾಸಿಗಳನ್ನು ೫% ನಷ್ಟು ಹೆಚ್ಚಿಸಿದರೆ, ೫% ಗಿಂತಲೂ ಹೆಚ್ಚು ಪ್ರವಾಸಿಗಳನ್ನೋ ಸರಕುಗಳನ್ನೋ ತುಂಬಿಸಿಕೊಳ್ಳಲು ಹಡಗು ಶಕ್ತವಾಗುವುದು. ಇಲ್ಲಿ ಹೆಚ್ಚು ಪರಿಶ್ರಮವನ್ನು ಉಪಯೋಗಿಸಿದರೂ, ಏಕಾಂಶದ ಪ್ರತಿಫಲವು ಇಳಿಯುವುದಿಲ್ಲ ಅದು ಅಚಲವಾಗಿಯೋ ಅಥವಾ ಏರುತ್ತಲೋ ಇರುವುದು.

**ಬಂಡವಾಳಗಾರ ಸಮಾಜದ ಮುಖ್ಯ ಲಕ್ಷಣಗಳು:**

ಹತ್ತೊಂಭತ್ತನೆಯ ಶತಮಾನದಲ್ಲಿ ಬ್ರಿಟನ್, ಜರ್ಮನಿ, ಫ್ರಾನ್ಸ್ ಸಂಯುಕ್ತರಾಜ್ಯ ಮುಂತಾದ ದೇಶಗಳು ಬಂಡವಾಳವನ್ನು ಬೆಳೆಯಿಸಿ ಕೊಂಡು ಬಂದಮೇಲೆ ಬಂಡವಾಳಗಾರ ಸಮಾಜದ ಮುಖ್ಯ ಲಕ್ಷಣಗಳು ರೂಪಿಸಲ್ಪಟ್ಟವು. ಸಮಾಜವಾದದ ಸುಂಟರಗಾಳಿಯ ಇದಿರು ಹೋರಾಡಲು ಬಂಡವಾಳಗಾರ ಸಮಾಜದ ಪುರಸ್ಕರ್ತರು ತಮ್ಮ ಸಮಾಜದ ಲಕ್ಷಣಗಳನ್ನು ಜನರ ಸಮ್ಮುಖದಲ್ಲಿ ಇಡಬೇಕಾಯಿತು ಅವರು ಎತ್ತಿ ತೋರಿಸಿದ ಲಕ್ಷಣಗಳು ಮೂರು

(೧) ಆಸ್ತಿವಾಸ್ತಿಗಳ ಮೇಲಿರುವ ಖಾಸಗಿ ಒಡೆತನ - ಅಂಗಡಿ, ಮನೆ, ಜಮೀನು ಎಲ್ಲ ನನ್ನವು ಎಂದು ಹೇಳಲು ಬಂಡವಾಳಗಾರ ಸಮಾಜದಲ್ಲಿ ವ್ಯಕ್ತಿಗೆ ಶಾಸನಬದ್ಧವಾದ ಅಧಿಕಾರ ಇರುವುದು ಅಂಚೆ, ರೈಲು ಮುಂತಾದ ಕೆಲವು ಇಲಾಖೆಗಳು ರಾಷ್ಟ್ರದ ಒಡೆತನದಲ್ಲಿದ್ದರೂ, ದೈನಂದಿನ ವ್ಯವಹಾರವಾಣಿಜ್ಯಗಳ ವಿಷಯದಲ್ಲಿ ಖಾಸಗಿ ಒಡೆತನವು ನಡೆಯಿತೋ ಬಂಡವಾಳಗಾರ ಸಮಾಜಕ್ಕೆ ಅದರಿಂದ ನ್ಯೂನವಿಲ್ಲ (೨) ಸಾಹಸ ಸ್ವಾತಂತ್ರ್ಯ - ಬೀದಿಯಲ್ಲಿ ಬೀಡಾ ಬೀಡಿ ಮಾರುವುದಕ್ಕೂ, ಬಳಿಯಲ್ಲೇ ಅಂಗಡಿಕಟ್ಟಿ ಕೂಡುವುದಕ್ಕೂ, ತನ್ನ ಸರಕನ್ನು ಬೊಬ್ಬಿಟ್ಟು ಜಾಹೀರಾತು ಪಡಿಸುವುದಕ್ಕೂ, ಇಷ್ಟವೆನಿಸಿದ ಉದ್ಯೋಗಕ್ಕೆ ಸೇರುವುದಕ್ಕೂ ಯಾರಿಗೆ ಯಾರ ಕಟ್ಟುಪಾಡೂ ಇಲ್ಲ. (೩) ಆಯ್ಕೆಯ ಸ್ವಾತಂತ್ರ್ಯ.– ಮಾರ್ಕೆಟಿನಲ್ಲಿರುವ ನೂರಾರು ಸರಕುಗಳಲ್ಲಿ ಯಾವುದನ್ನು ಬೇಕಾದರೂ ಕೊಳ್ಳಬಹುದು, ಬಿಡಬಹುದು ಕೊಹಿನೂರು ಮಿಲ್ಲಿನ ಬಟ್ಟೆಯನ್ನೇ ಕೊಳ್ಳಬೇಕೆಂಬ ಒತ್ತಾಯವಿಲ್ಲ, ಬಿನ್ನಿಯವರದನ್ನು ವರ್ಜಿಸಬೇಕೆಂಬ ತಿರಸ್ಕಾರವೂ ಇಲ್ಲ. ನಾಲ್ಕು ದರ್ಜೆಯ ತೊಗರಿಬೇಳೆಗಳಲ್ಲಿ ಯಾವುದನ್ನು ಬೇಕಾದರೂ ಆಯ್ದುಕೊಳ್ಳುವ ಸ್ವಾತಂತ್ರ್ಯವು ಜನರಿಗೆ ಇರುತ್ತದೆ.

**ಅನುಭೋಗಿಯೇ ಸಮ್ರಾಟ:**

ಬಂಡವಾಳಗಾರ ಪದ್ಧತಿಯಲ್ಲಿ ಅನುಭೋಗಿಗೆ ಸಮ್ರಾಟ ಪದವಿ ದೊರೆತಿದೆ. ಅನುಭೋಗಿ ಸರಕುಗಳನ್ನೇ ತಯಾರಿಸುವುದು ಉತ್ಪಾದ

ನೆಯ ಚರಮಲಕ್ಷ್ಯವೆಂಬುದನ್ನು ಈ ಹಿಂದೆ ನೋಡಿರುವೆವು. ಅನುಭೋಗಿಗಳು ಅರ್ಧ ಕೈಯ ಬುಶ್‌ಕೋಟುಗಳನ್ನು ಮೆಚ್ಚಿ, ಆ ಮೆಚ್ಚಿಗೆಯನ್ನು ತಾವು ಕೊಡುವ ಧಾರಣೆಯಲ್ಲಿ ತೋರಿಸಿದರೆ, ಬುಶ್‌ಕೋಟುಗಳ ಉತ್ಪಾದನೆಯು ಸಂಚಾಲಕರ ಗುರಿಯಾಗುವುದು ಮಹಿಳಾಮಣಿಯರು ಚರ್ಮದ ಬೂಟುಗಳನ್ನು ಬಿಟ್ಟು, ಪ್ಲಾಸ್ಟಿಕ್ ಬೂಟುಗಳನ್ನು ಅಪೇಕ್ಷಿಸಿದರೆ ಉತ್ಪಾದಕರು ಅವರ ಮನೋನುವರ್ತಿಗಳಾಗಿ ನಡೆಯಬೇಕು. ಚಿಲ್ಲರೆ ಅಂಗಡಿಯವರು ಬುಶ್‌ಕೋಟು, ಪ್ಲಾಸ್ಟಿಕ್‌ಬೂಟುಗಳ ಅಧಿಕ ಬೇಡಿಕೆಯನ್ನು ತಾವು ಕಳಿಸುವ ಬೇಡಿಕೆ ಪಟ್ಟಿಯಲ್ಲಿ ವ್ಯಕ್ತಪಡಿಸಿ ರಕಮು ವ್ಯಾಪಾರಿಗಳಿಗೆ ಕಳಿಸುತ್ತಾರೆ ರಕಮು ವ್ಯಾಪಾರಿಗಳು ಅಲ್ಲಿಂದ ಕಾರ್ಖಾನೆಗೆ ತಿಳಿಸುತ್ತಾರೆ. ಪ್ರಾಯಃ ಸಂಚಾಲಕರು ಈ ರೀತಿ ಬೇಡಿಕೆ ಪಟ್ಟಿಯು ಬರುವ ತನಕ ಕಾಯುವುದಿಲ್ಲ; ಅನುಭೋಗಿಗಳ ಬೇಡಿಕೆ ಈ ಕಡೆಗೆ, ಇಷ್ಟು ಮಟ್ಟಿಗೆ, ಒಲಿದಿರಬಹುದು ಎಂದು ಮೊದಲೇ ನಿರೀಕ್ಷಣೆಮಾಡಿ, ಸರಕು ತಯಾರಿಸಿಟ್ಟಿರುತ್ತಾರೆ ಆದರೂ ಅನುಭೋಗಿಯೇ ಸಮ್ರಾಟನಾಗುತ್ತಾನೆ ಏಕೆಂದರೆ ಸಂಚಾಲಕನ ನಿರೀಕ್ಷಣೆ ತಪ್ಪಿದರೆ, ಅವನು ನಷ್ಟದಲ್ಲಿ ಬಿದ್ದು ಆ ಮೇಲೆ ಅವನು ಬೇರೆ ಸರಕು ಉತ್ಪಾದಿಸಬಹುದು ಆದರೆ ಅನುಭೋಗಿಯ ಸಮ್ರಾಟತನವು ನಿರಂಕುಶವಾದುದಲ್ಲ ಅದಕ್ಕೂ ಕೆಲವು ಮಿತಿಗಳಿವೆ (೧) ಒಮ್ಮೆಲೆ ಒಂದೂರಿನ ಗಿರಾಕಿಗಳು ಹತ್ತುಸಾವಿರ ಬುಶ್‌ಕೋಟು ಬೇಕೆಂದರೆ ಆ ಬೇಡಿಕೆಯನ್ನು ಪೂರೈಸಲು ಸಾಧ್ಯವಿಲ್ಲ ದರ್ಜಿಗಳು ಸಿಗಲಿಕ್ಕಿಲ್ಲ ಇದ್ದ ಬಟ್ಟೆ ಸಾಕಾಗಲಿಕ್ಕಿಲ್ಲ, ಬೇಡಿಕೆಯು ಎಷ್ಟಿದ್ದರೂ ನಾವು ಉತ್ಪಾದನೆಯ ಭೌತಿಕ ಎಲ್ಲೆಯನ್ನು ಮೀರಲಾರೆವು. ಹಾಗೆ ಇರುವ ಎಲ್ಲಾ ಬಟ್ಟೆಯಲ್ಲಿ ಬುಶ್‌ಕೋಟು ತಯಾರಿಸಿದರೆ ಕೋಟಿನ ಕೆಳಗೆ ಉಡುವುದೇನನ್ನು? (೨) ಮದರಾಸು ಪ್ರಾಂತ್ಯದಲ್ಲಿ ಈಗ ಅನುಭೋಗಿ ಸಮ್ರಾಟ ಕಳ್ಳುಕುಡಿಯುವೆನೆಂದರೂ ಅವನಿಗೆ ಆ ಸರಕು ಮಾರ್ಕೆಟಿನಲ್ಲಿ ಸಿಗಲಿಕ್ಕಿಲ್ಲ. ರಾಷ್ಟ್ರವು ಸರಾಯಿ, ಅಫೀಮು, ಗಾಂಜಾ, ಅಶ್ಲೀಲಚಿತ್ರ, ಮುಂತಾದುವುಗಳ ಉತ್ಪಾದನೆಗೆ ಮುಟ್ಟುಗೋಲು ಅಥವಾ ನಿಯಂತ್ರಣ ಹಾಕಬಹುದು (೩) ಬೆಂಕಿಪೆಟ್ಟಿಗೆ ತಯಾರಿಸುವ 'ಗುತ್ತಿಗೆ' ಒಬ್ಬ ವ್ಯಕ್ತಿಗೆ ಇರುತಿದ್ದರೆ ಬೆಂಕಿಪೆಟ್ಟಿಗೆಗೆ ನಾಲ್ಕಾಣೆಯಾದರೂ ಅನುಭೋಗಿ

ಸಮ್ರಾಟನು ಅದನ್ನು ಕೊಳ್ಳುವಾಗ ನಾಲ್ಕಾಣೆ ಕೊಡಲೇಬೇಕು. ಸರಕಿನ ಉತ್ಪಾದನೆಯ ವಿಶಿಷ್ಟ ಹಕ್ಕು ಅಥವಾ ಒಡೆತನವು ಒಂದು ಸಂಸ್ಥೆಗೆ ಇದ್ದರೆ, ಆ ಪದ್ಧತಿಗೆ 'ಮೊನೊಪಲಿ' ಎನ್ನುವರು. 'ಮೊನೊಪಲಿ'ಯ ಸಂದರ್ಭಗಳಲ್ಲಿ ಅನುಭೋಗಿಯ ಆಯ್ಕೆಗೆ ತುಂಬಾ ಪರಿಮಿತಿಗಳಿವೆ. (೪) ಬಂಡವಾಳಗಾರ ಸಮಾಜದಲ್ಲಿ ಶ್ರೀಮಂತರ ಬೇಡಿಕೆಯ ವಿಲಾಸ ಸಾಮಗ್ರಿಗಳು ಉತ್ಪಾದಿತವಾಗಿ, ಬಡವರಿಗೆ ಅಗತ್ಯವಾದ ಸರಕುಗಳು ಕೆಲವು ತಯಾರಾಗದೆ ಹೋಗಬಹುದು ಭಾರತದಲ್ಲಿ ಮೂವತ್ತೈದು ಕೋಟಿಯಲ್ಲಿ ಹತ್ತುಲಕ್ಷ ಜನ ಮೋಟರಿಡುವವರ ಬೇಡಿಕೆಗೋಸ್ಕರವೇ ಮೋಟರು ಉತ್ಪಾದನೆಯಾಗಬೇಕು ಮೋಟರು ತಯಾರಿಕೆಯಲ್ಲಿ ಉಪಯೋಗಿಸಲಾಗುವ ಅವಯವಗಳನ್ನು ಔಷಧಗಳ ತಯಾರಿಗೆ ಉಪಯೋಗಿಸಿದಲ್ಲಿ ಜನರಿಗೆ ಹೆಚ್ಚು ಉಪಕಾರವಾಗುವುದು. (೫) ವ್ಯಕ್ತಿಯ ವರಮಾನವೂ ಅವನ ಸಾಮ್ರಾಜ್ಯದ ಎಲ್ಲೆಯನ್ನು ನಿಶ್ಚಯಿಸುವುದು.

ಅನುಭೋಗಿಗಳು ಉಳಿತಾಯದ ಕಡೆಗೆ ಒಲಿದರೆಂದು ಭಾವಿಸುವ ಆಗವರು ಅನುಭೋಗಿ ಸರಕುಗಳನ್ನು ಕೊಳ್ಳುವುದು ಕಡಮೆಮಾಡಿ ತಾವು ಉಳಿಸಿದ ಹಣವನ್ನು ಇನ್ವೆಸ್ಟ್‌ಮಾಡಲು ಸಿದ್ಧರಾಗುವರು. ಅನುಭೋಗಿ ಸರಕುಗಳ ಉತ್ಪಾದನೆಯಲ್ಲಿ ಮಗ್ನವಾಗಿದ್ದ ಅವಯವಗಳು ಅಲ್ಲಿಂದ ಹೊರಟು ಯಂತ್ರ ಸಲಕರಣೆಯೇ ಮೊದಲಾದ ಬಂಡವಾಳ ಸರಕುಗಳನ್ನು ತಯಾರಿಸುವ ಕೇಂದ್ರಗಳಿಗೆ ಸಂಚಲಿಸುವುವು ಅನುಭೋಗಿಗಳ ಬೇಡಿಕೆಯನ್ನನುಸರಿಸಿ ಉತ್ಪಾದನೆಯ ಹಂದರವು ಹೆಚ್ಚು ಹೆಚ್ಚು ಬಂಡವಾಳಮಯವಾಗುವುದನ್ನು ಇಲ್ಲಿ ನಾವು ನೋಡುತ್ತೇವೆ.

## ಸ್ವತಂತ್ರ ಸಮಾಜದ ಸೂತ್ರಧಾರ:

ಸಂಚಾಲಕನು ಸ್ವತಂತ್ರ ಬಂಡವಾಳಗಾರ ಸಮಾಜದ ಸೂತ್ರಧಾರನು. ಯಾವ ಉದ್ಯಮ ಆರಂಭಿಸಬೇಕು? ಯಾವ ಸರಕನ್ನು ಉತ್ಪಾದಿಸಬೇಕು? ಕಾರ್ಖಾನೆಯ ಗಾತ್ರವು ಎಷ್ಟಿರಬೇಕು? ಫರ್ಮಿನ ಗಾತ್ರ ಯಾವುದಾದೀತು? ಯಾವ ಉತ್ಪಾದನೆಯ ಕ್ರಮವನ್ನು ಅನುಸರಿಸಬೇಕು? ಎಂಬುದನ್ನು ನಿರ್ಣಯಿಸುವ ಜವಾಬುದಾರಿ ಸಂಚಾಲಕನದು. ಉದ್ಯಮಗಳ ನಷ್ಟ

ಸಂಭವವನ್ನು ಹೊರುವವನೂ ಅವನೇ. ಲಾಭದಷ್ಟು ಚಂಚಲವಾದ ವರಮಾನ ಬೇರಿಲ್ಲ ಬಟ್ಟೆಯ ಗಿರಣಿಗಳಲ್ಲಿ ೧೯೪೦ರಿಂದ ೪೫ರ ತನಕ ಹುಟ್ಟಿದ ಲಾಭವು ಈಗ ಇಲ್ಲವೆಂದು ಮುಂಬೈಯ ಗಿರಣಿಯೊಡೆಯರು ದೂರಿಡುತ್ತಿದ್ದಾರೆ ನಾಳೆ ನಷ್ಟಬಂದರೂ, ಅದನ್ನು ಒಮ್ಮೆಗೆ ಆತನೇ ಹೊರಬೇಕು ತನ್ನ ವರಮಾನ ಯಾವ ವಿಧವಾಗಿ ಅಧಿಕವಾಗಬಹುದು ಎಂಬುದೇ ಉತ್ಪಾದಕನಿಗಿರುವ ಚಿಂತೆ. ಹಾಗಿರುವುದು ಅನುಭೋಗಿಗಳಿಗೂ ಒಳ್ಳೆಯದು ಪರಿಪೂರ್ಣ ಮೇಲಾಟದ ಪರಿಸ್ಥಿತಿಯಲ್ಲಿ ಉತ್ಪಾದಕನ ಸ್ವಾರ್ಥಪೂರಿತ ಧೋರಣೆಯೂ, ಅನುಭೋಗಿಗಳ ಬಯಕೆಯೂ, ಒಂದುಗೂಡುವುವು ಅನುಭೋಗಿಗಳು ಕೇಳಿದ ಸರಕನ್ನು ಕೊಡುವುದರಿಂದಲೇ ಅವನಿಗೆ ಅತ್ಯಧಿಕ ಲಾಭವು ಬರುವುದು. ಅನುಭೋಗಿಗಳು ಸರಕಿಗೆ ಯಾವ ಮೌಲ್ಯ ಕಟ್ಟಿದ್ದಾರೆ ಎಂಬುದು ಆ ಸರಕು ಉತ್ಪಾದಿಸುವ ಅವಯುವಗಳಿಗೆ ಅವರು ಸಲ್ಲಿಸುವ ಧಾರಣೆಯಮೇಲೆ ಹೊಂದಿಕೊಂಡಿರುವುದರಿಂದ A ಸರಕಿನ ಉತ್ಪಾದನೆಯಲ್ಲಿದ್ದ ಅವಯುವಗಳನ್ನು B ಸರಕಿಗೆ ವರ್ಗಾಯಿಸಿ, ಪರಿಸರದ ಉತ್ಪತ್ತಿಯನ್ನು ಹೆಚ್ಚಿಸಿದರೆ, ಇದರರ್ಥವೇನು? ಅನುಭೋಗಿಗಳು Bಯನ್ನು ಮೆಚ್ಚುತ್ತಾರೆ ಎಂದು ತಾನೆ? ಸಂಚಾಲಕನ ವರಮಾನವು ಹೆಚ್ಚುವಾಗ ಅನುಭೋಗಿಯ ಬಯಕೆಯೂ ಸಮರ್ಪಕವಾಗಿ ಈಡೇರುವುದು ಇಂತು ಸಂಚಾಲಕರ ಲಾಭದ ಬಯಕೆಯನ್ನೂ ಇದ್ದ ಅವಯುವಗಳಿಂದ ಉತ್ತಮ ತೃಪ್ತಿವಡೆಯಬೇಕೆನ್ನುವ ಅನುಭೋಗಿಗಳ ಬಯಕೆಯನ್ನೂ ಸಮನ್ವಯಗೊಳಿಸುವ ಯಂತ್ರಕ್ಕೆ 'ಧಾರಣೆಯ ಯಂತ್ರ' ಎನ್ನುವರು. ಅಪರಿಪೂರ್ಣ ಮೇಲಾಟದಿಂದ ಇಂಥ ಸಮನ್ವಯವು ಭಂಗವಾಗುವುದನ್ನು ಮುಂದೆ ವಿವರಿಸುವ.

**ತಟಸ್ಥ ಮೌಲ್ಯ:**

ಉದ್ಯಮದಲ್ಲಿ ಪರಿಪೂರ್ಣ ಮೇಲಾಟವು ನಡೆಯಬೇಕಾದರೆ ಅನೇಕ ಫರ್ಮುಗಳು ಇರತಕ್ಕುದು. ಒಂದೇ ಬಗೆಯ ಸರಕನ್ನು ತಯಾರಿಸಲು ಬಂಡವಾಳಗಾರ ಸಮಾಜದಲ್ಲಿ ಅನೇಕ ಫರ್ಮುಗಳಿರುತ್ತವೆ. ಇವುಗಳನ್ನು ಒಟ್ಟಾಗಿ ಉದ್ಯಮವೆಂದೂ ಪ್ರತ್ಯೇಕ ಪ್ರತ್ಯೇಕವಾಗಿ ಫರ್ಮುಗಳೆಂದೂ ಕರೆಯುವರು. ಒಂದು ಫರ್ಮು ತಯಾರಿಸುವ ಸರಕು ಇನ್ನೊಂ

ದು ಫರ್ಮಿನ ಸರಕಿನ ಹಾಗೆಯೇ ಇರುವುದು ಸಾಧ್ಯವಿಲ್ಲ. ಇಂಪೀರಿಯಲ್ ಕೆಮಿಕಲ್‌ನವರ ಬಣ್ಣವೂ, ಜರ್ಮನ್ ಡಸ್ಸೆಲ್ ಡಾರ್ಫ್ ಬಣ್ಣವೂ, ಒಂದೇ ಉದ್ಯಮಕ್ಕೆ ಸೇರಿದವುಗಳಾದರೂ ಭಿನ್ನ ಭಿನ್ನ ಸರಕುಗಳೆಂದು ಗ್ರಾಹಕರು ಎಣಿಸುವುದಾದರೆ ಅವು ಬೇರೆ ಬೇರೆ ಸರಕುಗಗಳಾಗುತ್ತವೆ. ಆದರೂ ಅವು ಬಣ್ಣದ ಉದ್ಯಮವೆಂಬ ಒಂದೇ ಉದ್ಯಮಕ್ಕೆ ಸೇರಿದುವು ತಾನೇ ಒಂದು ಫರ್ಮಿನ ಸರಕಿಗೆ, ಉದಾ:-ಫ್ಲೆಕ್ಸ್ ಬೂಟಿಗೆ ಬೇಡಿಕೆ ಅಧಿಕವಾದರೆ, ಬಾಟಾ ಬೂಟಿನ ಕಡೆಯಿಂದ ಚರ್ಮ, ಪರಿಶ್ರಮ ಮುಂತಾದ ಅವಯವಗಳು ಅತ್ತಕಡೆ ಚಲಿಸುವುವು. ಫ್ಲೆಕ್ಸಿನವರೇ ಆದರೂ ತಾವು ಹಿಂದೆ ಉಪಯೋಗಿಸದೆ ಬಿಟ್ಟ ಯಂತ್ರ ಸಾಮರ್ಥ್ಯವನ್ನು ಬಳಸಿಕೊಳ್ಳಬಹುದು

ನಾವು ದೀರ್ಘಾವಧಿಯಲ್ಲಿ ಸಮತೋಲ ಧಾರಣೆಯು ರೂಪುಗೊಳ್ಳುವ ವಿಧಾನವನ್ನು ವಿಮರ್ಶಿಸುತ್ತಿದ್ದೇವೆ. ಅಂದರೆ, ಪೂರೈಕೆಯು ಬೇಕಾದಂತೆ ಬದಲಾಗುವ ಪರಿಸ್ಥಿತಿ ಇರುವಲ್ಲಿ ಮೌಲ್ಯ ನಿರ್ಣಯವು ಹೇಗೆ ನಡೆಯುವುದು? ಎಂಬುದನ್ನು ಪರಿಶೀಲಿಸುತ್ತಿದ್ದೇವೆ ದೀರ್ಘಾವಧಿಯಲ್ಲಿಯೂ ಬೇಡಿಕೆ ಪೂರೈಕೆಗಳು ಒಂದಕ್ಕೊಂದು ಸಮಾನವಾಗಿರುವುದು ಅನಿವಾರ್ಯವಾಗಿದೆ. ಮೊದಲು ಪೂರೈಕೆಯಲ್ಲಿ ವ್ಯತ್ಯಾಸ ಉಂಟಾಗಲು ಕಾರಣವೇನೆಂದು ನೋಡುವ ಅನೇಕ ಫರ್ಮುಗಳ ಉತ್ಪಾದನೆಯೇ, ಒಂದು ಉದ್ಯಮದ ಉತ್ಪಾದನೆ ಎಲ್ಲ ಉತ್ಪಾದಕರ ಸಮತೋಲ ಸ್ಥಿತಿಯನ್ನು 'ಸಂಪೂರ್ಣ ಸಮತೋಲ ಸ್ಥಿತಿ'ಎಂದೂ, ಪ್ರತಿಯೊಂದು ಫರ್ಮಿನ ಸಮತೋಲವನ್ನು 'ವ್ಯಕ್ತಿ ಸಮತೋಲ' ವೆಂದೂ ವಿಂಗಡಿಸುತ್ತಾರೆ.

ಒಂದು ಫರ್ಮಿನ ಅಥವಾ ಒಬ್ಬ ಸಂಚಾಲಕನ ಗುರಿ ಏನೆಂದು ನಮಗೆ ಗೊತ್ತಿದೆ—ಅತಿಶಯವಾದ ಲಾಭವನ್ನು ಗಳಿಸುವುದು. ಉತ್ಪತ್ತಿಯನ್ನು ಕೊಂಚ ಹೆಚ್ಚಿಸುವಾಗ ಅವನ ವೆಚ್ಚದಲ್ಲಿ ತುಸುವೇ ಏರಿದ 'ಪರಿಸರದ ವೆಚ್ಚ'ವು ಆ ಪರಿಸರದ ಉತ್ಪಾದನೆಯ ದೆಸೆಯಿಂದ ಅವನಿಗೆ ಲಭಿಸುವ 'ಪರಿಸರದ ಆದಾಯ'ದಷ್ಟಾದರೂ ಇರಬೇಕು. ಪರಿಪೂರ್ಣ ಮೇಲಾಟದ ಸನ್ನಿವೇಶವಿರುವಾಗ ಸಂಚಾಲಕನೊಬ್ಬನ ಉತ್ಪಾದನೆಯಿಂದ ಧಾರಣೆಯ ಮೇಲೆ ಯಾವ ಪರಿಣಾಮವೂ ಆಗದೆ ಇರುವುದರಿಂದ ಅವನು 'ಪರಿ

ಸರದ ವೆಚ್ಚವೂ', 'ಪರಿಸರದ ಆದಾಯ'ವೂ ಪರಿಸಮಾನವಾಗುವ ತನಕ ಸರಕುಗಳ ಉತ್ಪಾದನೆಯನ್ನು ಹೆಚ್ಚಿಸುವನು ಪರಿಸರದ ಆದಾಯವೆಂದರೆ ಪರಿಸರದ ಉತ್ಪತ್ತಿ. ಇದು ಈಗ ನಡೆಯುವ ಮಾರ್ಕೆಟು ಧಾರಣೆಗೆ ಸಮ. ಆದುದರಿಂದ ಲಾಭವು ಪರಮಾವಧಿಗೆ ಮುಟ್ಟುವ ಹಂಬಲದಲ್ಲಿ ಸಂಚಾಲಕ ಅಥವಾ ಮಾರಾಟಗಾರನು ಪರಿಸರದ ವೆಚ್ಚ = ಪರಿಸರದ ಆದಾಯ = ಧಾರಣೆ ಆಗುವ ವರೆಗೆ ಉತ್ಪಾದನೆಯನ್ನು ಮುಂದುವರಿಸುವನು ಪ್ರತಿಯೊಂದು ಫರ್ಮೂ ಅದರ ಪರಿಸರದ ವೆಚ್ಚವು ಮಾರ್ಕೆಟಿನ ಧಾರಣೆಗೆ ಸಮಾನವಾಗಿರುವಂತೆ ನೋಡಿಕೊಳ್ಳುವುದು ವ್ಯಕ್ತಿ ಸಮತೋಲದ ಪರಿಸ್ಥಿತಿಯಲ್ಲಿ ಪರಿಸರದ ವೆಚ್ಚ = ಪರಿಸರದ ಆದಾಯ = ಧಾರಣೆ.

'ಸಂಪೂರ್ಣ ಸಮತೋಲ'ವು ಹೇಗುಂಟಾಗುತ್ತದೆ ಎಂಬುದನ್ನು ನೋಡುವ. ಒಂದು ಉದ್ಯಮದಲ್ಲಿರುವ ಫರ್ಮುಗಳ ಸಂಖ್ಯೆಯು ಹೆಚ್ಚಾಗುವ ಚಿಹ್ನೆ ಇಲ್ಲದಿದ್ದರೆ ಆ ಉದ್ಯಮವು ಸಂಪೂರ್ಣ ಸಮತೋಲದಲ್ಲಿರುವುದು ಎಂದು ಹೇಳಬಹುದು ಫರ್ಮುಗಳ ಲಾಭವೆಲ್ಲ ತಟಸ್ಥ ಲಾಭವಾಗತಕ್ಕುದು. ಸರಾಸರಿ ಆದಾಯವು ಸರಾಸರಿ ವೆಚ್ಚಕ್ಕೆ ಸಮಾನವಾಗಿದ್ದರೆ ಮಾತ್ರ ಲಾಭವು ತಟಸ್ಥವಾಗಿರುವುದು. ಲಾಭವನ್ನೊಳಗೊಂಡ ಸಮಗ್ರ ಆದಾಯವು, ಲಾಭವನ್ನೊಳಗೊಂಡ ಸಮಗ್ರ ವೆಚ್ಚಕ್ಕೆ ಸಮಾನವಾಗಬೇಕು ಅಂದರೆ,

ಸರಾಸರಿ ವೆಚ್ಚ = ಸರಾಸರಿ ಆದಾಯ = ಧಾರಣೆ

'ವ್ಯಕ್ತಿ ಸಮತೋಲ'ವು ಬರಬೇಕಾದರೆ—

ಪರಿಸರದ ವೆಚ್ಚ = ಪರಿಸರದ ಆದಾಯ = ಧಾರಣೆ

ಆದುದರಿಂದ ಸಂಪೂರ್ಣ ಸಮತೋಲಕ್ಕೆ ಎರಡು ಶರ್ತಗಳಿವೆ ಎಂದಾಯಿತು.

(೧) ಪರಿಸರದ ವೆಚ್ಚ = ಪರಿಸರದ ಆದಾಯ = ಧಾರಣೆ

(೨) ಸರಾಸರಿ ವೆಚ್ಚ = ಸರಾಸರಿ ಆದಾಯ = ಧಾರಣೆ

**ಅತ್ಯಂತ ಅನುಕೂಲವುಳ್ಳ ಫರ್ಮು:**

ಪರಿಪೂರ್ಣ ಮೇಲಾಟದ ಸನ್ನಿವೇಶದಲ್ಲಿ ಸರಕಿನ ಧಾರಣೆಯು ಪರಿಸರದ ವೆಚ್ಚ ಮತ್ತು ಸರಾಸರಿ ವೆಚ್ಚಗಳಿಗೆ ಸಮಾನವಾಗಿರುವುದನ್ನು

ವಿಶದಪಡಿಸಲು 'ಅತ್ಯಂತ ಅನುಕೂಲವುಳ್ಳ ಫರ್ಮಿ'ನ ಕಲ್ಪನೆ ಮಾಡಿಕೊಳ್ಳ ಬಹುದು ಪರಮಾವಧಿ ಚುರುಕುತನದಿಂದ ಸರಕು ತಯಾರಿಸಲು ಒಂದು ಫರ್ಮಿಗೆ ಸಾಧ್ಯವಾಗದೆ ಹೋಗಬಹುದು ಅದು ಚಿಕ್ಕದಿರಬಹುದು, ಅಥವಾ ಅನುಕೂಲಕ್ಕಿಂತ ಹೆಚ್ಚಾಗಿ ದೊಡ್ಡದಾಗಿರಬಹುದು. ಫರ್ಮು ಚಿಕ್ಕದಾಗಿದ್ದರೆ ಬಹುಶಃ ಅದು ಬೃಹತ್ – ಉತ್ಪಾದನೆಯ ಮಿತವ್ಯಯು ವನ್ನು ಪಡೆಯುತ್ತಾ ಇಲ್ಲ. ಸವೆ ಮತ್ತು ಸವೆ ಬೇಗನೆ ಒಂದಾಗಿ, ಆ ಬಿಂದು ಕಳೆದ ಬಳಿಕ ಸರಾಸರಿ ವೆಚ್ಚವು ಧಾರಣೆಗಿಂತಲೂ ಹೆಚ್ಚಾಗಿ ಏರ ಬಹುದು. ಫರ್ಮು ದೊಡ್ಡದಾಗಿದ್ದರೆ ಕೂಡ ಆಡಳಿತೆಯಲ್ಲಿ ಮಿತವ್ಯ ಯುವು ಬಾರದೆ, ಫರ್ಮಿನ ಸರಾಸರಿ ವೆಚ್ಚವು ಧಾರಣೆಗಿಂತ ಅತಿಶಯುವಾಗ ಬಹುದು. ಈ ಎರಡರ ನಡುವೆ ಏಕಕಾಲದಲ್ಲಿ ಬೃಹತ್ ಪ್ರಮಾಣದ ಉತ್ಪಾದನೆಯಿಂದ ಬರುವ ಮಿತವ್ಯಯುವು ಅತಿಶಯುವಾಗಿಯೂ, ಸರಾಸರಿ ವೆಚ್ಚವು ಅತ್ಯಂತ ಕಡಿಮೆಯಾಗಿಯೂ ಇರುವ ಒಂದು ಮಧ್ಯವರ್ತಿ ಬಿಂದು ಇರಲೇಬೇಕು ಈ ಗಾತ್ರವನ್ನು ಮುಟ್ಟಿದ ಫರ್ಮನ್ನು 'ಒಪ್ಟಿಮಮ್ ಫರ್ಮು' ಅಥವಾ 'ಅತ್ಯಂತ ಅನುಕೂಲವುಳ್ಳ ಫರ್ಮು' ಎಂದು ಕರೆಯು ವರು. ಈ ಫರ್ಮಿನ ಧಾರಣೆಯು ಸರಾಸರಿ ವೆಚ್ಚಕ್ಕಿಂತ ಕಡಮೆಯಾದಲ್ಲಿ ಕೆಲವು ಫರ್ಮುಗಳು ಖಂಡಿತವಾಗಿಯೂ ನಷ್ಟಕ್ಕೀಡಾಗುವುವು. ಬಹಳ ಕಾಲ ನಷ್ಟವನ್ನು ಸಹಿಸಲಾರದೆ ಕ್ರಮೇಣ ಒಂದೊಂದಾಗಿ ಆ ಉದ್ಯಮ ವನ್ನು ಬಿಟ್ಟು ಬೇರೆಕಡೆಗೆ ತೊಲಗುವುವು. ಸರಕಿನ ಪೂರೈಕೆಯು ಕಡಿಮೆ ಕಡಿಮೆಯಾಗುತ್ತಾ ಬಂದು ಕೊನೆಗೊಮ್ಮೆ ಧಾರಣೆಯು ಮರಳಿ ಸರಾಸರಿ ವೆಚ್ಚಕ್ಕೆ ಸಮಾನವಾಗುವುದು. ಇದಕ್ಕೆ ವಿಪರೀತವಾಗಿ ಮಾರ್ಕೆಟು ಧಾರಣೆಯು ಸರಾಸರಿ ವೆಚ್ಚಕ್ಕಿಂತ ಕಡಿಮೆಯಾಯಿತು ಎಂದು ಭಾವಿ ಸೋಣ ಆಗ ಈ ಫರ್ಮಿಗೆ ದೊರೆಯುವ ಅತಿರೇಕ ಲಾಭವನ್ನು ಕಂಡು ಆ ಉದ್ಯಮದಲ್ಲಿ ಹಲವು ಹೊಸ ಫರ್ಮುಗಳು ತೆರೆಯಲ್ಪಡುವುವು. ಒಟ್ಟು ಸರಕಿನ ಪೂರೈಕೆಯು ಹೆಚ್ಚುವುದು. ಧಾರಣೆಯು ಮರಳಿ ಸರಾಸರಿ ವೆಚ್ಚಕ್ಕೆ ಸಮನಾಗಿಯೇ ನಿಲ್ಲುವುದು. ಪರಿಪೂರ್ಣ ಮೇಲಾಟದ ಸನ್ನಿ ವೇಶವಿರುವಲ್ಲಿ ಪ್ರತಿಯೊಂದು ಫರ್ಮೂ 'ಒಪ್ಟಿಮಮ್ ಫರ್ಮು' ಆಗಿರು ವುದೇ ನಿಯಮ.

ದೀರ್ಘಾವಧಿಯ ಮೌಲ್ಯ ಅಥವಾ ತಟಸ್ಥ ಮೌಲ್ಯವನ್ನು ನಿರ್ಣಯಿಸುವ ವಿಷಯಗಳು ಎರಡು. (೧) ಅತ್ಯಂತ ಚುರುಕಾದ ಫರ್ಮಿನ ಧಾರಣೆಯು ಉತ್ಪಾದನೆಯ ವೆಚ್ಚ (= ಸರಾಸರಿ ಆದಾಯ)ದಷ್ಟೇ ಇರಬೇಕು. (೨) ಪರಿಪೂರ್ಣ ಪೋಟಾಟವನ್ನು ನಾವು ಪೂರ್ವಭಾವಿಯಾಗಿಟ್ಟುಕೊಳ್ಳುವುದರಿಂದ ಧಾರಣೆಯು ಪರಿಸರದ ವೆಚ್ಚಕ್ಕೂ ಸರಾಸರಿ ವೆಚ್ಚಕ್ಕೂ ಸಮಾನವಾಗಿರಲೇ ಬೇಕು.

## ಪರಮಾವಧಿ ಲಾಭದ ಉತ್ಪನ್ನ:

ಈ ಕೋಷ್ಟಕವನ್ನು ಪರಿಶೀಲಿಸೋಣ.

| ಉತ್ಪನ್ನ (ಟನ್) | ಸಮಗ್ರ ವೆಚ್ಚ ಡಾಲರ್ | ಸಮಗ್ರ ಆದಾಯ ಡಾಲರ್ | ನಿವ್ವಳ ಆದಾಯ ಡಾಲರ್ | ಪರಿಸರದವೆಚ್ಚ ಡಾಲರ್ |
|---|---|---|---|---|
| ೦ | ೨೦೦ | ೦ | —೨೦೦ | ೩ ೦೦ |
| ೫ | ೨೧೫ | ೪೫ | —೧೭೦ | ೨ ೦೦ |
| ೧೦ | ೨೨೫ | ೯೦ | —೧೩೫ | ೧ ೨೦ |
| ೧೫ | ೨೩೧ | ೧೩೫ | — ೯೬ | ೧ ೨೦ |
| ೨೦ | ೨೩೭ | ೧೮೦ | — ೫೭ | ೧ ೦೦ |
| ೨೫ | ೨೪೨ | ೨೨೫ | — ೧೭ | ೧ ೪೦ |
| ೩೦ | ೨೪೯ | ೨೭೦ | + ೨೧ | ೧ ೬೦ |
| ೩೫ | ೨೫೭ | ೩೧೫ | + ೫೮ | ೩ ೪೦ |
| ೪೦ | ೨೭೪ | ೩೬೦ | + ೮೬ | ೬ ೪೦ |
| ೪೫ | ೩೦೬ | ೪೦೫ | + ೯೯ | ೬·೮೦ |
| ೫೦ | ೩೪೦ | ೪೫೦ | +೧೧೦ | ೯·೦೦ |
| M | | | | |
| ೫೫ | ೩೮೫ | ೪೯೫ | +೧೧೦ | ೧೩·೦ |
| ೬೦ | ೪೫೦ | ೫೪೦ | + ೯೦ | ೧೭·೦ |
| ೬೫ | ೫೩೫ | ೫೮೫ | + ೫೦ | ೨೧·೮ |

ಉತ್ಪನ್ನವು ೪೫ ರಿಂದ ೫೫ ಏಕಾಂಶಗಳಾಗಿರುವಾಗ ನಿವ್ವಳ ಆದಾಯವು ಅತ್ಯಧಿಕವಾಗಿದೆ. ಟನ್ನಿಗೆ ೯ ಡಾಲರು ಬೆಲೆ ಎಂದು ಕಟ್ಟಿಕೊಂಡರೆ

ಪರಿಸರದ ವೆಚ್ಚವು ಸರಕಿನ ಧಾರಣೆಗೆ ಸಮನಾಗಿದೆ ಪರಿಸರದ ವೆಚ್ಚವೂ ಧಾರಣೆಯೂ ಸಮನಾದಾಗಲೇ ಪರಮಾವಧಿ ನಿವ್ವಳ ಆದಾಯ ಲಭಿಸುವುದರಲ್ಲಿ ಆಶ್ಚರ್ಯವಿಲ್ಲ. ಪರಿಪೂರ್ಣವಾದ ಮಾರ್ಕೆಟಿನಲ್ಲಿ ಪರಿಸರದ ವೆಚ್ಚ= ಧಾರಣೆ ಆಗಿರುವುದು ಉತ್ಪನ್ನವನ್ನು ಏಕಾಂಶದಿಂದ ಹೆಚ್ಚಿಸುವಾಗ ಸಮಗ್ರ ವೆಚ್ಚವು ಹಿಂದಿದ್ದುದಕ್ಕಿಂತ ಎಷ್ಟು ಮಟ್ಟಿಗೆ ಅಧಿಕವಾಗುವುದೋ ಆ ಮೊತ್ತಕ್ಕೆ ಪರಿಸರದ ವೆಚ್ಚ ಎನ್ನುತ್ತಾರೆ ಧಾರಣೆಯು ಈ ಮೊಬಲಗಿಗೆ ಸಮನಾಗಿರುವುದು ಧಾರಣೆಯು ಟನ್ನಿಗೆ ೯ ಡಾಲರ್ ಇದ್ದಾಗ, ಪರಿಸರದ ವೆಚ್ಚವು ೬ ಡಾಲರಿತ್ತೆಂದು ಭಾವಿಸುವ ಉತ್ಪನ್ನವನ್ನು ಏಕಾಂಶದಷ್ಟು ಹೆಚ್ಚಿಸಿದರೆ, ಸಮಗ್ರ ವೆಚ್ಚಕ್ಕೆ ೬ ಡಾಲರೂ, ಸಮಗ್ರ ಆದಾಯಕ್ಕೆ ೯ ಡಾಲರೂ ಸೇರಿದಂತಾಗುವುದು ನಿವ್ವಳ ಆದಾಯವು ೩ ಡಾಲರು ಹೆಚ್ಚಾಗುವುದು ಪರಿಸರದ ವೆಚ್ಚವು ೧೨ ಡಾಲರಿತ್ತೆಂದು ಭಾವಿಸುವ. ಆಗ ಉತ್ಪನ್ನವನ್ನು ಏಕಾಂಶದಷ್ಟು ಕಡಿಮೆ ಮಾಡುವ ಪರಿಸರದ ವೆಚ್ಚವು ೧೨ ಡಾಲರಿನಷ್ಟು. ಧಾರಣೆಯು ೯ ಡಾಲರಿನಷ್ಟು ಇಳಿಯುವುದರಿಂದ ನಿವ್ವಳ ಆದಾಯವು ಮರಳಿ ಮೂರೇ ಡಾಲರು ಆದಂತಾಯಿತು. ಪರಿಸರದ ವೆಚ್ಚವು ಧಾರಣೆಗೆ ಸಮವಾಗಿರುವಾಗ ಉತ್ಪನ್ನವನ್ನು ಹೆಚ್ಚು ಕಡಿಮೆ ಮಾಡುವುದರಿಂದ ನಿವ್ವಳ ಆದಾಯವನ್ನು ವ್ಯತ್ಯಾಸ ಪಡಿಸಲು ಸಾಧ್ಯವಾಗುವುದಿಲ್ಲ

**ಉತ್ಪಾದನೆಯ ವೆಚ್ಚ ಮತ್ತು ಧಾರಣೆ:**

ನಾವು ಸಾಮಾನ್ಯವಾಗಿ ಸರಕಿನ ವೆಚ್ಚವು ಅದರ ಧಾರಣೆಯನ್ನು ನಿರ್ಣಯಿಸುವುದೆಂದು ನಂಬಿರುತ್ತೇವೆ ಉತ್ಪಾದನೆಯ ವೆಚ್ಚವು ಒಂದೊಂದು ಗಾತ್ರದ ಉತ್ಪನ್ನಕ್ಕೆ ಒಂದೊಂದು ವಿಧವಾಗಿರುವುದು ಉತ್ಪಾದನೆಯ ಹಣವೆಚ್ಚವು ಕೂಡಾ ಧಾರಣೆಗಳ ಮೊತ್ತವಲ್ಲವೇ? ಪರಿಸರದವೆಚ್ಚವಾಗಲಿ ಪರಿಶ್ರಮದ ಧಾರಣೆ, ಗೇಣಿಯ ಧಾರಣೆ, ಬಾಡಿಗೆ, ಕಚ್ಚಾಮಾಲು, ಇವುಗಳ ಧಾರಣೆ ತಾನೇ? ಆದುದರಿಂದ ಯಾವುದು, ಯಾವುದನ್ನು ನಿರ್ಣಯಿಸುವುದು ಎಂದು ಹೇಳುವುದು ಕಷ್ಟ ವೆಚ್ಚ ಮತ್ತು ಧಾರಣೆ ಪರಸ್ಪರಾವಲಂಬಿಗಳು ಎಂದು ಮಾತ್ರ ಖಂಡಿತವಾಗಿ ಹೇಳಿಯೇವು ಪರಿಪೂರ್ಣ ಮೇಲಾಟದ ಸನ್ನಿವೇಶದಲ್ಲಿ ಪ್ರತಿಯೊಂದು ಫರ್ಮೂ ತನ್ನ ಪರಿಸರದ

ವೆಚ್ಚವು ಧಾರಣೆಗೆ ಸಮನಾಗುವಷ್ಟು ಗಾತ್ರದ ಉತ್ಪನ್ನವನ್ನೇ ಸೃಷ್ಟಿಸು ವುದು. ಒಂದು ಫರ್ಮು, ಇನ್ನೊಂದು ಫರ್ಮಿಗಿಂತ ಹೆಚ್ಚು ಸಮರ್ಥ ವಾದುದು ಎಂಬ ಸತ್ಯ ನಮಗೆ ಗೋಚರವಾಗುವುದು ಪರಿಸರದ ವೆಚ್ಚ ದಲ್ಲಲ್ಲ, ಉತ್ಪಾದನೆಯ ಗಾತ್ರದ ಭೇದದಲ್ಲಿ. ಹೆಚ್ಚು ಚುರುಕಿನ ಫರ್ಮಿಗೆ ಹೆಚ್ಚು ಉತ್ಪನ್ನ ಇರುತ್ತದೆ.

**ಸ್ಥಿರ (ಗೌಣ) ಮತ್ತು ಪ್ರಧಾನವೆಚ್ಚ:**

ದೀರ್ಘಾವಧಿಯಲ್ಲಿ ಸಂಚಾಲಕನು ಎಲ್ಲ ವೆಚ್ಚಗಳನ್ನು ನಿರ್ವ ಹಿಸುವನು. ಅಲ್ಪಾವಧಿಯ ದೃಷ್ಟಿಯಿಂದ ಫರ್ಮಿನಲ್ಲಿರುವ ಉತ್ಪಾದಕ ಸಲಕರಣೆಗಳು ಸ್ಥಿರವಾದುವು. ಉತ್ಪಾದನೆ ಎಷ್ಟಿದ್ದರೂ ಅವುಗಳ ವೆಚ್ಚವು ಉತ್ಪಾದನೆಯ ವೆಚ್ಚದಲ್ಲಿ ಸೇರಿಯೇ ಸೇರುವುದು. ಇಂಥ ವೆಚ್ಚಗಳಿಗೆ 'ಸ್ಥಿರ' ಅಥವಾ 'ಗೌಣ' ವೆಚ್ಚಗಳು ಎನ್ನುತ್ತಾರೆ. ಉತ್ಪನ್ನವನ್ನು ತಯಾರುಮಾಡದೆ ಇರುವಾಗ ಯಾವ ವೆಚ್ಚಗಳನ್ನು ನಿರ್ವಹಿಸುವುದು ಬೇಡವೋ ಅವು–ಕೂಲಿ, ಕಚ್ಚಾ ಮಾಲಿನ ಬೆಲೆ, ಮುಂತಾದುವು- 'ಪ್ರಧಾನ ವೆಚ್ಚ'ಗಳು. ಪ್ರಧಾನ ವೆಚ್ಚಗಳಿಗೆ 'ಪರಿವರ್ತನೀಯ' ವೆಚ್ಚಗಳೆಂದೂ ಹೆಸರುಂಟು. ಸರಕು ತಯಾರಾಗಲಿ, ಆಗದಿರಲಿ ಸ್ಥಿರವೆಚ್ಚವು ಇದ್ದೇ ಇರುವುದರಿಂದ ಅಧಿಕ ಸರಕು ತಯಾರಿಸುವಾಗ ಬರುವ ಪರಿಸರದ ವೆಚ್ಚದಲ್ಲಿ ಇದು ಸಮಾವೇಶವಾಗುವುದಿಲ್ಲ. ಪರಿವರ್ತನೀಯ ವೆಚ್ಚಗಳು ಪರಿಸರದ ವೆಚ್ಚದಲ್ಲಿ ಸೇರುವುವು. ಇವುಗಳಿಂದ ಸ್ಥಿರ ವೆಚ್ಚದ ಮೇಲೆ ಪರಿಣಾಮ ವಾಗುವುದಿಲ್ಲ. ಸಾಮಾನ್ಯವಾಗಿ ಪರಿಸರದ ವೆಚ್ಚವೆಂದರೆ ಪ್ರಧಾನ ವೆಚ್ಚವೇ ಆಗಿರುವುದು. ಅಲ್ಪಾವಧಿಯಲ್ಲಿ ಸಂಚಾಲಕನ ದೃಷ್ಟಿಯಲ್ಲಿ ಪರಿಸರದ ವೆಚ್ಚ (ಪ್ರಧಾನವೆಚ್ಚ)ವು ಧಾರಣೆಗಿಂತ ಮೀರದಿದ್ದರಾಯಿತು. ದೀರ್ಘಾವಧಿಯಲ್ಲಿ ಸ್ಥಿರವೆಚ್ಚ, ಪ್ರಧಾನ ವೆಚ್ಚಗಳೆರಡೂ ಧಾರಣೆಯಲ್ಲಿ ಸಮಾವೇಶಗೊಳ್ಳಬೇಕಾಗಿದೆ ಆದುದರಿಂದಲೇ ತಟಸ್ಥ ಧಾರಣೆಯ ಪ್ರಸಂಗದಲ್ಲಿ ಧಾರಣೆ = ಸರಾಸರಿ ವೆಚ್ಚ.

**ಸಂಯುಕ್ತ ಉತ್ಪಾದನೆ:**

ಈ ವರೆಗೆ ನಾವು ಒಂದು ಸರಕಿನ ಉತ್ಪಾದನೆಯನ್ನಷ್ಟೇ ನಮ್ಮ

ಪ್ರಶ್ನೆಯಾಗಿ ಇರಿಸಿಕೊಂಡಿದ್ದೆವು. ಈಗ ಒಂದೇ ಮೂಲದಿಂದ ಅನೇಕ ಸರಕುಗಳು ಬರುವ ಸಂದರ್ಭವನ್ನು ಗಮನಿಸುವ ಗೋಮಾಂಸ, ಚರ್ಮ, ಉಣ್ಣೆ, ಕುರಿಮಾಂಸ, ಅಕ್ಕಿ, ಬೈಹುಲ್ಲು–ಇವು ಜತೆಜತೆಯಾಗಿ ಉತ್ಪಾದಿತ ವಾಗುವ ಸರಕುಗಳು ಒಂದು ಕುರಿಗೆ ಇಷ್ಟೇ ಮಾಂಸ, ಇಷ್ಟೇ ಉಣ್ಣೆ ಎಂದು ನಿಶ್ಚಯುವಾಗಿದ್ದರೂ. ಕುರಿಗಳ ತಳಿಗಳನ್ನು ಬದಲುಮಾಡಿ ಉಣ್ಣೆ ಬೇಕಾದರೆ ಉಣ್ಣೆ, ಮಾಂಸ ಬೇಕಾದರೆ ಮಾಂಸ, ಯಾವುದಾದರೂ ಒಂದರ ಪರಿಮಾಣವನ್ನು ಹೆಚ್ಚಿಸಿಕೊಳ್ಳಬಹುದೆಂದು ಹೆಂಡರ್ಸನ್ ಹೇಳುತ್ತಾನೆ ಇದು 'ಪರಿವರ್ತನೀಯ ಸಂಯುಕ್ತ ಪೂರೈಕೆ' ಆದರೆ ಹತ್ತಿ ಮತ್ತು ಹತ್ತಿ ಕಾಳು ತಯಾರಾಗುವ ದಾಮಾಶಯುವನ್ನು ಬದಲಿಸಲು ಬಾರದೆ ಇರುವು ದರಿಂದ ಅದರ ಪೂರೈಕೆಯನ್ನು 'ಸ್ಥಿರ ಸಂಯುಕ್ತ ಪೂರೈಕೆ' ಎಂದು ಕರೆಯ ಬೇಕು ಸಂಯುಕ್ತ ಉತ್ಪಾದನೆಯ ಸಮತೋಲ ಸ್ಥಿತಿಯಲ್ಲಿ ಸಮಗ್ರ ವೆಚ್ಚವು ಸಮಗ್ರ ಧಾರಣೆಯಷ್ಟು ಆದರೆ ಸರಿ—ಎಂದಿಷ್ಟೆ ನಾವು ಹೇಳ ಬಲ್ಲೆವು ಒಂದು ಮುಡಿ ಅಕ್ಕಿ, ಅದರ ಬೈಹುಲ್ಲು—ಇವುಗಳ ಒಟ್ಟು ಬೆಲೆಯು ಎರಡೂ ಸರಕುಗಳ ಸಮಗ್ರ ಪರಿಸರದ ವೆಚ್ಚಕ್ಕೆ ಸಮಾನವಾಗಿರ ಬೇಕು. ಒಂದರ ಬೆಲೆ ಬಿದ್ದಷ್ಟೇ ದಾಮಾಶಯದಲ್ಲಿ ಇನ್ನೊಂದರ ಧಾರಣೆ ಏರಬೇಕು ಅಕ್ಕಿಯ ಬೆಲೆ ತಗ್ಗಿದರೆ, ಹುಲ್ಲಿನ ಬೆಲೆ ಏರಬೇಕು ಆಗ ಸಮತೋಲ ಸ್ಥಿತಿ ಬರುವುದು ಎಂಬುದನ್ನು ಮಾತ್ರ ನಾವು ಹೇಳಬಲ್ಲೆವು.

**ಸಂಚಾಲಕ ಸಂಸ್ಥೆಗಳ ವಿವಿಧರೂಪ:**

**(೧) ಏಕವ್ಯಕ್ತಿ ಸಂಸ್ಥೆ:–** ಅಂದರೆ ಒಬ್ಬನೇ ಮನುಷ್ಯನಿಂದ ನಡೆಯು ವಸಂಸ್ಥೆ ಚಿಲ್ಲರೆ ಅಂಗಡಿ, ಕೃಷಿ ಇವು ಅರ್ವಾಚೀನ ಕಾಲದಲ್ಲಿ ಏಕವ್ಯಕ್ತಿ ಸಂಸ್ಥೆಗಳಿಗೆ ಒಳ್ಳೆಯ ಉದಾಹರಣೆಗಳು ಕೃಷಿಕನು ಎಲ್ಲ ಕೆಲಸಗಳನ್ನು ತಾನೇ ಮಾಡುವನು–ಉಳುವುದು, ಬಿತ್ತುವುದು, ಕೊಯ್ಯುವುದು, ಪೇಟೆಗೆ ಒಯ್ಯುವುದು, ಬಟ್ಟೆ ತರುವುದು. ಪ್ರಾಚೀನ ಕಾಲದಲ್ಲಿ ಕೃಷಿಯೇ ಮುಖ್ಯ ಉದ್ಯೋಗವಾಗಿದ್ದಾಗ ಏಕವ್ಯಕ್ತಿ ಸಂಸ್ಥೆಗಳ ಪ್ರಾಬಲ್ಯವಿದ್ದಿತು ಪ್ರಾವೀಣ್ಯ'ವು ಪ್ರಬಲವಾದಂತೆ ಏಕವ್ಯಕ್ತಿ ಸಂಸ್ಥೆಗಳು ಹಿಂದೆ ಬೀಳ ಬೇಕಾಯಿತು.

**(೨) ಪಾಲುಗಾರಿಕೆ: ಪಾರ್ಟ್‌ನರಶಿಪ್:-** ಏಕವ್ಯಕ್ತಿ ಸಂಸ್ಥೆಯನ್ನು ದೊಡ್ಡ ರೂಪಕ್ಕೆ ತರಲು ಇದು ಒಂದು ಒಳ್ಳೆಯ ಸೌಲಭ್ಯ. ಎರಡು ಜನ ಒಂದು ಸಂಸ್ಥೆಯನ್ನು ಜಂಟಿಯಾಗಿ ನಡೆಯಿಸುವಾಗ ಸಂಸ್ಥೆಯ ವ್ಯವಹಾರದಲ್ಲಿ ಇಬ್ಬರೂ ಸಮಾನವಾದ ಪಾಲುಹಾಕಿ, ಸಮಾನ ಹೊಣೆಗಾರಿಕೆ ವಹಿಸಿಕೊಳ್ಳುವುದೂ; ಒಬ್ಬನು ಹೆಚ್ಚು ಪಾಲುಹಾಕಿ, ಹೊಣೆ ಉಳ್ಳವನಾಗಿ, ಇನ್ನೊಬ್ಬನು ಕಡಿಮೆಯಿಂದಲೇ ತೃಪ್ತಿಪಡುವುದೂ; ಒಬ್ಬನು ವ್ಯವಹಾರ ನಡೆಯಿಸುವುದರಲ್ಲಿ ತುಂಬಾ ಚಟುವಟಿಕೆಯಿಂದ ಇದ್ದು, ಇನ್ನೊಬ್ಬನು ಕುಂಭಕರ್ಣನಾಗುವುದೂ— ಪಾಲುಗಾರಿಕೆಯ ಮೂರು ಪ್ರಭೇದಗಳು ಸಂಸ್ಥೆಯ ಪರವಾಗಿ ಇಬ್ಬರು ದುಡಿದರೆ ಅದೇ ಪಾಲುಗಾರಿಕೆಯ ಸಂಸ್ಥೆ ಎಂಬುದು ಇಲ್ಲಿ ಅಡಕವಾಗಿರುವ ಮೂಲಸೂತ್ರ. ಬಂದ ಲಾಭವು ಅವರವರು ಹಾಕಿದ ಷೆಯರು, ಹೊತ್ತಹೊಣೆಗೆ ಅನುಗುಣವಾಗಿ ವಿಭಜಿಸಲ್ಪಡಬೇಕು. ಇದರ ದೋಷವೇನೆಂದರೆ ನಷ್ಟಬಂದಾಗ ಇಬ್ಬರೂ ಅವರ ಹೊಣೆಗಾರಿಕೆಯ ದಾಮಾಶಯವನ್ನು ಮೀರಿ ನಷ್ಟ ತುಂಬಿಸಬೇಕಾಗುವುದು. ರಾಮನು ನಾಲ್ಕುಸಾವಿರ, ಭೀಮನು ೨೦೦೦ ಹಾಕಿ, ನಡೆಯಿಸಿದ ಸಂಸ್ಥೆಗೆ ೧೦೦೦೦ ರೂಪಾಯಿ ನಷ್ಟವಾಗಿ, ರಾಮನು ಬಾಡಿಗೆ ಮನೆಯಲ್ಲಿ ವಾಸಿಸುವವನೂ, ಭೀಮನು ಸ್ವಂತ ಆಸ್ತಿಯಲ್ಲಿರುವವನೂ ಆಗಿದ್ದರೆ ಭೀಮನ ಹತ್ತುಸಾವಿರದವರೆಗಿನ ಆಸ್ತಿಯಮೇಲೆ ಸಾಲಗಾರರು ದಾವೆ ಹೂಡಬಹುದು. ನಷ್ಟಸಂಭವವನ್ನು ಅಸಮಾನವಾಗಿ ಹಂಚಿರುವುದು ಪಾಲುಗಾರಿಕೆಯ ಮುಖ್ಯ ದೋಷ.

**(೩) ಖಾಸಗಿ ಕಂಪೆನಿ:** ಇದರಲ್ಲಿ ಸಾಧಾರಣವಾಗಿ ಐವತ್ತು ಜನರಿಗಿಂತಲೂ ಕಡಿಮೆ ಷೇರುದಾರರು ಇರುತ್ತಾರೆ. ಷೇರುಗಳು ಓಪನ್ ಮಾರ್ಕೆಟಿನಲ್ಲಿ ಮಾರಾಟಕ್ಕೆ ದೊರೆಯುವುವು. ಖಾಸಗಿ ಕಂಪೆನಿಗಳಿಗೆ ಬ್ಯಾಲೆನ್ಸ್ ಶೀಟು ಪ್ರಕಟಿಸಬೇಕೆಂಬ ನಿರ್ಬಂಧವಿಲ್ಲ. ಉದ್ಯಮಗಳನ್ನು ಹೊಸದಾಗಿ ಸೃಷ್ಟಿಸುವಾಗ ಖಾಸಗಿ ಕಂಪೆನಿಗಳನ್ನು ತೆರೆಯುವುದು ಸುಲಭವಾದ ಮಾರ್ಗ.

**(೪) ಕೋರ್ಪೊರೇಷನ್ಸ್ ಅಥವಾ ಕೂಡುಬಂಡವಾಳದ ಸಂಸ್ಥೆ:** ಒಪನ್ ಮಾರ್ಕೆಟಿನಲ್ಲಿ ಚಂದ ಎತ್ತಿ ಸಂಗ್ರಹವಾದ ಷೇರುಗಳೇ ಈ

ಸಂಸ್ಥೆಯ ಬಂಡವಾಳ. ಇದನ್ನು ಅಮೇರಿಕದಲ್ಲಿ 'ಕೊರ್ಪೊರೇಷನ್' ಎಂದೂ ಇಂಗ್ಲೆಂಡ ಮತ್ತು ಭಾರತದಲ್ಲಿ 'ಜಾಯಿಂಟ ಸ್ಟಾಕ್ ಕಂಪೆನಿ' ಅಥವಾ ಕೂಡುಬಂಡವಾಳದ ಸಂಸ್ಥೆ ಎಂದೂ ಕರೆಯುವರು ಇದರ ಷೆಯರುಗಳನ್ನು ಒಬ್ಬರು ಇನ್ನೊಬ್ಬರಿಗೆ ವರ್ಗಾಯಿಸಬಹುದು ಒಬ್ಬನು ಎಷ್ಟು ಷೆಯರು ಪಡೆದುಕೊಂಡಿರುವನೋ ಅಷ್ಟರ ಮೊಬಲಗಿಗೆ ಮಾತ್ರ ಅವನು ಜವಾಬುದಾರನೆನಿಸುವುದರಿಂದ ಮಿತಜವಾಬುದಾರಿಯ ಕಂಪೆನಿಗ ಳೆಂದೂ ಇವಕ್ಕೆ ಹೆಸರುಂಟು. ಬಂಡವಾಳದ ಸ್ವಾಮ್ಯವನ್ನೂ, ಅದರ ನಿಯಂತ್ರಣ ಮತ್ತು ವ್ಯವಹಾರಗಳನ್ನೂ ಬೇರ್ಪಡಿಸಿದುದು ಕೂಡು ಬಂಡ ವಾಳದ ಸಂಸ್ಥೆಯು ಆರ್ಥಿಕ ಪ್ರಪಂಚಕ್ಕೆ ಒದಗಿಸಿರುವ ಇನ್ನೊಂದು ಮುಖ್ಯ ಸೌಲಭ್ಯ. ಕಂಪೆನಿಯ ಧೋರಣೆಯನ್ನು ರೂಪಿಸಲು ಪ್ರತ್ಯೇಕವಾದ ನಿರ್ದೇಶಕ ಮಂಡಳಿಯೊಂದು ನಿಯಮಿಸಲ್ಪಟ್ಟರೂ ಇತ್ತೀಚೆಗೆ ಇದರಲ್ಲಿ ವೇತನಕ್ಕಾಗಿ ದುಡಿಯುವ ದಕ್ಷರಾದ ಮೆನೆಜರುಗಳ ಪ್ರಾಬಲ್ಯವು ಹೆಚ್ಚಾ ಗಿದೆ. ಮುಖ್ಯ ವ್ಯವಸ್ಥಾಪಕನಿಗೆ ಮೆನೆಜಿಂಗ ಡಾಯರೆಕ್ಟರ ಎಂಬ ಹೆಸರಿದೆ.

ಕೊರ್ಪೊರೇಷನ್ನಿನ ಷೆಯರುಗಳ ಒಡೆತನವು, ಷೆಯರುದಾರರದಾ ದರೂ ಅವರು ಸಂಸ್ಥೆಯ ವ್ಯವಸ್ಥೆಯಲ್ಲಿ ಹೆಚ್ಚು ಪಾತ್ರ ವಹಿಸುವುದಿಲ್ಲ. ಅವರು ತಮ್ಮ ಷೆಯರುಗಳ ಸಂಖ್ಯೆಗನುಸಾರವಾಗಿ ದೊರೆತ ಮತದಾನದ ಹಕ್ಕುಗಳಿಂದ ಡಾಯರೆಕ್ಟರುಗಳನ್ನಾರಿಸಿ, ಸಂಸ್ಥೆಯ ಪ್ರಗತಿಯ ಜವಾಬು ದಾರಿಯನ್ನು ಅವರ ತಲೆಯ ಮೇಲೆಯೇ ಇರಿಸುವರು. ಡಾಯರೆಕ್ಟರು ಗಳು ದಿನದಿಂದ ದಿನದ ಕೆಲಸವನ್ನು ನಿರ್ವಹಿಸಲು ಒಬ್ಬ ಆಡಳಿತೆಯ ಡಾಯರೆಕ್ಟರನನ್ನು ನೇಮಿಸುವರು.

ಬ್ರಿಟನ್ನಿನಲ್ಲಿ ಇಂಥ ಒಂದು ಲಕ್ಷ ಕೂಡುಬಂಡವಾಳದ ಸಂಸ್ಥೆಗಳಿವೆ ಯಂತೆ. ಇದರಿಂದ ಸ್ವತಂತ್ರ ಬಂಡವಾಳಗಾರ ಸಮಾಜದಲ್ಲಿ ಈ ಸಂಸ್ಥೆ ಗಳ ಪ್ರಾಬಲ್ಯವು ಬಹಳ ಎಂದು ನಾವು ತಿಳಿಯಲು ಅವಕಾಶ ಉಂಟು. ಕೂಡುಬಂಡವಾಳ ಸಂಸ್ಥೆಯಿಂದಾದ ಮುಖ್ಯ ಪರಿಣಾಮಗಳನ್ನು ಗುರುತಿ ಸುವ.– (೧) ಚಿಕ್ಕ ಚಿಕ್ಕ ಧನಸಂಗ್ರಹಗಳ ಒಡೆಯರಿಗೂ ಆ ಸಂಗ್ರಹದ ಸದುಪಯೋಗವಾಗುವ ಹಾಗೆ ಅವಕಾಶ ಒದಗಿಸಿ, ಉತ್ಪಾದನೆಯ ಹೆಚ್ಚು

ಗಾರಿಕೆಯಲ್ಲಿ ಅವರಿಗೂ ಒಂದು ಸ್ಥಾನವನ್ನು ದೊರಕಿಸಿರುವುದು. (೨) ವ್ಯವಹಾರದ ಸಂಸ್ಥೆಗಳ ಗಾತ್ರವೂ, ವೈಶಾಲ್ಯವೂ ಅಧಿಕವಾದುದು. (೩) ಬಂಡವಾಳದ ಒಡೆತನವೂ, ನಿಯಂತ್ರಣವೂ ಬೇರೆಬೇರೆಯಾಗಿ ಶ್ರಮವಿಭಾಗದ ಲಾಭವು ದೊರೆಯುವುದು. (೪) ಬಂಡವಾಳದ ದೊಡ್ಡ ಮೊತ್ತವನ್ನು ನಿಯಂತ್ರಿಸುವ ಅಧಿಕಾರ ಬರುವುದರಿಂದ ಆರ್ಥಿಕಶಕ್ತಿಯು ವೃದ್ಧಿಯಾಗುವುದು

**(೫) ಮೊನೊಪಲಿಗಳು:** ಉತ್ಪಾದನೆಯ ಅವಯವಗಳಲ್ಲಿ ಯಾವುದಾದರೂ ಒಂದರ ವಿಶಿಷ್ಟ ಸ್ವಾಮ್ಯವನ್ನು ಒಂದೇ ಒಂದು ಸಂಸ್ಥೆಯು ಪಡೆದುಕೊಂಡು, ಧಾರಣೆಯಲ್ಲ ಬದಲಾವಣೆ ಮಾಡಬಲ್ಲ ಶಕ್ತಿಯನ್ನು ಸಂಪಾದಿಸಲು ಶಕ್ತವಾದರೆ, ಅಂಥ ಸಂಸ್ಥೆ 'ಮೊನೊಪಲಿ' ಎನಿಸುವುದು.

**(೬) ಸಹಕಾರಿ ಸಂಸ್ಥೆಗಳು:** ಸಮಾನ ಧ್ಯೇಯವುಳ್ಳ ಜನಗಳ ಸಂಘವೇ ಸಹಕಾರಿ ಸಂಸ್ಥೆ ಎನಿಸುವುದು. ಇದರಲ್ಲಿ ಮೂರು ಬಗೆಯವು ಇವೆ. (ಅ) ಉತ್ಪಾದಕರ ಸಂಘಗಳು.-ಯಾವುದಾದರೂ ಒಂದು ಸರಕನ್ನು (ಬೂಟು) ತಯಾರಿಸುವವರೆಲ್ಲ ಇದರ ಸದಸ್ಯರು. ಮೂಲ ಸಾಮಗ್ರಿಗಳನ್ನು ಒಟ್ಟಾಗಿ ಕೊಳ್ಳುವುದರಿಂದಲೂ, ತಯಾರಿಸಿದ ಸರಕನ್ನು ಒಟ್ಟಾಗಿ ಮಾರುವುದರಿಂದಲೂ ಅನೇಕ ಮಿತವ್ಯಯಗಳುಂಟಾಗಿ, ಪ್ರತಿಯೊಬ್ಬ ಉತ್ಪಾದಕನಿಗೂ ಸಿಗುವ ಲಾಭಾಂಶವು ಹೆಚ್ಚುವುದು ಮಂಗಳೂರಿನಲ್ಲಿ ಇಂಥ ಹಣ್ಣು ಬೆಳೆಯಿಸುವ ಸಂಘ ಒಂದು ಯಶಸ್ವಿಯಾಗಿ ನಡೆಯುತ್ತಿದೆ. (ಆ) ಕೃಷಿಕರ ಸಹಕಾರಿ ಸಂಘ.-ಡೆನ್ಮಾರ್ಕಿನಲ್ಲಿ ಈ ಸಂಘವು ಬಹಳ ಮುಂದುವರಿದಿದೆ. ಇದೂ ಉತ್ಪಾದಕರ ಸಂಘವೇ. ದೂರ ದೂರ ಇರುವ ಸ್ವತಂತ್ರ ರೈತರನ್ನು ಒಂದುಗೂಡಿಸಿ, ಅವರ ಸಂಘಗಳನ್ನೆಲ್ಲ ಒಂದೆಡೆ ಸೇರಿಸಿ, ಮಾರ್ಕೆಟಿನಲ್ಲಿ ಅಧಿಕ ಬೆಲೆ ಸಿಗುವ ಕಾಲದಲ್ಲಿ ಮಾರುವುದರಿಂದ ಈ ಸಂಘವು ಬೇಗನೆ ರೈತಪ್ರಿಯವಾಗುವುದು (ಇ) ಸಹಕಾರಿ ಸಾಲದ ಸಂಸ್ಥೆಗಳು:- ಇದರ ವ್ಯಾಪ್ತಿ ಕೂಡಾ ಕೃಷಿ ಕ್ಷೇತ್ರದಲ್ಲಿಯೇ ಅಧಿಕವಾಗಿದೆ. ಕೃಷಿಕನಿಗೆ ನಡುನಡುವೆ ಬೇಕಾಗುವ ಚಿಕ್ಕ ಚಿಕ್ಕ ಮೌಲ್ಯದ ಸಾಲಗಳನ್ನು (ಹೋರಿ ಸತ್ತಾಗ, ಬೆಳೆ ಕಟಾವಿನ ಮೊದಲು, ಮಕ್ಕಳ ಮದುವೆ ಮುಂಜಿಗೆ) ಅಗ್ಗ ದರದ ಬಡ್ಡಿಯಲ್ಲಿ ಪೂರೈಸಿ, ಊರಿನ ಸಾಹುಕಾರ ಮಹಾಜನಗಳ

ದವಡೆಯಿಂದ ರೈತನನ್ನು ಪಾರುಮಾಡುವ ಪುಣ್ಯವು ಈ ಸಂಸ್ಥೆಗೆ ಇದೆ. ಲೇಂಡ್ ಮೊರ್ಟ್‌ಗೇಜ್ ಬೇಂಕುಗಳು ಇದರ ಒಂದು ಅಂಗ: ಇವು ಅಡವಿನ ಮೇಲೆ ಸಾಲಕೊಡುವುವು ಭಾರತದಲ್ಲಿ ಸರಕಾರದ ಪ್ರೋತ್ಸಾಹದಿಂದ ಇಂಥ ಸಾಲದ ಸಂಸ್ಥೆಗಳು, ನಡೆಯುವುದರಿಂದ ಒಳ್ಳೆಯದೂ ಉಂಟು, ಕೆಟ್ಟುದೂ ಉಂಟು. ಸಾಲ ಒದಗಿಸಲು ಬೇಕಾದ ಬಂಡವಾಳವು ಸರಕಾರದ ಭದ್ರತೆಯ ದೆಸೆಯಿಂದ ಕ್ಷಿಪ್ರದಲ್ಲಿ ಲಭಿಸುವುದಾದರೂ ಜನರಿಗೆ ಇದು ಸರಕಾರಿ ಸಂಸ್ಥೆ ಎಂದು ತುಸು ಅಶ್ರದ್ಧೆ ಉತ್ಪನ್ನವಾಗುವುದು (ಈ) ಆದರೆ ಜನರನ್ನು ಆಕರ್ಷಿಸಿ ಅವರ ವಿಶ್ವಾಸವನ್ನು ಕಾಯ್ದುಕೊಂಡಿರುವ ಸಹಕಾರಿ ಸಂಸ್ಥೆಗಳು ಎಂದರೆ ಅನುಭೋಗಿ ಸಂಸ್ಥೆಗಳೇ ಸರಿ. ರಕಮು ಧಾರಣೆಯಲ್ಲಿ ಸರಕುಗಳನ್ನು ಕೊಳ್ಳುವುದರಿಂದ ಬರುವ ಲಾಭವು ಮಧ್ಯಸ್ಥನಾದ ವ್ಯಾಪಾರಿಗೆ ಹೋಗದೆ ನೇರವಾಗಿ ಅನುಭೋಗಿಯ ಕಿಸೆಯೊಳಗೆಯೇ ಬೀಳುವ ಏರ್ಪಾಡು ಅನುಭೋಗಿಗಳ ಮನಸ್ಸನ್ನು ಸೆಳೆದು ನಿಲ್ಲಿಸಿದೆ ಎಂಬುದರಲ್ಲಿ ಸಂದೇಹವಿಲ್ಲ. ಮದರಾಸಿನ ಟ್ರಿಪ್ಲಿಕೇನ್ ಅರ್ಬನ್ ಸೊಸೈಟಿಯು ಭಾರತದಲ್ಲಿಯೇ ಹೆಸರಾಂತ ಸಹಕಾರಿ ಅನುಭೋಗಿ ಸಂಘ. ಬ್ರಿಟನಿನಲ್ಲಿ ಅನುಭೋಗಿ ಸಂಸ್ಥೆಗಳಿಗೆ ಒಂದು ಕೋಟಿ ಸದಸ್ಯರಿದ್ದಾರೆ ಗ್ರಾಮ ಗ್ರಾಮಗಳಲ್ಲಿಯೂ ಹರಡಿ ಜನೋಪಕಾರವನ್ನು ಮಾಡುವ ಶಕ್ತಿಯು ಈ ಸಂಸ್ಥೆಗಳಲ್ಲಿದೆ.

ಸಹಕಾರಿಸಂಘಗಳಿಂದಾಗುವ ಆರ್ಥಿಕ ಲಾಭವೇನು? (ಅ) ಗಿರಾಕಿಗಳ ಸಂಖ್ಯೆಯೂ ಅವರ ಬೇಡಿಕೆಗಳ ಪರಿಮಾಣವೂ ನಿಶ್ಚಿತವಾಗಿ ತಿಳಿದಿರುವುದರಿಂದ ಸಂಗ್ರಹಮಾಡಲು ಸುಲಭವಾಗುವುದು, ಮಿತವ್ಯಯವಾಗುವುದು (ಆ) ಜಾಹೀರಾತಿನ ಖರ್ಚು ಕಡಿಮೆ. ಸದಸ್ಯರ ವಿಶ್ವಾಸವು ಅಚಲವಾಗಿದ್ದರೆ ಜಾಹೀರಾತು ಏತಕ್ಕೆ? (ಇ) ಸದಸ್ಯರಿಗೆ ಸಂಘವು ಕೊಡುವ ಅನೇಕ ಸಲವತ್ತುಗಳು: ಉಳಿತಾಯದ ರಕ್ಷಣೆ, ವಿದ್ಯಾಪ್ರಸಾರ, ಆಡಳಿತೆಯಲ್ಲಿ ಅನುಭವ. ಆದರೆ ಸಹಕಾರಿ ಸಂಘಗಳಿಗೆ ಎರಡು ಪರಿಮಿತಿಗಳೂ ಇವೆ. (೧) ಜನರ ಗ್ರಾಹಕ ಶಕ್ತಿ ಕಡಿಮೆಯಾಗಿರುವಂಥ ದೇಶಗಳಲ್ಲಿ ಜನರು ಕೊಳ್ಳುವ ಪ್ರಮಾಣವು ಚಿಕ್ಕದು. ಅದರ ಮೇಲೆ ಬರುವ ಲಾಭಾಂಶದ ಮೊತ್ತವೂ ಚಿಕ್ಕದಾಗಿರುವುದರಿಂದ ಬಡಜನರಿಗೆ ಇದರಲ್ಲಿ ವಿಶೇಷ

ಆಕರ್ಷಣೆ ತೋರುವುದಿಲ್ಲ. ಭಾರತದಲ್ಲಿ ೨೫ ವರ್ಷಗಳಿಂದ ಸಹಕಾರಿ ಚಳುವಳಿ ನಡೆಯುತ್ತಿದ್ದರೂ ಅದು ಇನ್ನೂ ಕುಂಟುತ್ತಲೇ ಇದೆ (೨) ಷೆಯರುದಾರರ ಪಾಲಿನ ಮೇಲೆ ಸ್ಥಿರಬಡ್ಡಿಯನ್ನು ತೆರಬೇಕಾಗಿರುವುದರಿಂದಲೂ, ಅವರ ಷೆಯರಿನ ಮೊಬಲಗನ್ನು ಹಿಂದೆ ಕೇಳಿದ ಕೂಡಲೇ ಒಪ್ಪಿಸಬೇಕಾಗಿರುವುದರಿಂದಲೂ, ಸಹಕಾರಿ ಸಂಘಗಳು ನಷ್ಟಸಂಭವವುಳ್ಳ ಸಾಹಸೋದ್ಯಮಗಳಲ್ಲಿ ಕೈಯಿಕ್ಕುವ ಹಾಗಿಲ್ಲ

**(೭) ಸರ್ವಜನೋಪಯೋಗಿ ಸಂಸ್ಥೆಗಳು:–** ರೈಲು, ಟೆಲಿಫೋನು ಅಂಚೆ ಮುಂತಾದುವು ಈ ವರ್ಗಕ್ಕೆ ಸೇರುವುವು. ಇವುಗಳನ್ನು ಆರಂಭಿಸಲು ಬೇಕಾದ ಸ್ಥಿರವೆಚ್ಚದ ಪರಿಮಾಣ ಅತಿಶಯವಾದುದು ಇಂಥವುಗಳಲ್ಲಿ ಹೆಚ್ಚಾಗಿ ಪರಮಾವಧಿ ಸಾಮರ್ಥ್ಯದ ಪ್ರಯೋಜನ ದೊರೆಯುವುದಿಲ್ಲ ಒಂದನೆಯದಾಗಿ, ಮುಂದೆ ಬೆಳೆಯಬಹುದಾದ ಬೇಡಿಕೆಗೆ ಈಗಲೇ ಅವಕಾಶ ಮಾಡಿಸಿಟ್ಟುಕೊಳ್ಳಬೇಕು. ಹತ್ತುಸಾವಿರ ಜನರಿಗೆ ೨೦೦ ಅಶ್ವಶಕ್ತಿಯ ವಿದ್ಯುತ್ ಯಂತ್ರವು ಸಾಕೆಂದು, ಅಷ್ಟನ್ನೇ ತಂದರೆ, ಜನ ಹದಿನೈದು ಸಾವಿರವಾದಾಗ ತೊಂದರೆಯಾಗುವುದು. ಆದುದರಿಂದ ಮೊದಲಿನ ಸ್ಥಿರವೆಚ್ಚದಲ್ಲೇ ಮುಂಬರುವ ವಿಕಾಸವನ್ನು ಸೇರಿಸಿಕೊಳ್ಳಬೇಕು. ಬೇಡಿಕೆ ಹೆಚ್ಚಾಗಿರುವಾಗ ಧಾರಣೆ ಹೆಚ್ಚುಮಾಡಬಹುದು. ಟೆಲಿಫೋನಿಗೆ ರಾತ್ರಿಕಾಲದಲ್ಲಿ ಧಾರಣೆಯು ಕಡಮೆ. ಹಗಲಲ್ಲಾದರೆ ಅನುಭೋಗಿಗೆ ರಾತ್ರಿಯ ಎರಡರಷ್ಟು ಛಾರ್ಜು ಮಾಡಿದರೂ ಹಿಡಿಯುತ್ತದೆ. (೧)ಸ್ಥಿರಛಾರ್ಜು: ಮನೆಯಲ್ಲಿ ವಿದ್ಯುತ್ತಿನ ಸಂಬಂಧ ಮಾಡಿಸಿದರೆ ಇಂತಿಷ್ಟೇ ಸ್ಥಿರಛಾರ್ಜು ಎಂದಿರುತ್ತದೆ. ಇದರಿಂದ ಸ್ಥಿರವೆಚ್ಚವು ತುಂಬಿ ಬರಬೇಕು. (೨) ಪರಿವರ್ತನೀಯ ಛಾರ್ಜು: ಯುನಿಟಿಗೆ ಇಷ್ಟು ಎಂದು ಅನುಭೋಗಿಯು ಉಪಯೋಗಿಸುವ ಪರಿಮಾಣದ ಮೇಲೆ ಹೊಂದಿಕೊಂಡು ಛಾರ್ಜುಮಾಡುವುದು.

**(೮) ರಾಷ್ಟ್ರಸ್ವಾಮ್ಯ:–** ರೈಲು, ಹಡಗುಗಳಲ್ಲಿ ರಾಷ್ಟ್ರವೇ ಬಂಡವಾಳವನ್ನು ಹೂಡಿ ಎಲ್ಲಾ ವ್ಯವಸ್ಥೆಗಳನ್ನು ನೋಡಿಕೊಳ್ಳಬಹುದು. ಇತರ ಜಾಯಿಂಟ್ ಸ್ಟಾಕ್ ಕಂಪೆನಿಗಳನ್ನೂ ರಾಷ್ಟ್ರೀಕರಿಸಬೇಕು, ಅಂದರೆ ರಾಷ್ಟ್ರವು ಅವುಗಳನ್ನು ನಿಯಂತ್ರಿಸಬೇಕು ಎಂಬ ಚಳವಳವು ಪ್ರಗತಿಶೀಲ ರಾಷ್ಟ್ರಗಳಲ್ಲಿ ಈಚೆಗೆ ನಡೆಯುತ್ತಾ ಇದೆ.

## ಏಳನೆಯ ಅಧ್ಯಾಯ

# ಅಪರಿಪೂರ್ಣ ಮೇಲಾಟ

ಅಪರಿಪೂರ್ಣ ಮೇಲಾಟದ ಸರಿಯಾದ ಅರ್ಥವಾಗಬೇಕಾದರೆ ಪರಿಪೂರ್ಣ ಮೇಲಾಟದ ಶರ್ತಗಳು ಯಾವುವೆಂದು ಪರಿಶೀಲಿಸುವುದು ಅಗತ್ಯವಿದೆ. ಒಂದನೆಯದಾಗಿ, ಪರಿಪೂರ್ಣ ಮೇಲಾಟದ ಸನ್ನಿವೇಶವಿರುವಾಗ ಯಾವ ಒಂದು ಸಂಸ್ಥೆಗಾಗಲೀ, ಯಾರೊಬ್ಬ ವ್ಯಕ್ತಿಗಾಗಲೀ, ತನ್ನ ಸ್ವಂತ ನಿರ್ಣಯ ಅಥವಾ ಚಟುವಟಿಕೆಗಳಿಂದ ಸರಕುಗಳ ಧಾರಣೆಗಳನ್ನು ಬದಲಿಸುವ ಸಾಮರ್ಥ್ಯವಿಲ್ಲ. ಒಬ್ಬ ಕಿಲಮುಂತ ಸೋಜನು ಈ ವರ್ಷ ಎರಡು ಎಕರೆ ಸ್ಥಳದಲ್ಲಿ ಕಬ್ಬು ಬೆಳೆಯಿಸಿದುದರ ಕಾರಣವಾಗಿ ಕಬ್ಬಿನ ಮಾರ್ಕೆಟು ಧಾರಣೆಯಲ್ಲಿ ಯಾವ ವ್ಯತ್ಯಾಸವೂ ಬರಲಾರದು. ಏಕೆಂದರೆ, ಒಟ್ಟು ದೇಶದಲ್ಲಿ ಉತ್ಪನ್ನವಾಗುವ ಕಬ್ಬಿನಲ್ಲಿ ಕಿಲಮುಂತ ಸೋಜನು ಉತ್ಪಾದಿಸುವ ಕಬ್ಬಿನ ಪ್ರಮಾಣ ತೀರಾ ಅಲ್ಪ ಅಲ್ಲದೆ ಪರಿಪೂರ್ಣ ಮೇಲಾಟ ಇರುವಾಗ ಗಿರಾಕಿಗಳೂ ಮೇಲಾಟಗಾರರೂ ಲಕ್ಷಗಟ್ಟಲೆ ಸಂಖ್ಯೆಯಲ್ಲಿರುವುದರಿಂದ ಈ ಪರಿಸ್ಥಿತಿಯಲ್ಲಿ ಒಬ್ಬ ವ್ಯಕ್ತಿ ಅಥವಾ ಒಂದು ಫರ್ಮಿನ ಚಟುವಟಿಕೆಯು ಭೀಮನ ಹೊಟ್ಟೆಗೆ ಕಾಸಿನ ಮಜ್ಜಿಗೆಯಷ್ಟೇ ಆಗುವುದು. ಎರಡನೆಯದಾಗಿ, ಪರಿಪೂರ್ಣ ಮೇಲಾಟದಲ್ಲಿ ಒಂದು ವೃತ್ತಿಯಿಂದ ಇನ್ನೊಂದು ವೃತ್ತಿಗೆ ಅವಯವಗಳು ಸ್ವತಂತ್ರವಾಗಿ, ಅನಿರ್ಬಂಧಿತವಾಗಿ ಚಲಿಸುವು ಃ ಹತ್ತಿಯ ಗಿರಣಿಗಿಂತ ರೇಶಿಮೆಯ ಗಿರಣಿಯಲ್ಲಿ ಹೆಚ್ಚು ಕೂಲಿ ಸಿಗುವಂತಿದ್ದರೆ ಕಾಮಗಾರರು ಕೂಡಲೆ ರೇಶಿಮೆಯ ಗಿರಣಿಗೆ ಬರಬಹುದು ಭೂಮಿಯಿಂದ ಬೆಳೆ ತೆಗೆಯುವುದಕ್ಕಿಂತ ಕಲ್ಲೆಣ್ಣೆ ತೆಗೆಯುವುದು ಹೆಚ್ಚು ಪ್ರತಿಫಲ ಕೊಡುವಂತಾದರೆ, ಭೂಮಿಯನ್ನು ಕಲ್ಲೆಣ್ಣೆಗೇ ಉಪಯೋಗಿಸುವರು. ಬೀಡಿಯ ಉದ್ಯಮಕ್ಕಿಂತ ಸಿಗರೇಟಿನ ಉದ್ಯಮದಲ್ಲಿ ಅಧಿಕವಾದ ಲಾಭವ ಬರುವ ಹಾಗಿದ್ದರೆ ಸಂಚಾಲಕರು ಸಿಗರೇಟಿನ ಉದ್ಯಮಕ್ಕೆ ತಮ್ಮ ಬಂಡವಾಳವನ್ನು ಸಾಗಿಸುವರು. ಆದರೆ ನಿಜವಾಗಿಯೂ ವಸ್ತುಸ್ಥಿತಿ ಹೀಗಿರುವುದಿಲ್ಲ. ಒಮ್ಮೆ ಒಂದು ವ್ಯವಸಾಯವನ್ನು

ಸ್ವೀಕರಿಸಿದ ಬಳಿಕ ಫಕ್ಕನೆ ಇನ್ನೊಂದು ಹಾದಿ ಹಿಡಿಯುವುದು ಸುಲಭ ಸಾಧ್ಯವಲ್ಲ. ಟ್ರೇಡ್ ಯೂನಿಯನ್ (ಕಾರ್ಮಿಕ ಸಂಘ)ಗಳ ಒತ್ತಾಯವೂ, ಸರಕಾರದ ಶಾಸನಗಳೂ, ಅಲ್ಲದೆ ಇತರ ಅನೇಕ ವರ್ಚಸ್ಸುಗಳೂ ವಿವಿಧ ರೀತಿಯಲ್ಲಿ ಉದ್ಯಮಗಳ ಮೇಲೆ ಪರಿಣಾಮ ಮಾಡುವುವು

ಉತ್ಪಾದಕನಿಗೆ ಧಾರಣೆಯಲ್ಲಿ ಯಾವ ಹತೋಟಿಯೂ ಇಲ್ಲದಂತಾಗಬೇಕಾದರೆ ಅವನ ಉತ್ಪತ್ತಿಯು ಇನ್ನೊಬ್ಬ ಉತ್ಪಾದಕನ ಉತ್ಪತ್ತಿಗೆ ಸರ್ವ ವಿಧಗಳಲ್ಲಿಯೂ ಸರಿಹೋಲಬೇಕು. ವಿಮ್ಕೋ ಬೆಂಕಿಪೆಟ್ಟಿಗೆಯೂ ಕಾಕಾ ಬೆಂಕಿಪೆಟ್ಟಿಗೆಯೂ ಗ್ರಾಹಕರ ದೃಷ್ಟಿಗೆ ಒಂದೇ ಸರಕೆಂದು ಕಂಡು ಬರಬೇಕು. ವಿಮ್ಕೋ ಕಂಪೆನಿಯ ಖ್ಯಾತಿ ಕೇಳಿಯೋ, ಅದನ್ನು ಮಾರುವವನ ರೂಪಕ್ಕೆ ಮೋಹಿಸಿಯೋ, ಆ ಕಾರ್ಖಾನೆಯು ನಮ್ಮೂರಿನ ಪಕ್ಕದಲ್ಲೇ ಇರುವುದನ್ನು ಗಮನಿಸಿಯೋ, ನಾವು ಅದನ್ನಾರಿಸಿದೆವೋ ಆಗ ವಿಮ್ಕೋ ಕೇವಲ 'ಬೆಂಕಿಪೆಟ್ಟಿಗೆ' ಎನಿಸುವ ಸಾಮಾನ್ಯ ಸರಕಲ್ಲ. ಅದು 'ವಿಮ್ಕೋ' ಬೆಂಕಿಪೆಟ್ಟಿಗೆ, ಬೇರೆಯೇ ಒಂದು ಸರಕು; ಅನುಭೋಗಿಗೆ 'ವಿಮ್ಕೋ' ಹೆಚ್ಚು ಉಪಯುಕ್ತತೆಯನ್ನು ಕೊಡುತ್ತದೆ, ಇದಕ್ಕೋಸ್ಕರ ಬೇಕಿದ್ದರೆ ಅವನು ಮೂರು ಕಾಸು ಹೆಚ್ಚು ಬೆಲೆ ಕೊಡಲೂ ಸಿದ್ಧನಾಗಿದ್ದಾನೆ. ಇದನ್ನು ತಿಳಿದ ವಿಮ್ಕೋ ಸಂಚಾಲಕರು ತಮ್ಮ ಉತ್ಪತ್ತಿಗೆ ಮಾರ್ಕೆಟು ಧಾರಣೆಗಿಂತ ಮೂರು ಕಾಸು ಹೆಚ್ಚು ಬೆಲೆ ಕಟ್ಟುತ್ತಾರೆ. ಇಷ್ಟಾಗುವಾಗ ಪರಿಪೂರ್ಣ ಮೇಲಾಟವು ಮಂಗಮಾಯವಾದಂತಲ್ಲವೆ?

ಸರಕುಗಳು ಏಕರೂಪದುವಾಗಿದ್ದು ಉತ್ಪಾದಕರಿಗೆ ಅವುಗಳ ಧಾರಣೆಯಲ್ಲಿ ಹೆಚ್ಚುಕಡಿಮೆ ಮಾಡಲು ಆಗದಿರುವುದು ಪರಿಪೂರ್ಣ ಮೇಲಾಟದ ಮೊದಲನೆಯ ಶರ್ತ. ಅವಯುವಗಳು ಸ್ವಚ್ಛಂದವಾಗಿ ಸಂಚಲಿಸುವುದು ಎರಡನೆಯ ಶರ್ತ.

**ಪರಿಪೂರ್ಣ ಮೇಲಾಟವು ಒದಗಿಸುವ ಸೌಕರ್ಯ, ಅಸೌಕರ್ಯಗಳು:**

೧. A ಸರಕಿನ ಉತ್ಪಾದನೆಯನ್ನು ಕಡಿಮೆಮಾಡಿ B ಯನ್ನು ಹೆಚ್ಚಿಸುವುದರಿಂದ ಒಬ್ಬ ಅನುಭೋಗಿಗೆ ಅಹಿತವನ್ನು ಮಾಡದೆ ಇನ್ನೊಬ್ಬನಿಗೆ ಹಿತವಾಗಲು ಶಕ್ಯವಿಲ್ಲ.

೨ ನಿರ್ದಿಷ್ಟ ಪ್ರಮಾಣದ ಅವಯಗಳನ್ನುಪಯೋಗಿಸುತ್ತಿರುವಾಗ A ಸರಕಿನ ಉತ್ಪಾದನೆಯನ್ನು ಕಡಿಮೆಮಾಡದೆ Bಯ ಉತ್ಪಾದನೆಯ ಪರಿಮಾಣವನ್ನು ಹೆಚ್ಚಿಸುವಂತಿಲ್ಲ ಆದುದರಿಂದ ಸಮಗ್ರ ಉತ್ಪನ್ನವು ಯಾವಾಗಲೂ ಪರಮಾವಧಿ ಮಟ್ಟದಲ್ಲೇ ಇರುತ್ತದೆ.

೩ ಪ್ರತಿಯೊಂದು ಫರ್ಮೂ 'ಒಪ್ಟಿಮಮ್ ಫರ್ಮ್' ಆಗಿರುವುದು. ಅಂದರೆ, ಪ್ರತಿಯೊಂದು ಉದ್ಯಮಕ್ಕೂ ಅದಕ್ಕೆ ಉಚಿತವೆನಿಸುವ ಅತ್ಯಂತ ಸಮರ್ಥ ಗಾತ್ರವೇ ಹೊಂದಿಕೊಳ್ಳುವುದು.

ಪರಿಪೂರ್ಣ ಮೇಲಾಟದಿಂದ ಒದಗುವ ಕೆಲವು ಹಾನಿಗಳು ಯಾವುವು ಎಂಬುದನ್ನು ಇನ್ನು ಪರಿಶೀಲಿಸುವ

೧. ಅನುಭೋಗಿಗಳ ಕೈಯಲ್ಲೇ ಆಯ್ಕೆಯ ಪೂರ್ಣಸ್ವಾತಂತ್ರ್ಯವಿರುವ ಪರಿಪೂರ್ಣ ಮೇಲಾಟದ ಸಮಾಜದಲ್ಲಿ ಜನರು ತಮಗೆ ಹಿತಕರವಾಗುವ ಸರಕುಗಳಿಗೆ ಮಾತ್ರವೇ ತಮ್ಮ ವರಮಾನವನ್ನು ವಿನಿಯೋಗಿಸುವ ತಿಳಿವಳಿಕೆಯುಳ್ಳವರೆಂದು ಖಚಿತವಾಗಿ ಹೇಳಲಾರೆವು ಹೆಂಡ, ಸರಾಯಿ, ಗಾಂಜಾ ಮುಂತಾದ ದ್ರವ್ಯಗಳು ಹಾನಿಕಾರಕವೆಂದು ತಿಳಿದೂ ತಿಳಿದು ಅನುಭೋಗಿಯು ಪುತ್ತೆ ಮತ್ತೆ ಅವನ್ನೇ ಬಯಸುವ ಪಕ್ಷಕ್ಕೆ ಸರಕಾರವು ಕೊನೆಗೊಮ್ಮೆ ಉಚಿತ ಕಾರ್ಯಕ್ರಮಗಳನ್ನು ಕೈಗೊಳ್ಳುವ ಪ್ರಸಂಗ ಬಂದೇ ಬರುತ್ತದೆ

೨. ಪರಿಪೂರ್ಣ ಮೇಲಾಟದ ಸಮಾಜದಲ್ಲಿ ವರಮಾನದ ವಿತರಣೆಯು ನ್ಯಾಯಪೂರ್ವಕವಾಗಿ ಜರಗುವುದಿಲ್ಲ. ಇದಕ್ಕೆ ಜಗತ್ತಿನ ಬಂಡವಾಳಗಾರ ರಾಷ್ಟ್ರಗಳ ಸಾಮಾನ್ಯ ಜನರ ಬಡತನವು ಸಾಕ್ಷಿಯಾಗಿದೆ. ಮುಂಬಯಿಯಲ್ಲಿ ಸೇರ ಮಹಾಜನಗಳು ಎಷ್ಟು ವೈಭವದಲ್ಲಿದ್ದರೇನು, ಸರಿಯಾದ ವಸತಿ ಸೌಕರ್ಯವಿಲ್ಲದ ಕೂಲಿಕಾರರು ಲಕ್ಷೋಪಲಕ್ಷವಾಗಿ ಕಾಲುದಾರಿಯ ಮೇಲೆ ಮಲಗಿ ನಿದ್ರಿಸುವುದಿಲ್ಲವೆ? ದುಡಿಮೆಗಾರರಿಗೆ ಅವರ ದುಡಿಮೆಯ ಪೂರ್ಣ ಪ್ರತಿಫಲವು ದೊರೆಯುವುದಿಲ್ಲವೆಂದೂ, "ಮಿಗುತಿ ಮೌಲ್ಯ"ವನ್ನು ಬಂಡವಾಳಗಾರರು ಸೂರೆಮಾಡುವರೆಂದೂ ಮಾರ್ಕ್ಸ್ ಹೇಳಿದುದು ಯಾವ ಕಾಲಕ್ಕೂ, ದೇಶಕ್ಕೂ, ಅನ್ವಯಿಸುವ ಮಾತು.

**ಅಪರಿಪೂರ್ಣ ಮೇಲಾಟ:**

ಒಂದು ಸರಕಿನ ಸಂಪೂರ್ಣ ನಿಯಂತ್ರಣವು ಒಬ್ಬ ವ್ಯಕ್ತಿ ಅಥವಾ ಸಂಸ್ಥೆಯ ಅಧೀನವಾಗಿರುವ ಪರಿಸ್ಥಿತಿಗೆ "ನಿರಂಕುಶ ಮೊನೊಪಲಿ" ಎನ್ನುತ್ತಾರೆ. ಇದು ಪರಿಪೂರ್ಣ ಮೇಲಾಟಕ್ಕೆ ಧ್ರುವವಿರುದ್ಧವಾದುದು. ಆದರೆ ವಾಸ್ತವಿಕ ಪ್ರಪಂಚದಲ್ಲಿ ಪರಿಶುದ್ಧ ಮೇಲಾಟವೂ ಇಲ್ಲ, ನಿರಂಕುಶ ಮೊನೊಪಲಿಯೂ ಇಲ್ಲ. ಇವುಗಳ ನಡುವೆ ಇರತಕ್ಕ ಯಾವುದೋ ಒಂದು ಪರಿಸ್ಥಿತಿ ಇರುತ್ತದೆ. ಅದಕ್ಕೆ 'ಅಪರಿಪೂರ್ಣ ಮೇಲಾಟ'ವೆಂದು ಹೆಸರಿಡಬಹುದು. ಅವಯವಗಳ ಸಂಚಲನೆಯು ಪೂರ್ಣ ಸ್ವತಂತ್ರವಾಗಿರುವುದಿಲ್ಲ; ಒಂದು ಬಗೆಯ ಸರಕನ್ನೇ ಮಾರುವ ಅಸಂಖ್ಯಾತ ಮಾರಾಟಗಾರರಿರುವುದಿಲ್ಲ; ಉತ್ಪಾದಕರಿಗೆ ತಾವು ತಯಾರಿಸುವ ಸರಕಿನ ಪರಿಮಾಣದ ಮೇಲೂ, ಅದರ ಧಾರಣೆಯ ಮೇಲೂ ಏನೋ ಸ್ವಲ್ಪ ವರ್ಚಸ್ಸು ಇದ್ದೇ ಇದೆ; ಒಬ್ಬನು ಮಾರುವ ಸರಕಿನಂತಹುದೇ ಸರಕನ್ನು ಮಾರುವವನು ಇನ್ನೊಬ್ಬನಿರಲಾರ. ಬೇರೆ ಬೇರೆ ಛಾಪು, ಟ್ರೇಡ್‌ಮಾರ್ಕು, ಪೇಟೆಂಟು ಮೊದಲಾದುವುಗಳ ದೆಸೆಯಿಂದ ಸರಕುಗಳು ಬೇರೆ ಬೇರೆ ಎಂದೆನಿಸುತ್ತವೆ. ಒಬ್ಬ ಮಾರಾಟಗಾರನು ಯಾವಾಗಲೂ ಒಂದು ತೂಕ ಸರಕು ಕಡಿಮೆ ಕೊಡುವವನೆಂದು ನಮಗೆ ಗೊತ್ತಿದ್ದರೂ ಆತನ ಮೇಲೆ ಗ್ರಾಹಕರಿಗೆ ಬೇರೆ ಯಾವ ಕಾರಣಗಳಿಂದಲೋ ಒಲವು ಇದ್ದರೆ ಅವರು ಅವನ ಸರಕಿಗೆ ಒಂದಾಣೆ ಹೆಚ್ಚು ಕೊಟ್ಟು ಕೊಂಡುಕೊಳ್ಳುವುದಕ್ಕೂ ಹಿಂಜರಿಯುವುದಿಲ್ಲ ತಮ್ಮದು ವೈಶಿಷ್ಟ್ಯಪೂರ್ಣ ಸರಕೆಂದು ವಿಮ್ಕೋದವರು ಬೆಂಕಿಪೆಟ್ಟಿಗೆಗೆ ನಾಲ್ಕಾಣೆ ಬೆಲೆ ಹಾಕುವಂತೆಯೂ ಇಲ್ಲ ಜನರ ವಿಮ್ಕೋ ಪ್ರೀತಿಯು ಧಾರಣೆಯ ಹೆಚ್ಚಳದಿಂದ ಗಗನಕ್ಕೆ ಹಾರಿ ಅವರು 'ಕಾಕಾ'ವನ್ನು ಒಲಿಯುವ ಸಂದರ್ಭ ಬರಬಹುದು. ಸರಕುಗಳಿಗೆಲ್ಲ ಪರಸ್ಪರ ಸಂಬಂಧವಿದ್ದೇ ಇದೆಯಷ್ಟೆ. ನಿಶ್ಚಿತ ವರಮಾನವುಳ್ಳ ಅನುಭೋಗಿ ಪ್ರತಿಯೊಂದು ಸರಕಿಗೂ ಇಷ್ಟೇ ವೆಚ್ಚಮಾಡಬೇಕೆಂದು ಮೊದಲೇ ನಿರ್ಣಯಿಸಿರುತ್ತಾನೆ. ಆದುದರಿಂದ ಸರಕುಗಳ ಬೆಲೆಗಳ ಏರಿಳಿತದಿಂದ ಗಿರಾಕಿಯ ವರ್ತನೆಯು ಅಷ್ಟೊಂದು ಪರಿವರ್ತಿತವಾಗುವುದಿಲ್ಲ. ಪ್ರತಿಯೊಬ್ಬ ಉತ್ಪಾದಕನೂ ಒಂದು ವಿಶಿಷ್ಟ ಬಗೆಯ ಸರಕಿನ ಒಡೆಯನಾಗಿ

ರುತ್ತಾನೆ; ಅಂಥ ಸರಕಿಗೆ ಹತ್ತಿರವಾಗಿದ್ದು ಅದನ್ನು ಹೋಲುವ ಇತರ ಪ್ರತಿನಿಧಾನಗಳ ಮೇಲಾಟವನ್ನು ಆತ ಅನುಭವಿಸುತ್ತಾನೆ. ಉತ್ಪತ್ತಿಗಳ ಪರಿಮಾಣವಾಗಲೀ, ಧಾರಣೆಗಳ ಏರಿಳಿತವಾಗಲೀ ನಿರಂಕುಶವಾಗಿ ನಡೆಯುವುದಿಲ್ಲ. ಎಲ್ಲ ಉತ್ಪಾದಕರೂ ಸ್ವಲ್ಪ ಮಟ್ಟಿನ ಮೇಲಾಟಗಾರರು, ಸ್ವಲ್ಪ ಮಟ್ಟಿನ ಮೊನೊಪಲಿಗಾರರು ಆಗಿರುವುದೇ ಲೋಕರೂಢಿ.

**ನಿರಂಕುಶ ಮೊನೊಪಲಿ :**

ಮೊನೊಪಲಿಗಾರನಿಗೆ ಒಂದೋ ಧಾರಣೆ ಅಥವಾ ಉತ್ಪಾದನೆಯ ಗಾತ್ರ ಇವೆರಡರಲ್ಲೊಂದನ್ನು ನಿರ್ಣಯಿಸುವ ಅಧಿಕಾರವಿರುತ್ತದೆ. ಧಾರಣೆಯ ಮೇಲೆ ಅವನ ವರ್ಚಸ್ಸು ನಡೆದು ಅವನು ಹೇಳಿದ ಧಾರಣೆಯೇ ಮಾರ್ಕೆಟಿನಲ್ಲಿ ನಿಂತರೆ ಆಗ ಸರಕಿನ ಉತ್ಪಾದನೆಯ ಗಾತ್ರವು ಜನರ ಬೇಡಿಕೆಯನ್ನನುಸರಿಸುವುದು. ಆ ಸರಕಿಗೆ ಪ್ರತಿನಿಧಾನಗಳು ಕಡಿಮೆಯಾಗುತ್ತ ಬಂದ ಹಾಗೆ ಧಾರಣೆಯ ಮೇಲೆ ಮೊನೊಪಲಿಗಾರನಿಗಿರುವ ವರ್ಚಸ್ಸೂ ಹೆಚ್ಚುವುದು ಉತ್ಪಾದನೆಯ ಗಾತ್ರ (ಪೂರೈಕೆಯ ಪರಿಮಾಣ)ವನ್ನು ಆತನು ನಿಶ್ಚಯಿಸುವ ಪಕ್ಷಕ್ಕೆ ಧಾರಣೆಯನ್ನು ಅನುಭೋಗಿಗಳು ನಿರ್ಣಯಿಸಬಲ್ಲರು.

ಮೊನೊಪಲಿ ಧಾರಣೆಯು ನಿರ್ಣಯವಾಗುವುದನ್ನು ಒಂದು ಉದಾಹರಣೆಯಿಂದ ಸ್ಪಷ್ಟಪಡಿಸುವ ಪರಿಪೂರ್ಣ ಮೇಲಾಟವಿರುವಾಗ ಒಬ್ಬ ಸಂಚಾಲಕನ ಉತ್ಪನ್ನದ ಬೆಸೆಯಿಂದ ಧಾರಣೆಯು ವ್ಯತ್ಯಾಸವಾಗುವುದಿಲ್ಲವೆಂದೂ, ಪರಿಸರದ ಆದಾಯುವು ಯಾವಾಗಲೂ ಧಾರಣೆಗೆ ಸಮನಾಗಿರುವುದೆಂದೂ ಈ ಹಿಂದೆ ಕಂಡಿರುವೆವು ಆದರೆ ನಿರಂಕುಶ ಮೊನೊಪಲಿಯಲ್ಲಿ ಹಾಗಲ್ಲ. ಮೊನೊಪಲಿಗಾರನ ಉತ್ಪನ್ನವು ಧಾರಣೆಯ ಮೇಲೆ ತಕ್ಷಣ ಪರಿಣಾಮವನ್ನುಂಟುಮಾಡುವುದು ಹತ್ತು ಲಕ್ಷ ಕಿತ್ತಳೆಹಣ್ಣು ನಮ್ಮ ಉತ್ಪನ್ನವೆಂದೂ, ಕಿತ್ತಳೆಯ ಧಾರಣೆಯು ೧೦೦ಕ್ಕೆ ೪ ರೂಪಾಯಿಯೆಂದೂ ಭಾವಿಸೋಣ ಉತ್ಪಾದನೆಯನ್ನು ಹನ್ನೊಂದು ಲಕ್ಷಕ್ಕೆ ಏರಿಸಿದಾಗ ಧಾರಣೆಯು ರೂ. ೩—೧೪—೦ ಆದರೆ ಅವನ ಪರಿಸರದ ಆದಾಯುವು ನೂರಕ್ಕೆ ೨ ೬ ೨೫ ರೂಪಾಯಿಗಳಾಗುವುದು. (೧೧೦೦೦ × ೩$\frac{೭}{೮}$) — (೧೦೦೦೦ × ೪)

= ರೂ. ೪೨,೬೨೫ — ರೂ. ೪೦,೦೦೦.

= ರೂ. ೨,೬೨೫.

= ನೂರಕ್ಕೆ ರೂ ೨.೬೨೫.

ಸರಾಸರಿ ಆದಾಯವು (ಧಾರಣೆ) ರೂ. ೩—೧೪—೦ ಆದರೂ ಪರಿಸರದ ಆದಾಯವು ರೂ. ೨ ೬೨೫ ಆಗುತ್ತದೆ. ಮೊನೊವಲಿ ಸನ್ನಿವೇಶದಲ್ಲಿ ಉತ್ಪನ್ನವು ಹೆಚ್ಚಿದಂತೆ ಸರಾಸರಿ ಆದಾಯದ (ಧಾರಣೆಯ) ಕಮಾನು ಬೀಳುವುದು ಖಂಡಿತ; ಆದರೆ ಪರಿಸರದ ಆದಾಯದ ಕಮಾನು ಇದಕ್ಕೂ ಜೋರಾಗಿ ಬೀಳುವುದರಲ್ಲಿ ಸಂದೇಹವಿಲ್ಲ. ಸರಾಸರಿ ಆದಾಯವು ಯಾವಾಗಲೂ ಪರಿಸರದ ಆದಾಯಕ್ಕಿಂತ ಹೆಚ್ಚಾಗಿರುವುದು. ಆದುದರಿಂದ ಪರಿಸರದ ಆದಾಯವು ಪರಿಸರದ ವೆಚ್ಚದಷ್ಟೇ ಆಗಿದ್ದರೆ ಇವೆರಡೂ ಧಾರಣೆಗಿಂತ ಕಡಿಮೆ ಎಂದು ನಿಶ್ಚಯವಾಗಿ ಹೇಳಬಹುದು. ವೆಚ್ಚದ ಕತೆ ಏನೇ ಇರಲಿ, ಮೊನೊಪಲಿ ಸನ್ನಿವೇಶದಲಿ ಹೆಚ್ಚು ಉತ್ಪನ್ನಕ್ಕೆ ಹೆಚ್ಚು ಸಮಗ್ರವೆಚ್ಚವೂ, ಕಡಿಮೆಗೆ ಕಡಿಮೆ ವೆಚ್ಚವೂ ತಗಲುತ್ತದೆ. ಪರಿಸರದ ವೆಚ್ಚವೂ, ಪರಿಸರದ ಆದಾಯವೂ, ಧಾರಣೆಯೂ, ಮೂರೂ ಧನಾತ್ಮಕವಾಗಿಯೇ (+) ಇರುತ್ತವೆ.

## ಮಾರಾಟದ ವೆಚ್ಚ:

ಪರಿಪೂರ್ಣ ಮೇಲಾಟದ ಫರ್ಮುಗಳಿಗೆ ಮಾರಾಟದ ವೆಚ್ಚವಿರುವುದಿಲ್ಲ. ಸರಕಿನಲ್ಲಿ ಏಕರೂಪತೆಯು ಅಧಿಕವಾದಂತೆ ಮಾರಾಟದ ವೆಚ್ಚದ ಆವಶ್ಯಕತೆ ಕಡಿಮೆಯಾಗುತ್ತ ಹೋಗುವುದು. ಒಂದೇ ಬಗೆಯ ಸರಕುಗಳಿಗೆ ಮಾರಾಟದ ವೆಚ್ಚವು ತೀರಾ ಅನಗತ್ಯ ಆದರೆ ಒಂದು ಬಗೆಯ ಸರಕು ತಯಾರಿಸಲು ಒಂದು ಉದ್ಯಮದಲ್ಲಿರುವ ಹಲವಾರು ಫರ್ಮುಗಳು ಪ್ರತ್ಯೇಕ ಪ್ರತ್ಯೇಕವಾಗಿ ಮಾರಾಟದ ವೆಚ್ಚಕ್ಕೆ ಒಳಗಾಗದಿದ್ದರೂ ಇಡಿ ಉದ್ಯಮವೇ "ಹೆಚ್ಚು ಹಣ್ಣು ತಿನ್ನಿರಿ," "ಹೆಚ್ಚು ಫೂಸ್ಫೇಟು ಉಪಯೋಗಿಸಿರಿ," ಎಂದು ಜಾಹೀರಾತು ಹೊರಡಿಸಿ ವೆಚ್ಚದ ಹಾದಿಯಲ್ಲಿ ನಡೆಯಬಹುದು. ಸರಕುಗಳಲ್ಲಿ ವೈವಿಧ್ಯವು ಅತಿಶಯವಾದ ಹಾಗೆ ಪ್ರತಿಯೊಂದು ಫರ್ಮೂ ತನ್ನ ಸರಕನ್ನು ಮಾರಾಟ ಮಾಡುವುದಕ್ಕಾಗಿಯೂ,

ಗಿರಾಕಿಗಳ ಬೇಡಿಕೆಯನ್ನು ತನ್ನ ಕಡೆಗೆ ಒಲಿಸುವುದಕ್ಕಾಗಿಯೂ ಹಣವನ್ನು ಖರ್ಚು ಮಾಡಬೇಕು ಇದೇ "ಮಾರಾಟದ ವೆಚ್ಚ"ವೆನಿಸುವುದು. ಅಪರಿಪೂರ್ಣ ಅಥವಾ ಮೊನೊಪಲಿ ಮೇಲಾಟದಲ್ಲಿ ಮಾರಾಟದ ವೆಚ್ಚವು ಬಹು ಮುಖ್ಯವಾದುದು. ಏಕೆಂದರೆ, ಸರಕಿನ ಧಾರಣೆಯನ್ನು ಕಡಿಮೆಮಾಡಿ ಗಿರಾಕಿಗಳನ್ನು ಆಕರ್ಷಿಸುವುದಕ್ಕಿಂತ 'ಮಾರಾಟದ ವೆಚ್ಚ'ವನ್ನು ಹೆಚ್ಚಿಸುವುದರಿಂದ ಮಿತವ್ಯಯ ಉಂಟಾಗಬಹುದು. ಧಾರಣೆ ಕಡಿತದ ಸಮರದ ಬದಲು ಜಾಹೀರಾತು ಸಮರವು ಆರಂಭವಾಗಬಹುದು. ಈ ವರ್ಷ 'ಪ್ಲೇಯರ್ಸ ನೇವೀಕಟ್'ನವರು ಯಾವ ಸ್ಥಳದಲ್ಲಿ ತಮ್ಮ ದೊಡ್ಡ ಜಾಹೀರಾತು ಹಲಗೆಯನ್ನು ತೂಗಿಸಿದ್ದಾರೋ, ಅಲ್ಲಿ ಮರುವರ್ಷ ಎಷ್ಟಾದರೂ ಹಣ ತೆತ್ತು ತನ್ನ ಮಹಿಮೆಯನ್ನು ಸಾರಬೇಕೆಂದು ಗೋಲ್ಡ್‌ಫ್ಲೇಕ್ ಸಿಗರೇಟು ಕಂಪೆನಿಯು ಯೋಚಿಸಬಹುದು. 'ಸಿಸರ್ಸ್'ದವರ "ನೀವೇನು ಮರೆತಿರೆಂಬುದು ನಿಮಗೇ ಗೊತ್ತಿಲ್ಲ" ಎಂಬ ಇಂದಿನ ಹಿಂದೂ ಪತ್ರಿಕೆಯ ಕಲಮಿನಲ್ಲಿ ನಾಳೆ 'ಬೇರ್ಸ್'ದವರ ಆನೆ ನಿಂತಿರಬಹುದು. ಒಂದು ಸಿನಿಮಾ ಕಂಪೆನಿಯು ಅರ್ಧಪುಟದ ಜಾಹೀರಾತು ಹಾಕಿದರೆ ಇನ್ನೊಂದು ಇಡಿ ಪುಟದ ಜಾಹೀರಾತು ಕೊಡಬಹುದು. ಸಹಕಾರಿ ಸಂಘಗಳು ಹಾಲನ್ನು ನಮ್ಮ ಮನೆಬಾಗಿಲಿಗೆ ತಂದೊಪ್ಪಿಸುವ ಕೆಲಸಕ್ಕೆ ವೆಚ್ಚಮಾಡುವುದುಂಟು. ಇವೆಲ್ಲ 'ಮಾರಾಟದ ವೆಚ್ಚ'ಗಳು

**ಮೊನೊಪಲಿ ಮೇಲಾಟದ ನಷ್ಟಗಳು:**

೧ ಬ್ಲೇಡು ತಯಾರಿಸುವ ಉದ್ಯಮದಲ್ಲಿ ಮೊನೊಪಲಿ ಮೇಲಾಟ ಇರುವುದೆಂದು ಭಾವಿಸೋಣ. ಆಗ 'ಜಿಲ್ಲೆಟ್' ಬ್ಲೇಡಿನ ಉತ್ಪಾದಕರು ತಮ್ಮ ಸರಕನ್ನೇ ಉಪಯೋಗಿಸಿರೆಂದು ಪತ್ರಿಕೆಗಳಲ್ಲಿ ನಮ್ಮ ಕಣ್ಣು ಕುಕ್ಕುವಂತೆಯೂ, ಆಕಾಶವಾಣಿಯ ಮೂಲಕ ಕಿವಿ ಕಿವುಡಾಗುವಂತೆಯೂ ಜಾಹೀರಾತು ಮಾಡುವುದರಿಂದ ಸಮಾಜಕ್ಕೆ ವ್ಯರ್ಥವಾದ ನಷ್ಟ ಉಂಟಾಗಬಹುದು. 'ಪೊಲ್ಲೆಟ್' ಕೂಡ ಜಿಲ್ಲೆಟ್‌ನಷ್ಟೇ ಸಮರ್ಪಕವಾಗಿ ಗಡ್ಡ ಕೀಳುವುದರಿಂದ ಯಾವ ಒಂದು ಸರಕನ್ನುಪಯೋಗಿಸಿದರೂ ಸಮಾಜದ ಕೆಲಸವು ಸುಸೂತ್ರವಾಗಿ ಜರಗುತ್ತದೆ. ಹೀಗಿರುವಾಗ ಬರಿಯ ಪೈಪೋ

ಟಿಯ ಸಲುವಾಗಿ ಜಾಹೀರಾತಿನ ಆಡಂಬರಕ್ಕೆ ವೆಚ್ಚ ಮಾಡುವುದು ದುರ್ವ್ಯಯವಲ್ಲವೆ?

೨. ನಮ್ಮ ಉತ್ಪಾದನಾಯಂತ್ರಕ್ಕೆ ಒಪ್ಪುವಂಥ ಸರಕಿನ ತಯಾರಿಯನ್ನು ತೊರೆದು ಗಿರಾಕಿಗಳಿಗೆ ಬೇಕಾಗುವ ಅನೇಕ ತರದ ಸರಕುಗಳ ಉತ್ಪಾದನೆಗೆ ಕೈಹಾಕುವುದು ಮೊನೊಪಲಿ ಮೇಲಾಟದಿಂದ ಒದಗುವ ಎರಡನೆಯ ನಷ್ಟ. ನಮ್ಮ ಯಂತ್ರ ಸಲಕರಣೆಗಳಿಂದ ಪರಮಾವಧಿ ಲಾಭಪಡೆಯುವುದನ್ನು ಬಿಟ್ಟುಬಿಟ್ಟು, ಜಾಹೀರಾತಿನ ವೆಚ್ಚಕ್ಕೆ ಮನ ಸೋತು, ನಮ್ಮ ಅನುಭೋಗಿಗಳ ಅಭಿರುಚಿಗನುಗುಣವಾದ ಸರಕುಗಳನ್ನು ತಯಾರಿಸುವುದರಿಂದ ಫರ್ಮಿಗೆ ಹಿತಲಾಭವಾದರೂ ಒಟ್ಟು ಸಮಾಜಕ್ಕೆ ಒಳಿತಾಗುವುದಿಲ್ಲ.

೩. ಮೊನೊಪಲಿ ಮೇಲಾಟದ ಸನ್ನಿವೇಶದಲ್ಲಿ ಅಲಸಿಗ ಫರ್ಮುಗಳ ಆಯುಷ್ಯರೇಖೆ ಗಟ್ಟಿಯಾಗಿರುತ್ತದೆ. ಪರಿಪೂರ್ಣ ಮೇಲಾಟವಿದ್ದರೆ ಚುರುಕಿನ ಫರ್ಮುಗಳು ಇಂಥ ಅಲಸಿಗ ಸಂಸ್ಥೆಗಳನ್ನು ಆ ಉದ್ಯಮದಿಂದ ಹೊರಗೋಡಿಸಬಲ್ಲವು. ಒಳ್ಳೆ ಸಮರ್ಥವಾದ ತಾಂತ್ರಿಕ ವಿಧಾನಗಳನ್ನು ಬಳಸುವುದಕ್ಕೆ ಸರಕುಗಳಲ್ಲಿ ವೈವಿಧ್ಯ ಕಡಮೆಯಾದರೆ ಉತ್ತಮ ನೂರಾರು ಹೆಸರಿನ ಮೋಟಾರುಕಾರುಗಳಿಗಿಂತ ನಾಲ್ಕಾರು ಒಳ್ಳೆಯ ಮಾದರಿಗಳನ್ನು ಸ್ವೀಕರಿಸಿ, ಅವುಗಳ ಉತ್ಪಾದನೆಗೆ ಅತ್ಯಂತ ಸಮರ್ಥವಾದ ವಿಧಾನಗಳನ್ನುಪಯೋಗಿಸುವುದು ಚಂದ. ಈ ಸಂದರ್ಭದಲ್ಲಿ ಬೃಹತ್ ಉತ್ಪಾದನೆಯ ಮಿತವ್ಯಯವೂ ರೂಢವಾಗಿ ಕಾರಿನ ಧಾರಣೆಯು ಇಳಿಯಲಿಕ್ಕೂ ಅವಕಾಶ ದೊರೆಯುವುದು.

## ಮೊನೊಪಲಿ ನಿಯಂತ್ರಣ:

ಆರ್ಥಿಕಮಂಡಲದಲ್ಲಿ ಅನಾವಶ್ಯಕ ನಷ್ಟವು ಸಂಭವಿಸದಂತೆ ಜಾಗರೂಕತೆ ವಹಿಸುವುದು ರಾಷ್ಟ್ರದ ಪ್ರಥಮ ಕರ್ತವ್ಯವಾಗಿದೆ. ಭಾರತದಂಥ ಹಿಂದುಳಿದ ದೇಶಗಳ ಸಂಪತ್ತಿನ ಬೆಳವಣಿಗೆಯ ಯೋಜನೆಗಳಲ್ಲಿ ಮೂಲ ಸಾಮಗ್ರಿಗಳನ್ನು ಅತ್ಯಧಿಕ ಜಾಗ್ರತೆಯಿಂದಲೂ, ಮಿತವ್ಯಯದಿಂದಲೂ ಬಳಸುವುದು ಅವಶ್ಯವಾಗಿದೆ.

೧. ಮಾರುವವರಲ್ಲಿಯೂ, ಗಿರಾಕಿಗಳಲ್ಲಿಯೂ ಮೊನೊಪಲಿ ಕೂಟಗಳುಂಟಾಗದಂತೆ "ಸಂಯೋಗ ವಿರೋಧಕ ಶಾಸನ"ಗಳಂಥ ಕಾಯಿದೆಗಳನ್ನು ಸರಕಾರವು ರಚಿಸಬೇಕು.

೨ ಗ್ರಾಹಕರ ಮೂಢತನವು ಅಳಿಯುವಂತೆಯೂ, ಅವಯವಗಳ ಸಂಚಲನೆಯು ಅನಿರ್ಬಂಧಿತವಾಗಿ ನಡೆಯುವಂತೆಯೂ, ಜನರಿಗೆ ಶಿಕ್ಷಣ ಕೊಡುವುದು ಡಾಲ್ಡಾ ತಯಾರಿಸುವ ಹಲವಾರು ಫರ್ಮುಗಳು ಜಾಹೀರಾತಿಗಾಗಿ ವ್ಯರ್ಥ ಅಥವಾ ಅಪರಿಮಿತ ವ್ಯಯಮಾಡುವ ಪ್ರಸಂಗ ಕಂಡುಬಂದಲ್ಲಿ ಸರಕಾರವು ಮುಂದೆ ಬಂದು ಡಾಲ್ಡಾ ಕ್ಷೀರಸಾಗರದಿಂದ ಉತ್ಪನ್ನವಾದುದೇನೂ ಅಲ್ಲ, ಅದರಲ್ಲಿ ಇಂಥ ಗುಣಗಳು ಇಂಥ ದುರ್ಗುಣಗಳು ಇವೆ ಎಂಬ ವೈಜ್ಞಾನಿಕ ತಿಳಿವಳಿಕೆಯನ್ನು ಪ್ರಚಾರಿಸಿದರೆ ಜನರಿಗೆ ತುಂಬಾ ಉಪಕಾರವಾಗುವುದು ಗಿರಾಕಿ ಅಥವಾ ಅನುಭೋಗಿಯ ದೃಷ್ಟಿಯಿಂದ ಬೇರೆ ಬೇರೆ ಮಾದರಿಯ ಸರಕುಗಳ ಹಿತಾಹಿತಗಳನ್ನು ಸಂಶೋಧಿಸಿ ಪ್ರಚುರಪಡಿಸುವ ಒಂದು 'ಗ್ರಾಹಕ ಸಂಘ'ವಿದ್ದರೆ ಸಮಾಜಕ್ಕೆ ಎಷ್ಟೋ ಒಳಿತಾಗಬಹುದು. ದಂಡೆತ್ತಿ ಬರುವ ಜಾಹೀರಾತುಗಳ ಉಪಟಳವನ್ನು ತಡೆಗಟ್ಟಲು ಇಂಥ ಒಂದು ಸಂಘದ ಆವಶ್ಯಕತೆಯು ಈಚೀಚೆಗೆ ಬಹಳವಾಗಿ ಕಾಣುತ್ತಾ ಇದೆ.

೩. ವಿಶೇಷ ಹತೋಟಿ:—ರಾಷ್ಟ್ರವಾಗಲಿ ಉತ್ಪಾದಕರಾಗಲಿ ಅನೇಕ ಫರ್ಮುಗಳುಳ್ಳ ಒಂದು ಉದ್ಯಮವನ್ನು ಒಂದು ಕೇಂದ್ರ ಸಂಸ್ಥೆಯ ನಿಯಂತ್ರಣದಲ್ಲಿಡುವ ಏರ್ಪಾಡಿಗೆ 'ವಿಶೇಷ ಹತೋಟಿ' ಎಂಬ ವಿಶಿಷ್ಟ ಹೆಸರಿದೆ. ಗಿರಾಕಿಗಳ ಅವಿವೇಕದಿಂದ ಒದಗುವ ಮೊನೊಪಲಿ ನಷ್ಟಗಳು ಇದರಿಂದ ಮಾಯವಾಗುವುವು. ಫರ್ಮುಗಳೆಲ್ಲ ಒಂದೇ ಆಡಳಿತೆಗೆ ಒಳಗಾಗಿದ್ದರೆ ಬೇರೆ ಬೇರೆ ಜಾಹೀರಾತು ಹೊರಡಿಸುವುದಗತ್ಯವಿಲ್ಲ. ಕೇಂದ್ರ ಸಂಸ್ಥೆಯ ಸಂಚಾಲಕರು ಪರಿಣತಿ ಇಲ್ಲದ ಫರ್ಮುಗಳನ್ನು ಮುಚ್ಚಿ ಅತ್ಯಂತ ಸಮರ್ಥವಾದ ಫರ್ಮುಗಳ ಮೂಲಕವೇ ಸರಕನ್ನು ಉತ್ಪಾದಿಸಬಹುದು. ಆಗ ಸರಕು ಅತಿ ಸಮರ್ಥವಾದ ಫರ್ಮಿನಲ್ಲೇ ತಯಾರಾಗುವುದರಿಂದಾಗಿ ಧಾರಣೆಯು ಇಳಿದು ಗಿರಾಕಿಗಳಿಗೆ ಹಿತವಾಗುವುದೆಂಬುದನ್ನು ಈ ಮೊದಲೇ ಸೂಚಿಸಿರುವೆವು. ಆದರೆ ವಿಶೇಷ ಹತೋಟಿಯು ನಿರುಪದ್ರವಿ ಎಂದು

ತಿಳಿಯುವ ಹಾಗಿಲ್ಲ. ಉದ್ಯಮದ ಗುತ್ತಿಗೆಯೂ, ಸರ್ವಾಧಿಕಾರವೂ ನಿಸ್ಸಂಶಯವಾಗಿ ಅತಿಶಯವಾಗುವುವು ಉದ್ಯಮದ ಸ್ವಾಭಾವಿಕ ಅಭಿವೃದ್ಧಿಯನ್ನು ಹತ್ತಿಕ್ಕುವ 'ಕಾರ್ಟೆಲ್' ಎಂಬ ಮಾರಾಟ ಸರ್ವಾಧಿಕಾರದ ಸಂಸ್ಥೆಯೂ, ಧಾರಣೆಯನ್ನು ಸ್ವೇಚ್ಛೆಯಿಂದ ಏರಿಸಿ ಹೇರಳ ಲಾಭಗಳಿಸುವ ಇಚ್ಛೆಯಿಂದ ಉತ್ಪಾದನೆಯ ಮೊನೊಪಲಿಯನ್ನು ಬಗಲೊಳಗೆ ಹಾಕಿಕೊಳ್ಳುವ 'ಟ್ರಸ್ಟ್', 'ಮರ್ಜರ್', 'ಹೋಲ್ಡಿಂಗ್ ಕಂಪೆನಿ' ಮುಂತಾದ ದುಷ್ಟ ಅವತಾರಗಳೂ, ತಲೆ ಎತ್ತಿದರೆ ಸಮಾಜಕ್ಕೆ ಅಪಾರವಾದ ನಷ್ಟ ಸಂಭವಿಸುವುದು. ಆರ್ಥಿಕ ಮಂಡಲದಲ್ಲಿ ಹಸ್ತಕ್ಷೇಪಮಾಡುವುದು ತನ್ನ ಜೀವನತತ್ತ್ವಕ್ಕೆ ವಿರೋಧವೆಂದು ಬಹಳ ಕಾಲ ಭಾವಿಸಿದ್ದ ಅಮೇರಿಕದ ಸಂಯುಕ್ತರಾಜ್ಯವು ಕೂಡ 'ಕಾರ್ಟೆಲು'ಗಳಂಥ ಸಮಾಜವಿರೋಧಿ ಪ್ರವೃತ್ತಿಗಳನ್ನು ನಿರೋಧಿಸಲು ಸರಕಾರಿ ಶಾಸನವನ್ನು ರಚಿಸಬೇಕಾಯಿತು.

೪. ವಿವಿಧ ಉದ್ಯಮಗಳ ಉತ್ಪತ್ತಿಯನ್ನು 'ಕರತೆರಿಗೆ' ಮತ್ತು 'ಸಹಾಯಧನ'ಗಳ ಏರ್ಪಾಡಿನಿಂದ ನಿಯಂತ್ರಿಸಬಹುದು. ನಮ್ಮ ದೇಶದಲ್ಲಿ ಇನ್ನು ಹತ್ತು ವರುಷಗಳ ತನಕ ಆಹಾರವೇ ಮುಖ್ಯ ಸಮಸ್ಯೆಯಾದುದರಿಂದ ಆಹಾರಧಾನ್ಯಗಳನ್ನು ಬೆಳೆಯಿಸುವವರಿಗೆ ಅವರ ಉತ್ಪನ್ನದ ಮಣಕ್ಕೆ ಇಂತಿಷ್ಟು ಎಂದು 'ಸಹಾಯಧನ' ಒದಗಿಸುವುದೂ, ಹತ್ತಿ, ಕಬ್ಬು, ಹೊಗೆಸೊಪ್ಪು ಮೊದಲಾದ ವಾಣಿಜ್ಯ ಬೇಸಾಯದಲ್ಲಿ ನಿರತರಾದವರ ಮೇಲೆ 'ಕರತೆರಿಗೆ' ಹೊರಿಸುವುದೂ ಒಳ್ಳೆಯ ಉಪಕ್ರಮವೆನಿಸೀತು.

೫. ಧಾರಣೆಯ ನಿಯಂತ್ರಣ:—ಮೊನೊಪಲಿಗಾರರಿಗೆ ಏನು ಮಾಡಿದರೂ ಧಾರಣೆಯನ್ನು ವ್ಯತ್ಯಾಸ ಮಾಡಲು ಆಗದಂತೆ ಸರಕಾರವು ಸ್ವತಃ ಧಾರಣೆಯನ್ನು ನಿರ್ಣಯಿಸಬೇಕು. ಯುದ್ಧ ಮತ್ತು ಯುದ್ಧೋತ್ತರ ಕಾಲಗಳಲ್ಲಿ ನಾವು ಅನುಭವಿಸಿದ ದವಸಧಾನ್ಯ, ಸೀಮೆಎಣ್ಣೆ, ಸಕ್ಕರೆ ಮುಂತಾದ ಪದಾರ್ಥಗಳ ಧಾರಣೆ ನಿಯಂತ್ರಣದಿಂದ ಸಾರ್ವಜನಿಕರಿಗೆ ತುಂಬಾ ಹಿತವೇ ಆಗಿದೆ. ಕಳ್ಳಸಂತೆಯ ಇರವು ಧಾರಣೆ ನಿಯಂತ್ರಣದ ಜತೆಗೇ ಉದ್ಭವಿಸುವುದರಿಂದ ಅನೇಕರು ಇವೆರಡನ್ನು ಕಾರ್ಯಕಾರಣಗಳೆಂದು ತಿಳಿಯುತ್ತಾರೆ. ಕಳ್ಳಸಂತೆಯು ಧಾರಣೆ ನಿಯಂತ್ರಣದ ಶಿಶುವಲ್ಲ, ಅಸಮರ್ಥ ಆಡಳಿತೆಯ ಚೊಚ್ಚಲಗೂಸು.

**ಪಂಕ್ತಿಪರಿಭೇದ ಮಾಡುವ ಮೊನೊಪಲಿ:**

ಪರಿಪೂರ್ಣ ಮೇಲಾಟದಲ್ಲಿ ಮಾರ್ಕೆಟಿನ ಎಲ್ಲ ಕಡೆಗಳಲ್ಲಿಯೂ ಧಾರಣೆ ಒಂದೇ ಆಗಿರುತ್ತದೆ. ಧಾರಣೆಯಲ್ಲಿ ವ್ಯತ್ಯಾಸ ತರುವ ಶಕ್ತಿ ಯಾರೊಬ್ಬ ಸಂಚಾಲಕನಿಗೂ, ಮಾರಾಟಗಾರನಿಗೂ ಇರುವುದಿಲ್ಲ. ಆದರೆ ಇಡಿ ಮಾರ್ಕೆಟಿನ ಮೇಲೆ ತನ್ನ ವರ್ಚಸ್ಸನ್ನು ಬೀರಬಲ್ಲ ಮೊನೊಪಲಿ ಗಾರನು (ಗುತ್ತಿಗೆದಾರ) ಮಾರ್ಕೆಟಿನ ಒಂದೊಂದು ಪಾರ್ಶ್ವಕ್ಕೆ ಒಂದೊಂದು ಧಾರಣೆಯನ್ನು ಸೂಚಿಸಬಲ್ಲನು. ಸುಂಕದ ಹೇರು, ಸಾಗುವಾಡಿನ ವೆಚ್ಚ ಗಳನ್ನು ಗಮನಿಸಿ ಮಾರ್ಕೆಟಿನಲ್ಲಿ ಒಂದು ಕಡೆ ಹೆಚ್ಚು, ಒಂದು ಕಡೆ ಕಡಿಮೆ ಬೆಲೆ ಇಡಬಹುದು. ನಮ್ಮಲ್ಲಿ ಒಂದಾಣೆಗೆ ನೂರು ಸೂಜಿ ಕೊಡುವ ಜಪಾನೀ ವರ್ತಕರು ಸೂಜಿಯ ಧಾರಣೆಯನ್ನು ಅವರೂರಿನಲ್ಲಿಯೂ ಅಷ್ಟೇ ತಗ್ಗಿಸಿಡಬೇಕಾಗಿಲ್ಲ. ನಮ್ಮ ದೇಶದಲ್ಲಿ ಜಪಾನಿ ಸೂಜಿ ಒಂದೇ ಏನು, ಇಂಗ್ಲೀಷರದಿದೆ, ಅಮೇರಿಕದ್ದಿದೆ. ಇವರ ಸ್ಪೈರ್ಧೆಯನ್ನು ಜಪಾನಿ ಸೂಜಿ ಅನುಭವಿಸಬೇಕಾದರೆ ಧಾರಣೆಯಲ್ಲಿ ವ್ಯತ್ಯಾಸವಾಗುವ ಗುಣವಿರಲೇ ಬೇಕು. ಭಾರತೀಯರ ಸೂಜಿಯ ಬೇಡಿಕೆಯಲ್ಲಿ ತುಂಬಾ ಸ್ಥಿತಿಸ್ಥಾಪಕತ್ವ ವಿರುವುದರಿಂದ ಜಪಾನಿ ಸೂಜಿಯ ಧಾರಣೆ ಕೊಂಚ ಏರಿದರೂ ನಾವು ಇಂಗ್ಲಿಷ್ ಸೂಜಿಗಳ ಗಿರಾಕಿ ಹಿಡಿದೇವು. ಜಪಾನಿನಲ್ಲಾದರೆ ಅವರು ಇಂಗ್ಲಿಷ್ ಸೂಜಿಯ ಮೇಲೆ ಧಾರಾಳ ಸುಂಕವನ್ನು ಹೇರಿ ತಮ್ಮ ಸೂಜಿಯ ಧಾರಣೆಯನ್ನು ಒಂದಕ್ಕೆ ಒಂದಾಣೆಯ ವರೆಗೂ ಒಯ್ಯಬ ಹುದು. ಜಪಾನರ ಬೇಡಿಕೆಯಲ್ಲಿ ಭಾರತೀಯರ ಬೇಡಿಕೆಯಷ್ಟು ಸ್ಥಿತಿ ಸ್ಥಾಪಕತ್ವವಿಲ್ಲ. ಆದುದರಿಂದ ಭಾರತ ಜಪಾನುಗಳ ನಡುವೆ ಪಂಕ್ತಿ ಪರಿಭೇದ ನಡೆಯುತ್ತದೆ. ಬೇಡಿಕೆಯ ಸ್ಥಿತಿಸ್ಥಾಪಕತ್ವವು ಕಡಿಮೆಯಾಗಿ ರುವಲ್ಲಿ ಧಾರಣೆ ಹೆಚ್ಚಾಗಿರುವುದು ಪಂಕ್ತಿಪರಿಭೇದ ಮಾಡುವ ಮೊನೊ ಪಲಿಯ ಮುಖ್ಯ ಲಕ್ಷಣ.

# ಎಂಟನೆಯ ಅಧ್ಯಾಯ

# ಗೇಣಿ

**ಗೇಣಿಯ ಸ್ವರೂಪ:**

ನಮ್ಮ ಜಮೀನನ್ನು ಬೇರೆಯವರು ಉಪಯೋಗಕ್ಕೆ ಪಡೆದುಕೊಂಡು ನಮಗೆ ಕಾಲಕಾಲಕ್ಕೆ ಸಲ್ಲಿಸುವ ಮೊಬಲಗಿಗೆ 'ಗೇಣಿ' ಎನ್ನುತ್ತಾರೆ. ಜಮೀನಿನಿಂದ ನಮಗೆ ಬರುವ ನಿಶ್ಚಿತಾವಧಿಯ ವರಮಾನವೇ ಗೇಣಿ. ಆದರೆ ಪಾಶ್ಚಾತ್ಯ ದೇಶಗಳಲ್ಲಿ ಯಾವುದೇ ಒಂದು ವಸ್ತುವಿನ ಪ್ರಯೋಜನವನ್ನು ಪಡೆದುದಕ್ಕಾಗಿ ಕೊಡುವ ನಿಯತಕಾಲಿಕವಾದ ದೇಣಿಗೂ 'ಗೇಣಿ' (ರೆಂಟ್) ಎಂದು ಕರೆಯುತ್ತಾರೆ. ಒಂದು ತಾಸು ಸೈಕಲ್ ಸವಾರಿ ಮಾಡಿದುದಕ್ಕೋ, ಒಂದು ವರ್ಷ ಮನೆಯಲ್ಲಿ ವಸತಿ ಹೂಡಿದುದಕ್ಕೋ ಕೊಡುವಂಥ ಬಾಡಿಗೆಯು ಕೂಡ ನಿಯತಕಾಲಿಕವಾದ ದೇಣಿಯೇ ಆಗಿರುವುದರಿಂದ ಅದನ್ನೂ 'ಗೇಣಿ' ಎಂದು ಕರೆಯಬಹುದು. ಜಮೀನಿಂದ ಬರುವ ಗೇಣಿಯು ಸರಕುಗಳ (ಹತ್ತು ಮುಡಿ ಅಕ್ಕಿ; ಹತ್ತು ಚೀಲ ರಾಗಿ) ರೂಪದಲ್ಲಿ ಬರಬಹುದು; ಅಥವಾ ಹಣದ ರೂಪದಲ್ಲಿಯೂ ಸಲಬಹುದು. ಭೂಮಿಯನ್ನು ಒಕ್ಕಲು ಸ್ಥಿರಗೇಣಿಗೆ ಪಡೆಯುವನು. ಉತ್ಪತ್ತಿಯ ಬೆಲೆ ಹೆಚ್ಚಿತೆಂದು ಧನಿಯು ಹೆಚ್ಚು ಗೇಣಿ ವಸೂಲುಮಾಡಲಾರ. ನಮ್ಮ ಕರಾವಳಿಯ ಜಿಲ್ಲೆಯಲ್ಲಿ ಎಕರೆಗೆ ಹತ್ತೋ ಎಂಟೋ ಮುಡಿ ಅಕ್ಕಿ ಗೇಣಿ ಎಂಬುದು ನಿಶ್ಚಯವಾದ ಮೇಲೆ ಹೊಸ ಒಪ್ಪಂದವಾಗದೆ ಗೇಣಿಯಲ್ಲಿ ವ್ಯತ್ಯಾಸ ಉಂಟಾಗುವದಿಲ್ಲ. ಒಂದು ಎಕರೆ ಜಮೀನಿನಲ್ಲಿ ಬೇಸಾಯಗಾರನ ವೆಚ್ಚವೆಲ್ಲವನ್ನೂ ಕಳೆದು ಹತ್ತುಮುಡಿ ನಿವ್ವಳ ಆದಾಯವು ಹುಟ್ಟುವಂತಿದ್ದರೆ ಆ ಜಮೀನಿಗೆ ಹತ್ತುಮುಡಿ ಗೇಣಿಯು ಕಾಯಂ ಆಗುವುದು. ಪ್ರತಿವರ್ಷವೂ ಹತ್ತುಮುಡಿ ನಿವ್ವಳ ಆದಾಯ ಬರದಿದ್ದರೆ ಅದಕ್ಕೆ ಧನಿ ಹೊಣೆಯಾಗುವುದಿಲ್ಲ. ಯಾವುದಾದರೂ ಒಂದು ವರ್ಷ ಪುಣ್ಯವಶಾತ್ ಚೆನ್ನಾದ ಬೆಳೆಯಾಗಿ ನಿವ್ವಳ ಆದಾಯವು ಹೆಚ್ಚಾದುದರಿಂದ ಧನಿಗೆ ಲಾಭವಿಲ್ಲ. ಹೆಚ್ಚು ಕಡಿಮೆ ಹತ್ತು ಮುಡಿ ನಿವ್ವಳ ಆದಾಯವು

ದೊರೆಯುವುದೆಂಬ ನಿರೀಕ್ಷೆಯ ಮೇಲಿಂದ ಧನಿ–ಒಕ್ಕಲು ಒಪ್ಪಂದ ನಡೆಯುತ್ತದೆ. ಇದೇ ರೀತಿ ಬಾಳಿಕೆ ಬರುವ ಎಲ್ಲ ಸರಕುಗಳ ಗೇಣಿಯೂ ಅವುಗಳು ಸಲ್ಲಿಸುವ ಸೇವೆಯಿಂದ ಬರುವ 'ನಿರೀಕ್ಷಿತ ವಾರ್ಷಿಕ ಮೌಲ್ಯ'ಕ್ಕೆ ಸಮಾನವಾಗಿರುವುದು.

**ರಿಕಾರ್ಡೋನ ಗೇಣಿಯ ಮೀಮಾಂಸೆ:**

ಉತ್ಪಾದನೆಯ ಒಂದು ಮುಖ್ಯ ಅವಯವವಾದ ಜಮೀನಿನ ಚರ್ಚೆಬಂದಾಗ ಪ್ರಾಚೀನ ಪಂಥದವರು ಅದರ ವಿವಿಧ ಪರಿಮಾಣಗಳ ಕಡೆಗೆ ಗಮನವೀಯದೆ ಸಲ್ಲುವ ಗೇಣಿಯ ಕಡೆಗೆ ದೃಷ್ಟಿ ಹರಿಯಿಸಿ, ಗೇಣಿಯು ಧಾರಣೆಯ ನಿರ್ಣಯದಲ್ಲಿ ಭಾಗವಹಿಸುವುದಿಲ್ಲವೆಂಬ ತೀರ್ಮಾನಕ್ಕೆ ಬಂದರು ಜಮೀನಿನ ಉತ್ಪಾದನೆಗೆ ವಾಸ್ತವಿಕ ವೆಚ್ಚ ಯಾವುದೂ ಇಲ್ಲವಾದುದರಿಂದ ಜಮೀನನ್ನು ಉತ್ಪಾದನೆಯ ವೆಚ್ಚದೊಡನೆ ಸೇರಿಸುವುದು ಸಾಧ್ಯವಲ್ಲ ಎಂದರು.



ಪ್ರಪಂಚದಲ್ಲಿರುವ ಜಮೀನಿನ ಪರಿಮಾಣಕ್ಕೆ ಒಂದು ಮಿತಿ ಇರುವು ದರಿಂದಲೂ, ಅದರ ಗುಣವು ಏಕರೂಪವಾಗಿಲ್ಲದಿರುವುದರಿಂದಲೂ, ಕಡೆ ಗೊಮ್ಮೆ ಕೀಳು ದರ್ಜೆಯ ಜಮೀನನ್ನು ಕೃಷಿಗೆ ಸೇರಿಸಿಕೊಳ್ಳುವ ಪ್ರಸಂಗ ಬರುವುದು ಒಂದು ದ್ವೀಪಕ್ಕೆ ಹೋದ ನೆಲಸಿಗರು ಮೊದಮೊದಲು ಅತಿ ಹೆಚ್ಚು ಫಲವತ್ತಾಗಿಯೂ, ಬೇಸಾಯಕ್ಕೆ ಸುಲಭವಾಗಿಯೂ ಇರುವಂಥ ಜಮೀನನ್ನೇ ಆಯ್ದುಕೊಳ್ಳುವರು. ನೆಲಸಿಗರ ಸಂಖ್ಯೆಯು ಹೆಚ್ಚಾದಂತೆ ಅವರ ಉಪಯೋಗಕ್ಕೆ ದೊರೆಯುವ ಒಳ್ಳೆಯ ಜಮೀನು ಕಡಮೆಯಾ ಗುತ್ತ ಹೋಗುವುದು ಆ ಮೇಲೆ ಬಂದ ನೆಲಸಿಗರಿಗೆ ಕೀಳು ದರ್ಜೆಯ ಭೂಮಿಯನ್ನು ಬೇಸಾಯಮಾಡದ ಹೊರತು ಉಪಾಯವಿಲ್ಲ. ಅಥವಾ ಅವರ ಮೇಲು ದರ್ಜೆಯ ಭೂಮಿಗೆ ಹೆಚ್ಚು ಗೇಣಿ ಕೊಡುತ್ತೇವೆಂದು ಮುಂದಾಗಬಹುದು ಹೀಗೆ ಭೂಮಿಯ ಜಿಪುಣತನದ ದೆಸೆಯಿಂದಾಗಿ ಗೇಣಿ ಕೊಡುವ ಆವಶ್ಯಕತೆ ಬೀಳುವುದಲ್ಲದೆ ಅದರ ಧಾರಾಳತನದಿಂದ ಅಲ್ಲ ಎಂದು ರಿಕಾರ್ಡೋ ವಾದಿಸುವನು. ಪರಿಸರದ ಜಮೀನುಗಳ ಉತ್ಪಾದಕ ಶಕ್ತಿಗಿಂತ ಉತ್ತಮ ದರ್ಜೆಯ ಜಮೀನು ಹೆಚ್ಚು ಫಲ ದಾಯಕವಾಗಿದ್ದರೆ ಉತ್ಪನ್ನದ ಗಾತ್ರಗಳ ವ್ಯತ್ಯಾಸವೇ ಗೇಣಿಯನ್ನು ನಿರ್ಣಯಿಸುವುದು. ಜನಸಂಖ್ಯೆಯು ಬೆಳೆದು ಬೇಡಿಕೆಯು ಏರಿದಂತೆ ಫಲಹೀನ ಭೂಮಿಗಳನ್ನುಪಯೋಗಿಸಬೇಕಾದ ಪರಿಸ್ಥಿತಿ ಒದಗುವುದು. ಕಟ್ಟಕಡೆಗೆ ಉತ್ಪಾದನೆಯ ವೆಚ್ಚ ಹುಟ್ಟುವಂತಿದ್ದರೂ ಸಾಕು, ಅಂಥ ಜಮೀನನ್ನೂ ಉಪಯೋಗಿಸದೆ ಗತ್ಯಂತರವಿಲ್ಲವಾಗುವುದು. ಈ ಜಮೀ ನನ್ನು ಕೃಷಿಯ ಪರಿಸರದ ಜಮೀನೆಂದು ಕರೆಯುವರು. ಪರಿಸರದ ಒಂದೆ ಕರೆ ಜಮೀನಿಗಿಂತ ಅದಕ್ಕೆ ಹಿಂದಿನ ಮತ್ತು ಅದಕ್ಕಿಂತ ಒಳ್ಳೆಯ ಜಮೀ ನಿನ ಉತ್ಪಾದಕ ಶಕ್ತಿಯು ಎಷ್ಟು ಹೆಚ್ಚಾಗಿರುವುದೋ, ಆ ವ್ಯತ್ಯಾಸವೇ ಗೇಣಿ.

ಉತ್ತಮ ಜಮೀನಿಗೂ ಪರಿಸರದ ಜಮೀನಿಗೂ ಇರುವ 'ವ್ಯತ್ಯಾಸಾ ತ್ಮಕವಾದ ಮಿಗುತೆ'ಯು ಗೇಣಿಯಾದುದರಿಂದ ಸರಕುಗಳ ಧಾರಣೆಯನ್ನು ನಿರ್ಣಯಿಸುವುದರಲ್ಲಿ ಗೇಣಿಯು ಭಾಗವಹಿಸಲಾರದು. ಅದನ್ನು ಉತ್ಪಾ ದನೆಯ ವೆಚ್ಚದಲ್ಲಿ ಸೇರಿಸುವಂತಿಲ್ಲ. ಜಮೀನಿನಿಂದ ಬರುವ ಉತ್ಪತ್ತಿಯು

ಬೆಲೆಯು ಆ ಜಮೀನಿನ ಗೇಣಿ ಎಷ್ಟೆಂಬುದನ್ನು ನಿರ್ಣಯಿಸುವುದು. ಗೇಣಿ ಕೊಡಬೇಕಾಗುವುದರಿಂದ ಧಾನ್ಯದ ಧಾರಣೆಯು ಏರುವುದಿಲ್ಲ; ಧಾನ್ಯದ ಧಾರಣೆಯು ಹೆಚ್ಚಾಗಿರುವುದರಿಂದ ಗೇಣಿ ಅಥವಾ ಹೆಚ್ಚು ಗೇಣಿ ಕೊಡ ಬೇಕಾದ ಪ್ರಮೇಯ ಉಂಟಾಗಿರುವುದು. ಧಾನ್ಯದ ಬೆಲೆ ಏರಿದ ಹಾಗೆ ಇನ್ನಷ್ಟು ನೀಚ ಮಟ್ಟದ ಭೂಮಿಯು ಕೃಷಿಗೆ ಒಳಪಡುವುದು. ಉತ್ಪಾದನೆಯ ವೆಚ್ಚವು ಹೆಚ್ಚುವುದು. ಇಷ್ಟರ ವರೆಗೆ ಪರಿಸರದಲ್ಲಿದ್ದ ಭೂಮಿಯು ಈಗಿನ ಪರಿಸರದ ಭೂಮಿಗಿಂತ ಉತ್ತಮವಾದುದರಿಂದ ಗೇಣಿಯು ಅಧಿಕವಾಗುವುದು. ಸರಕುಗಳ ಧಾರಣೆಯಲ್ಲಿ ಬದಲಾವಣೆ ಉಂಟಾಗುವುದರಿಂದ ಗೇಣಿಯಲ್ಲಿಯೂ ಬದಲಾವಣೆಗೆ ಅವಕಾಶವಾಗುವುದು. ಅಂತೂ ಗೇಣಿಯು ಧಾರಣೆಯನ್ನು ನಿರ್ಣಯಿಸುವುದಿಲ್ಲ. ಅದು ಧಾರಣೆಯಿಂದ ನಿರ್ಣೀತವಾಗುವುದು

**ರಿಕಾರ್ಡೋ ತತ್ತ್ವದ ದೋಷಗಳು:**

೧. ರಿಕಾರ್ಡೋ ತತ್ತ್ವದಲ್ಲಿ ಭೂಮಿಯೆಂದರೆ ಮಣ್ಣಿನ 'ಮೂಲವೂ ಅವಿನಾಶಿಯೂ ಆದ ಶಕ್ತಿ' ಎಂಬ ಕಲ್ಪನೆಯ ಮೋಡ ಕವಿದಿದೆ. ನೂರಕ್ಕೆ ತೊಂಭತ್ತರಷ್ಟು ಜಮೀನು ಮನುಷ್ಯನ ಪರಿಶ್ರಮದಿಂದಲೂ, ಅನ್ಯ ಅವಯವಗಳ ಸಹಾಯದಿಂದಲೂ ಉಂಟಾಗುವುದರಿಂದ ಭೂಮಿಯೇ ಆದಿಶಕ್ತಿ ಎಂದು ಭಾವಿಸಲು ಆಸ್ಪದವಿಲ್ಲ

೨. ಗೇಣಿಯಲ್ಲಿ ಮಿಗುತೆಯ ಅಂಶವಿದೆ ಎಂಬುದನ್ನು ನಾವು ನಂಬುವುದಾದರೆ ಎಲ್ಲ ಅವಯವಗಳಲ್ಲೂ ಮಿಗುತೆಯ ಅಂಶವಿದ್ದೇ ಇದೆ ಎನ್ನಬೇಕು. 'ಇತರ ಎಲ್ಲ ವೆಚ್ಚ ಕಳೆದು ಉಳಿಯುವ ಮಿಗುತೆ' ಎಂಬರ್ಥವನ್ನು ನಾವು ಬಂಡವಾಳದ ಧಾರಣೆಯಲ್ಲಿಯೂ, ಪರಿಶ್ರಮದ ಧಾರಣೆಯಲ್ಲಿಯೂ ಕಾಣಲಾಗುವುದಿಲ್ಲವೆ?

೩. ಭೂಮಿಯು ಬದಲಾಯಿಸಲಾಗದ ಸ್ಥಿರ ಅವಯವವೆಂದು ಸ್ವೀಕರಿಸುವುದು ತಪ್ಪು. ಸಂಚಾಲಕನು ಎಲ್ಲ ಅವಯವಗಳಂತೆ ಭೂಮಿಯನ್ನೂ ಎಷ್ಟು ಹೆಚ್ಚು ಎಷ್ಟು ಕಡಿಮೆ ಮಾಡಿದರೆ ಪರಮಾವಧಿ ಲಾಭ ಬಂದೀತು ಎಂದು ಯೋಚಿಸುವನು. ಅಂದರೆ ಅವಯವ ಸಂಯೋಜನೆಯ

ಮೂಲ ಸೂತ್ರವು ಅನ್ಯ ಅವಯುವಗಳಂತೆಯೇ ಭೂಮಿಗೂ ಅನ್ವಯಿಸು ವುದು. ಪರಿಸರದ ಉತ್ಪತ್ತಿಯು ಗೇಣಿಯ ಮೊತ್ತಕ್ಕೆ ಸಮನಾಗುವ ತನಕ ಸಂಚಾಲಕನು ಭೂಮಿಯನ್ನು ಬಳಸುತ್ತಾನೆ ಪರಿಸರದ ಉತ್ಪತ್ತಿಗೂ ಗೇಣಿಗೂ ಸಂಬಂಧವಿರುವುದರಿಂದ ಉತ್ಪತ್ತಿಯ ಧಾರಣೆಯಲ್ಲಿ ಗೇಣಿಯ ಅಂಶವೂ ಒಡಗೂಡಿರುತ್ತದೆ

೪. ಪ್ರಪಂಚದ ಸಮಗ್ರ ಭೂಭಾಗವನ್ನು ತೆಗೆದುಕೊಂಡಾಗ ಭೂಮಿಯು ನಿಶ್ಚಿತ ಪ್ರಮಾಣವಾಗುವುದಿಲ್ಲವೆ? ಎಂದು ಪ್ರಶ್ನಿಸುವವರಿಗೆ ಒಂದೇ ಉತ್ತರ. ಈ ದೃಷ್ಟಿಯಲ್ಲಿ ಪ್ರಪಂಚದ ಸಮಗ್ರ ಪರಿಶ್ರಮವೂ, ಸಮಗ್ರ ಬಂಡವಾಳವೂ ತಂತಮ್ಮ ಮಟ್ಟಿಗೆ ನಿಶ್ಚಿತ ಪರಿಮಾಣದಲ್ಲಿಯೇ ಇರುತ್ತವೆ. ಜಮೀನೊಂದೇ ಸ್ಥಿರ ಅವಯುವವೆಂದು ವಿಶೇಷವಾಗಿ ಎಣಿಸುವುದಗತ್ಯವಿಲ್ಲ.

೫. ಯಾವುದಾದರೊಂದು ವಿಶಿಷ್ಟ ಉಪಯೋಗಕ್ಕೆ—ಉದಾ: ನೆಲ ಗಡಲೆಯ ಬೆಳೆಗೆ–ನಾವು ಬಳಸುವ ಭೂಮಿಯ ಪರಿಮಾಣವು ನಿಶ್ಚಿತವಾದು ದೆಂದು ನಾವು ಹೇಳಲಾರೆವು. ನೆಲಗಡಲೆಯು ಬೆಳೆಯುವ ಭೂಮಿ ಇಂತಿಷ್ಟೇ ಎಂದು ನಿರ್ಧಾರವಾಗಿ ಹೇಳಬೇಕಾದರೆ ಅದಕ್ಕೆ ಹೊರಗಿನ ಜಮೀನು ನೆಲಗಡಲೆಗೆ ಸರ್ವಥಾ ಅಯೋಗ್ಯವಾಗಿರಬೇಕು. ಅಲ್ಲಿ ಬೀಜ ಬಿತ್ತಿದರೆ ಮೊಳಕೆ ಬರಕೂಡದು. ಪೂರೈಕೆಯು ಸ್ಥಿರವಾಗಿದ್ದು, ಉಪ ಯೋಗವು ನಿರ್ದಿಷ್ಟವಾಗಿರುವ ಯಾವ ಅವಯುವಕ್ಕೂ ರಿಕಾರ್ಡೋರ ತತ್ತ್ವವು ಅನ್ವಯವಾಗುತ್ತದೆ.

## ಗೇಣಿಯು ಮಿಗುತೆಯೆ?

ಅಕ್ಕಿ ಮಾತ್ರ ಬೆಳೆಯುವ ನಿಶ್ಚಿತ ವಿಸ್ತೀರ್ಣದ ಹೊಲವೊಂದಿದೆ ಎಂದು ಭಾವಿಸುವ. ಆ ಹೊಲದಲ್ಲಿ ಬೇರೆ ಯಾವ ಅವಯುವದ ಸಹಾಯ ವನ್ನೂ ಪಡೆಯದೆ ಅಕ್ಕಿಯನ್ನು ಬೆಳೆಯಿಸಿದರೆ ಅಲ್ಲಿ ಬೆಳೆದ ಅಕ್ಕಿಯೇ ಆ ಹೊಲದ ಮೌಲ್ಯವೆನಿಸುವುದು. ಅಕ್ಕಿಗಿರುವ ಬೇಡಿಕೆಯ ಒತ್ತಡ ವನ್ನನುಸರಿಸಿ ಜಮೀನಿನ ಮೌಲ್ಯವು ಬದಲಾವಣೆಯಾಗುವುದು. ಅದೇ ಹೊಲಕ್ಕೆ ನಾಲ್ಕುಜನ ಕೂಲಿಕಾರರನ್ನು ಆಕರ್ಷಿಸಬೇಕಾದರೆ ಅವರು ಈ

ತನಕ ದುಡಿಯುತ್ತಿದ್ದ ಉದ್ಯಮಗಳಲ್ಲಿ ಸಿಗುತ್ತಿದ್ದಷ್ಟು ಕೂಲಿಯನ್ನಾದರೂ ಕನಿಷ್ಠಪಕ್ಷ ಕೊಟ್ಟೇ ತೀರಬೇಕಲ್ಲವೆ? ಜಮೀನಿನಲ್ಲಿ ಹೆಚ್ಚು ಜನ ಕೂಲಿ ಕಾರರನ್ನು ಉಪಯೋಗಿಸುತ್ತ ಬಂದಹಾಗೆ ಒಂದು ನಿಶ್ಚಿತ ಬಿಂದುವಿನ ಬಳಿಕ ಅವರ ಪರಿಸರದ ಉತ್ಪತ್ತಿಯು ಕ್ಷೀಣಿಸುವುದು. ಎಷ್ಟು ಜನ ಕೂಲಿ ಕಾರರನ್ನು ಹಚ್ಚಿದರೆ ತನ್ನ ವರಮಾನವು (ಗೇಣಿಯು) ಪರಮಾವಧಿಗೆ ಮುಟ್ಟುವುದೋ ಅಷ್ಟು ಜನರಿಗೆ ರೈತನು ತನ್ನ ಹೊಲದಲ್ಲಿ ಕೆಲಸ ಕೊಡುತ್ತಾನೆ.




ಅಕ್ಕಿ ಬೆಳೆಯಿಸುವ ಭೂಮಿಯು ಏಕರೂಪದ್ದಲ್ಲವಾದರೆ ಪರಿಶ್ರಮಕ್ಕೆ ಉತ್ತಮವಾದ ಭೂಮಿಯಲ್ಲಿ ಹೆಚ್ಚು ಫಲವೂ, ಕೆಳದರ್ಜೆಯ ಭೂಮಿಯಲ್ಲಿ ಕಡಿಮೆ ಫಲವೂ ಹುಟ್ಟುವುದು. ಆಗ ಅಧಿಕ ಫಲವತ್ತಾದ ಭೂಮಿಯಲ್ಲಿ O M ಜನರನ್ನೂ, ಕಡಿಮೆ ಫಲವತ್ತಾದ ಜಮೀನಿನಲ್ಲಿ O N ಜನರನ್ನೂ

ಕೆಲಸಕ್ಕಿಟ್ಟುಕೊಳ್ಳುವರು. OM ಆಯತಕ್ಕಿಂತ ಮೇಲೆಯೂ ಎರಡನೆಯ ಉತ್ಪಾದನೆಯ ಕಮಾನಿನ ಕೆಳಗಡೆಯೂ ಇರುವ ಸ್ಥಳವು ಅಧಿಕ ಫಲವತ್ತಾದ ಜಮೀನಿನ ಗೇಣಿಯನ್ನೂ, ON ಆಯತದ ಮೇಲಿನದು ಕಡಿಮೆ ಫಲವತ್ತಾದ ಭೂಮಿಯ ಗೇಣಿಯನ್ನೂ ಸೂಚಿಸುವುದು. OM, ON ಆಯತಗಳು ತಂತಮಗೆ ಸಂಬಂಧಿಸಿ ಒಟ್ಟು ಕೂಲಿಯ ಮೊಬಲಗನ್ನು ಸೂಚಿಸುವುವು.

**ಗೇಣಿಯಲ್ಲಿ ಹೆಚ್ಚು ಕಡಿಮೆಯಾಗುವುದು ಹೇಗೆ?**

ಜನಸಂಖ್ಯೆಯ ವೃದ್ಧಿಯು ಗೇಣಿ ಹೆಚ್ಚುವುದಕ್ಕೆ ಒಂದು ಪ್ರಬಲ ಕಾರಣ. ಜನಸಂಖ್ಯೆಯು ಹೆಚ್ಚಿದರೆ ಆಹಾರ ದವಸಗಳಿಗೆ ಬೇಡಿಕೆಯು ಅತಿಶಯವಾಗುವುದು, ಧಾರಣೆಯು ಏರುವುದು; ಆದುದರಿಂದ ಪರಿಸರಕ್ಕಿಂತಲೂ ಕೆಳಗಿನ ಜಮೀನು ಕೃಷಿಗೆ ಒಳಪಡುವುದು. ಎರಡನೆಯದಾಗಿ ಜನಸಾಂದ್ರತೆಯುಳ್ಳ ನಗರಗಳಲ್ಲಿ ವಸತಿಗೂ, ಕಾರ್ಖಾನೆಗಳಿಗೂ ಜಮೀನು ಬೇಕಾಗುವುದು. ಮುಂಬಾಯಿಯಂಥ ನಗರದಲ್ಲಿ ಆಯಕಟ್ಟಿನ ಸ್ಥಳದಲ್ಲಿರುವ ಒಂದೆಕರೆಗೆ ಸಾವಿರಾರು ರುಪಾಯಿ ಗೇಣಿ ಬರಬಹುದು. ಗಿರಣಿ ಮಾಲಿಕರು ಕಾರ್ಖಾನೆಯ ಸಮೀಪದ ಜಮೀನಿಗೆ ಎಷ್ಟು ಗೇಣಿ ಬೇಕಾದರೂ ಕೊಟ್ಟಾರು. ಮೂರನೆಯದಾಗಿ, ಯುದ್ಧದಂಥ ಅನಿರೀಕ್ಷಿತ ಬಾಹ್ಯ ಘಟನೆಗಳ ದೆಸೆಯಿಂದಾಗಿ ದವಸ ಧಾನ್ಯಗಳ ಬೆಲೆಯು ಒಮ್ಮೆಲೆ ಮೇಲಕ್ಕೆ ಪುಟಿಯುವುದರಿಂದಲೂ ಜಮೀನಿಗೆ ಹೆಚ್ಚು ಗೇಣಿ ಬರಬಹುದು. ಕೃಷಿ ವಿಧಾನದಲ್ಲಿ ಪರಿಷ್ಕೃತ ಕ್ರಮಗಳು ಜಾರಿಗೆ ಬಂದರೆ ಪರಿಸರದ ಜಮೀನಿನ ಬಳಕೆ ಕಡಿಮೆಯಾಗಿ ಉತ್ತಮವಾದ ಜಮೀನಿನ ಗೇಣಿಗೂ ಕೀಳು ಭೂಮಿಯ ಗೇಣಿಗೂ ಇರುವ ಅಂತರವು ಕಡಿಮೆಯಾಗುವುದರಿಂದ ಗೇಣಿಯು ಇಳಿಯಬಹುದು. ಇದು ಗೇಣಿಯು ಇಳಿಯುವುದಕ್ಕೊಂದು ಕಾರಣ. ಎರಡನೆಯದಾಗಿ, ಅಂತರ ರಾಷ್ಟ್ರೀಯ ಸಾಗುವಾಡಿನ ಸೌಕರ್ಯವು ಹೆಚ್ಚಿ ಪರದೇಶದ ಧಾನ್ಯವು ಸುಲಭದಲ್ಲಿ ರಫ್ತಾಗುವಂತಾದರೆ ಆಮದು ಮಾಡಿಕೊಳ್ಳುವ ದೇಶದಲ್ಲಿ ಪರಿಸರದ ಜಮೀನು ಬೇಸಾಯವಿಲ್ಲದೆ ಪಡುಬೀಳುವುದು, ಗೇಣಿ ಇಳಿಯುವುದು. ಕೊನೆಯದಾಗಿ ಯಾವುದಾದರೂ ಒಂದು ಆಹಾರ ದವಸಕ್ಕೆ ಪ್ರತಿನಿಧಾನಗಳು ಹುಟ್ಟಿ ಅವುಗಳ ಪ್ರಚಾರವು ಹೆಚ್ಚಿದರೆ

ಆಹಾರ ದವಸಗಳಿಗೆ ಬೆಲೆಯು ತಗ್ಗಿ ಕೃಷಿಭೂಮಿಯ ಗೇಣಿ ಕಡಿಮೆ ಯಾಗಬಹುದು

**ಇತರ ವರಮಾನಗಳಲ್ಲಿರುವ ಮಿಗುತೆ: ಅರ್ಧಗೇಣಿ:**

ಅಂತರ ರಾಷ್ಟ್ರೀಯ ವ್ಯಾಪಾರದಲ್ಲಿ ಉಬ್ಬರ ಬಂದುದರಿಂದಾಗಿ ಉಗಿ ಹಡಗುಗಳಿಗೆ ಬೇಡಿಕೆಯು ಅಧಿಕವಾಯಿತೆಂದು ಭಾವಿಸುವ. ಆಗ ಹಡಗಿನಿಂದ ಸರಕನ್ನು ನಿರ್ಯಾತ ಮಾಡಬೇಕಾದರೆ ಸಾಗುವಾಡಿಗೆ ಹೆಚ್ಚು ಹಣಕೊಡಬೇಕು. ಹಡಗಿನ ಕಂಪೆನಿಗಳಿಗೆ ಇದರಿಂದ ಅಲ್ಪಾವಧಿಯಲ್ಲಿ ಅಳತೆಮೀರಿ ಲಾಭ ಬರಬಹುದು. ಹೊಸ ಹಡಗುಗಳನ್ನು ತಯಾರಿಸುವುದಕ್ಕೆ ಬಹು ದೀರ್ಘಕಾಲ ಬೇಕಾಗುವುದೇ ಇಂಥ ಹೇರಳ ಲಾಭಕ್ಕೆ ಕಾರಣ ವ್ಯಾಪಾರದ ಉಬ್ಬರವು ಸ್ವಲ್ಪಕಾಲ ಇದ್ದಂತೆಯೇ ಇರುವ ಚಿಹ್ನೆ ತೋರಿಸಿದರೆ ಹೊಸ ಹಡಗುಗಳ ಉತ್ಪಾದನೆ ಖಂಡಿತವಾಗಿಯೂ ನಡೆಯುವುದು. ಆದರೆ ಹೊಸ ಹಡಗುಗಳು ಬರುವ ವರೆಗಿನ ನಡುಗಾಲದಲ್ಲಿ ಇದ್ದ ಹಡಗುಗಳಿಗೆ ದೊರೆಯುವ ಹೇರಳ ಲಾಭದಲ್ಲಿ ಮಿಗುತೆಯ ಅಂಶವಿದೆ ಹಾಗೆಯೇ ಸ್ಥಿರ ಬಂಡವಾಳಕ್ಕೆ ಅಲ್ಪಾವಧಿಯಲ್ಲಿ ಸಿಗುವ ಪ್ರತಿಫಲದ ಒಂದು ಅಂಶವು ಗೇಣಿಯ ಸ್ವಭಾವವುಳ್ಳುದೆಂದು ನಾವು ಎಣಿಸಬಹುದು. ದೀರ್ಘಾವಧಿಯಲ್ಲಿ ಬದಲಾಯಿಸಲು ಸಾಧ್ಯವಾದರೂ ಅಲ್ಪಾವಧಿಯಲ್ಲಿ ಸ್ಥಿರವಾಗಿರುವ ಉತ್ಪಾದನೆಯ ಉಪಾದಾನಗಳಿಗೆ ದೊರೆಯುವ ಈ ವಿಶೇಷ ಪ್ರತಿಫಲವನ್ನು "ಅರ್ಧಗೇಣಿ" ಎಂದು ಕರೆಯುವರು.

**ಸರ್ವಾಂತರ್ಯಾಮಿ ಗೇಣಿ:**

ಎಲ್ಲ ಬಗೆಯ ವರಮಾನಗಳಲ್ಲಿಯೂ ಗೇಣಿಯ ಅಂಶ ಇರುತ್ತದೆ. ಬಡ್ಡಿ, ಮುನಾಫೆ, ಕೂಲಿಗಳಲ್ಲಿ ಹೆಚ್ಚು ಕಡಿಮೆಯಾದ ಹಾಗೆ, ಅವನ್ನನುಸರಿಸಿ ಆಯಾ ಅವಯವಗಳ ಪೂರೈಕೆಯಲ್ಲಿ ಪ್ರತ್ಯಕ್ಷವಾಗಿಯೂ ಶೀಘ್ರವಾಗಿಯೂ ಪರಿವರ್ತನೆಯಾಗುವುದನ್ನು ನಾವು ಕೂಡಲೆ ಗುರುತಿಸಬಹುದು. ಆದರೆ ಗೇಣಿಯ ಬದಲಾವಣೆಯಿಂದ ಭೂಮಿಯ ಪೂರೈಕೆಯಲ್ಲಿ ಇಂಥ ಕ್ಷಿಪ್ರ ಪರಿವರ್ತನೆಯಾಗುವುದಿಲ್ಲ. ಜಮೀನಿನ ಗೇಣಿಗೂ, ಇತರ ಅವಯವಗಳಿಗೆ ಸಲ್ಲುವ ಪ್ರತಿಫಲಕ್ಕೂ ಇಷ್ಟೇ ವ್ಯತ್ಯಾಸ.

# ಒಂಭತ್ತನೆಯ ಅಧ್ಯಾಯ

## ಕೂಲಿ

ಪ್ರಪಂಚದ ಮುಕ್ಕಾಲು ಮೂರುವಾಸಿ ಜನಕ್ಕೆ ದೇಶದ ಉತ್ಪಾದನೆಯಲ್ಲಿ ಪಾಲುಸಿಗುವುದು ಕೂಲಿಯ ಮುಖಾಂತರವಾಗಿ. ಸ್ವತಂತ್ರ ಬಂಡವಾಳಗಾರ ಸಮಾಜದಲ್ಲಿ ಆಸ್ತಿವಂತರೂ, ಶ್ರೀಮಂತರೂ, ಬಂಡವಾಳಗಾರರೂ ಕಡಿಮೆ. ಕೂಲಿಯಿಂದ ಜೀವಿಸುವ ಮಂದಿಯೇ ಬಹಳ ೧೯೪೬ರಲ್ಲಿ ಇಂಗ್ಲೆಂಡಿನ ರಾಷ್ಟ್ರೀಯ ವರಮಾನದಲ್ಲಿ ಆಸ್ತಿಯಿಂದ ೩೮೬೦ ಲಕ್ಷ ಪೌಂಡೂ, ಬಡ್ಡಿಯಿಂದ ೨೩,೭೦೦ ಲಕ್ಷ ಪೌಂಡೂ, ಸಂಬಳದಿಂದ ೧೬,೭೫೦ ಲಕ್ಷ ಪೌಂಡೂ, ಕೂಲಿಯಿಂದ ೩೦,೨೦೦ ಲಕ್ಷ ಪೌಂಡೂ, ಉತ್ಪನ್ನವಾದುವು. ಸಂಬಳವೂ ಒಂದು ಬಗೆಯ ಕೂಲಿಯಾದುದರಿಂದ ಅದನ್ನೂ ಕೂಲಿಯಲ್ಲಿ ಸೇರಿಸಿಕೊಂಡರೆ ಕೂಲಿಯ ಮೊಬಲಗು ಇತರ ವರಮಾನಗಳನ್ನು ಮೆಟ್ಟಿ ನಿಲ್ಲುವುದು. ಸಮಾಜದಲ್ಲಿ ಸಮಾನತ್ವವು ಅಧಿಕವಾದಂತೆ ಆಸ್ತಿಯ ಉತ್ಪನ್ನದಿಂದಲೂ, ಬಂಡವಾಳದ ಬಡ್ಡಿಯಿಂದಲೂ ಬರುವ ವರಮಾನದ ಅಂಶವು ಸಾಪೇಕ್ಷವಾಗಿ ಕೂಲಿಯ ವರಮಾನಕ್ಕಿಂತ ಕಡಿಮೆಯಾಗುವುದು

**ಸ್ವತಂತ್ರ ಕೂಲಿಕಾರರು:**

ಲೇಖಕರು, ವೈದ್ಯರು, ಚಿಕ್ಕ ರೈತರು ಸ್ವತಂತ್ರ ಕೂಲಿಕಾರರ ವರ್ಗಕ್ಕೆ ಸೇರುವರು. ಸ್ವತಂತ್ರ ಕೂಲಿಕಾರರು ಅವರ ಸೇವೆಗಳನ್ನು ಅವರೇ ನೇರವಾಗಿ ಮಾರ್ಕೆಟಿನಲ್ಲಿ ಮಾರುವುದರಿಂದ ಅವರ ವರಮಾನದಲ್ಲಿ ಚಾಂಚಲ್ಯವು ಹೆಚ್ಚಾಗಿರುತ್ತದೆ. ಕೂಲಿಯನ್ನು ಮೊದಲೇ ನಿಶ್ಚಯ ಮಾಡಿಕೊಂಡು ಆ ಮೇಲೆ ತಮ್ಮ ಪರಿಶ್ರಮವನ್ನು ಮಾರುವ ಕೂಲಿಕಾರರಿಗೆ ಈ ಭಯವಿಲ್ಲ; ನಷ್ಟಸಂಭವಗಳನ್ನೂ, ಮಾರ್ಕೆಟು ಧಾರಣೆಯ ಪೆಟ್ಟನ್ನೂ ಸಂಚಾಲಕನೇ ಸಹಿಸುವನು. ಒಂದು ದೃಷ್ಟಿಯಲ್ಲಿ ಸ್ವತಂತ್ರ ಕೂಲಿಕಾರರಿಗೆ ಬರುವ ಆಘಾತಗಳು ಹೆಚ್ಚು ತೀವ್ರವಾಗಿರುತ್ತದೆ. ಎಂಥ ಮುಗ್ಗಟ್ಟಿನ ಕಾಲದಲ್ಲಿಯೇ ಆಗಲಿ, ರೈತನು ನಿರುದ್ಯೋಗಿಯಾಗಲಾರ.

ಅಕ್ಕಿಯ ಮುಡಿಗೆ ೧೬ ರೂಪಾಯಿ ಇದ್ದುದು ೨|೮ ರೂಪಾಯಿಯಾದರೂ, ಅವನು ಅಕ್ಕಿಯನ್ನು ಬೆಳೆಯಿಸುತ್ತಾನೆ. ಕಾರಣ (೧) ಭೂಮಿಯನ್ನು ಪಡುಬಿಟ್ಟರೆ ಒಳ್ಳೆಯ ಕಾಲ ಬರುವ ಹೊತ್ತಿಗೆ ಅದರಲ್ಲಿ ಕುರಿಚಲು ಬೆಳೆದು ಉಳುಮೆಗೆ ತೊಂದರೆಯಾಗುವುದು (೨) ಬೇರೆ ಉದ್ಯಮಗಳಿಗೆ ಸಂಚಲಿಸಲು ರೈತನಿಗೆ ಅನುಕೂಲವಿಲ್ಲ. ಏಕೆಂದರೆ (ಅ) ಅವನ ಸ್ವತಂತ್ರ ಮನೋವೃತ್ತಿ (ಆ) ಬೇರೆ ವೃತ್ತಿಗಳಲ್ಲಿ ಅನುಭವವಿಲ್ಲದಿರುವುದು. (ಇ) ಮನೆಬಿಟ್ಟು ಹೋಗಲು ಆತಂಕಗಳು—ಅವನನ್ನು ಅದೇ ಉದ್ಯಮದಲ್ಲಿ ನಿಲಿಸಿಕೊಳ್ಳುವುವು. ಹಾಗಿರುವುದರಿಂದ ತನ್ನ ಸರಕಿಗೆ ಬೇಡಿಕೆ ಕಡಿಮೆಯಾದುದರಿಂದ ಧಾರಣೆಯು ಇಳಿದು, ವರಮಾನವು ಹಿಂದಿಗಿಂತ ಕಡಿಮೆಯಾದರೂ ಸ್ವತಂತ್ರ ಕೂಲಿಕಾರನು ಕೃಷಿಯನ್ನು ಬಿಟ್ಟು ಹೊರಗೆ ಹೋಗುವುದಿಲ್ಲ ಮುಗ್ಗಟ್ಟಿನ ಸಮಯ ಔದ್ಯಮಿಕ ಉತ್ಪನ್ನಗಳ ಧಾರಣೆಯೂ ಇಳಿಯುವುದು. ಆಗ ಸಂಚಾಲಕರು ಕೂಲಿಯನ್ನು ಇಳಿಸುವರು. ಇದನ್ನು ಕೂಲಿಕಾರ ವರ್ಗವು ವಿರೋಧಿಸುವುದು. ಹಿಂದಿನ ಕೂಲಿಯನ್ನೇ ಇಟ್ಟುಕೊಂಡರೆ ಸಂಚಾಲಕನಿಗೆ ಲಾಭವಿರುವುದಿಲ್ಲವಾದ್ದರಿಂದಲೂ, ಕೂಲಿ ಇಳಿಸಿದರೆ ಕೂಲಿಕಾರರು ವಿರೋಧಿಸುವುದರಿಂದಲೂ ಉಭಯಸಂಕಟದ ಪರಿಸ್ಥಿತಿ ಸೃಷ್ಟಿಯಾಗುವುದು. ಹಾಗೂ ಹೀಗೂ ಕೂಲಿಕಾರರಲ್ಲಿ ಹಲವರು ನಿರುದ್ಯೋಗಿಗಳಾಗುವರು. ಮುಗ್ಗಟ್ಟಿನ ಕಾಲದಲ್ಲಿ ವರಮಾನವು ಕಡಿಮೆಯಾಗುವುದು ಕೃಷಿಯ ಲಕ್ಷಣ, ನಿರುದ್ಯೋಗವು ಅತಿಶಯವಾಗುವುದು ಔದ್ಯೋಗಿಕ ಉತ್ಪಾದನೆಯ ಲಕ್ಷಣ, ಎಂದು ಸ್ಥೂಲವಾಗಿಟ್ಟುಕೊಳ್ಳಬಹುದು. ಆದರೆ ಈ ನಿರ್ಣಯವು ಔದ್ಯೋಗಿಕ ರಾಷ್ಟ್ರಗಳಿಗೆ ಅನ್ವಯಿಸಿದಷ್ಟು ಮಟ್ಟಿಗೆ ಕೃಷಿ ರಾಷ್ಟ್ರಗಳಿಗೆ ಅನ್ವಯಿಸುವುದಿಲ್ಲ. ಉದಾ:— ಭಾರತದ ಲಕ್ಷಾಂತರ ಕೃಷಿ ಜನರಲ್ಲಿ ಮುಗ್ಗಟ್ಟು ಬಂದರೆ ವರಮಾನವೂ ಕಡಿಮೆಯಾಗುವುದು, ನಿರುದ್ಯೋಗವೂ ಹೆಚ್ಚುವುದು.

**ಕೂಲಿಯ ಸಾಂಪ್ರದಾಯಿಕ ಮೀಮಾಂಸೆಗಳು:**

ಪರಿಶ್ರಮದ ಪೂರೈಕೆಯನ್ನು ನಿರ್ಣಯಿಸುವ ವಿಷಯಗಳ ಮೇಲಿಂದ ಕೂಲಿಯನ್ನು ವಿವರಿಸುವ ಮೀಮಾಂಸೆಗಳು—ಉತ್ಪಾದನೆಯ ವೆಚ್ಚದ ಮೀಮಾಂಸೆಗಳು—ಒಂದು ಕಡೆ. ಬಂಡವಾಳದ ಸರಬರಾಯಿ ಅಥವಾ

ಪರಿಶ್ರಮದ ಉತ್ಪಾದಕ ಶಕ್ತಿಯ ಬೆಂಬಲದಿಂದ ಕೂಲಿಯನ್ನು ವಿವರಿಸುವ ಮೀಮಾಂಸೆಗಳು ಇನ್ನೊಂದು ಕಡೆ. ಮಾರ್ಶಲ್‌ನಂಥ ಅರ್ಥಶಾಸ್ತ್ರಿಗಳು ಈ ಎರಡು ವಿವರಣೆಗಳನ್ನು ಸಮನ್ವಯಗೊಳಿಸಲು ಯತ್ನಿಸಿದುದೂ ಉಂಟು.

## ಜೀವನಾಂಶ ಮೀಮಾಂಸೆ:

ಕೂಲಿಕಾರನ ಜೀವನಾಂಶವನ್ನು ಅನುಸರಿಸಿ ಕೂಲಿಯ ಧಾರಣೆ ಇರುತ್ತದೆ ಎಂಬುದು ಜೀವನಾಂಶ ಮೀಮಾಂಸೆಯ ತಿರುಳು. ಕೂಲಿಕಾರನಿಗೂ ಅವನ ಕುಟುಂಬಕ್ಕೂ ಬೇಕಾದ ಜೀವನಾಂಶದ ಸರಕುಗಳ ಧಾರಣೆಯ ಮೇಲೆ ಕೂಲಿಯು ಅವಲಂಬಿಸಿದೆ, ಆವಶ್ಯಕ ಸರಕುಗಳ ಧಾರಣೆ ಏರಿದರೆ / ಇಳಿದರೆ ಅಲ್ಪ ಕಾಲದಲ್ಲೇ ಕೂಲಿಯೂ ಏರುವುದು / ಇಳಿಯುವುದು ಖಂಡಿತ; ಕೂಲಿಯ ಮೇಲೆ ತೆರಿಗೆ ಹಾಕಿದರೆ, ಕೂಡಲೇ ಸಂಚಾಲಕನು ಕೊಡುವ ಕೂಲಿಯು ಆ ತೆರಿಗೆಯ ಮೊಬಲಗಿನಷ್ಟೇ ಏರುವುದು—ಎಂಬುದು ಜೀವನಾಂಶ ಮೀಮಾಂಸಕರ ವಾದ. ಇದು ಸತ್ಯವಾಗಬೇಕಾದರೆ ಮಾಲ್ಥುಸನ ಜನಸಂಖ್ಯೆಯ ಮೀಮಾಂಸೆಯೂ ಸತ್ಯವಾಗಬೇಕು. ಅಂದರೆ ಕೂಲಿಯ ಪೂರೈಕೆಯು ಅಪರಿಮಿತ ಸ್ಥಿತಿಸ್ಥಾಪಕ ಗುಣವುಳ್ಳದಾಗಿರಬೇಕು. ಕೂಲಿಯ ಧಾರಣೆಯು ಒಂದು ನಿಶ್ಚಿತ ಮಟ್ಟಕ್ಕಿಂತ ಮೇಲೇರಿದರೆ ಕೂಲಿಯ ಸರಬರಾಯಿ ಕೂಡಲೆ ಮೇಲಕ್ಕೆ ಪುಟಿಯುವುದು. ಹಾಗೆಯೇ ಕೂಲಿ ಇಳಿದರೆ ಸರಬರಾಯಿಯೂ ಇಳಿಯುವುದರಿಂದ ಸಮತೋಲವು ತನ್ನಿಂದ ತಾನೇ ಉಂಟಾಗುವುದು. ಕೂಲಿಪದ್ಧತಿಯು ಹೆಚ್ಚು ವಿಕಾಸಗೊಳ್ಳದಿರುವ ಆದ್ಯ ಸನ್ನಿವೇಶದಲ್ಲಿ ಈ ನಿಯಮವು ಸತ್ಯವಾಗುವುದು. ಭಾರತಕ್ಕೆ ಇದನ್ನು ಅನ್ವಯಿಸೋಣ. ಹೆಚ್ಚು ಹೆಚ್ಚು ಉದ್ಯಮಗಳು ಸ್ಥಾಪಿತವಾದಂತೆ ಗ್ರಾಮಾಂತರಗಳಿಂದ ಕೂಲಿಯ ಸರಬರಾಯಿ ಸಾಗುವುದು. ಕೂಲಿಯ ಆಕರ್ಷಣೆಯಿಂದಾಗಿ ಜನರು ಗ್ರಾಮಗಳಿಗೆ ಬೆನ್ನು ಹಾಕಿ ಪಟ್ಟಣಕ್ಕೆ ತೆರಳುವರು. ಈ ಐವತ್ತು ವರ್ಷಗಳ ಭಾರತೀಯ ಔದ್ಯೋಗೀಕರಣವನ್ನು ಚಾರಿತ್ರಿಕ ದೃಷ್ಟಿಯಿಂದ ಅವಲೋಕಿಸಿದರೆ ನಮ್ಮ ಪರಿಶ್ರಮವು ಅತ್ಯಂತ ಸ್ಥಿತಿಸ್ಥಾಪಕವಾಗಿರುವುದು ಕಂಡು ಬರುತ್ತದೆ. ಕೂಲಿ ಹೆಚ್ಚಿಸಿದರೆ ಜನಸಂಖ್ಯೆಯು ಅಧಿಕವಾಗುವುದು ಎಂಬ ಮಾಲ್ಥುಸ್ ತತ್ತ್ವ

ವು ಬಹಳ ಕೆಳಗಿನ ದರ್ಜೆಯ ಜೀವನದ ಮಟ್ಟದಲ್ಲಿರುವ ಕಾಮಗಾರರ ಮಟ್ಟಗೆ ಸತ್ಯವೇ. ಹಿಂದುಳಿದ ಏಶಿಯದ ದೇಶಗಳಿಗೆ ಜೀವನಾಂಶ ಮೀಮಾಂಸೆಯು ಅನ್ವಯಿಸುವಂತೆ ಕಂಡರೂ, ಅದು ಅಲ್ಪಕಾಲದ ವರೆಗೆ ಮಾತ್ರ. ಔದ್ಯೋಗೀಕರಣದಿಂದಲೂ, ತಾಂತ್ರಿಕ ಪ್ರಗತಿಯಿಂದಲೂ ರಾಷ್ಟ್ರಗಳ ಜೀವನಮಟ್ಟವು ಅತಿಶಯವಾದಾಗ ಕೂಲಿಯ ದರವು ಜೀವ ನಾಂಶವನ್ನು ಅನುಸರಿಸುವುದಕ್ಕೆ ಬದಲಾಗಿ ಮೇಲೇರುವ ಕೂಲಿಯ ದರ ವನ್ನನುಸರಿಸಿ ಜೀವನಾಂಶವೇ ಬದಲಾವಣೆ ಹೊಂದಬಹುದು.

ಆದರೆ ಈ ವಾದಕ್ಕೆ ಮೂರು ಮುಖ್ಯ ಆಕ್ಷೇಪಗಳಿವೆ. (೧) ಬೇರೆ ಬೇರೆ ವೃತ್ತಿ, ದೇಶಗಳಲ್ಲಿ ಬೇರೆ ಬೇರೆ ಕೂಲಿ ಸಿಗುವುದೇಕೆ? ಎಂಬ ಪ್ರಶ್ನೆಗೆ ಈ ವಾದದಲ್ಲಿ ಸಮರ್ಪಕವಾದ ಉತ್ತರವಿಲ್ಲ. (೨) ಟ್ರೇಡ್ ಯೂನಿಯ ನುಗಳ ಹಸ್ತಕ್ಷೇಪವನ್ನು ಈ ಮೀಮಾಂಸೆಯು ಗಮನಿಸುವುದಿಲ್ಲ. (೩) ಬೇಡಿಕೆಯ ಪಾರ್ಶ್ವವನ್ನು ಇದು ವಿಚಾರಿಸುವುದಿಲ್ಲ

**ಕೂಲಿ ನಿಧಿಯ ಮೀಮಾಂಸೆ:**

ಒಂದು ದೇಶದಲ್ಲಿರುವ ಬಂಡವಾಳದ ಸಂಗ್ರಹವು ಆ ದೇಶದಲ್ಲಿ ಪರಿಶ್ರಮಕ್ಕೆ ಎಷ್ಟು ಬೇಡಿಕೆ ಇದ್ದೀತೆಂಬುದನ್ನು ಸೂಚಿಸುತ್ತದೆ. ಕನಿಷ್ಠ ಪಕ್ಷ ಬಂಡವಾಳ ಸಂಚಯನದ ಮೊಬಲಗು ಬದಲಾವಣೆಯಾದಹಾಗೆ ಪರಿಶ್ರಮದ ಬೇಡಿಕೆಯೂ ಬದಲಾವಣೆಯಾಗುವುದು. ಕೂಲಿಯ ಮಟ್ಟ ವನ್ನು ಕಂಡುಹಿಡಿಯಲು ಹೆಚ್ಚು ಕಷ್ಟವಿಲ್ಲ. ಉದ್ಯೋಗವನ್ನು ಬಯಸಿ ಬರುವ ಜನರ ಪರಿಮಾಣದಿಂದ, ಬಂಡವಾಳಗಾರರು ಕೂಲಿಗೋಸ್ಕರ ಮೀಸಲಾಗಿಡುವ ಕೂಲಿನಿಧಿಗೆ ಭಾಗಿಸಿದರೆ ಬರುವ ಭಾಗಲಬ್ಧವೇ ಕೂಲಿಯ ಮಟ್ಟ. ಬಂಡವಾಳವನ್ನೂ ಕೂಲಿಯನ್ನೂ ಸಮತೋಲವಾಗಿರಿಸುವ ಬಿಂದುಗಳು ಒಂದಲ್ಲ, ಹಲವು ಎಂಬುದು ಇದರಿಂದ ವ್ಯಕ್ತವಾದಂತಾಯಿತು. ಬಂಡವಾಳವೂ, ಕೂಲಿಕಾರಸಂಖ್ಯೆಯೂ ಬದಲಾವಣೆಯಾಗುವ ದಾಮಾ ಶಯವನ್ನು ಅನುಸರಿಸಿ ಕೂಲಿಗೆ ಒಂದು 'ಸ್ವಾಭಾವಿಕದರವು' ಅಂಟಿ ಕೊಳ್ಳುವುದು.

ಕೂಲಿಕಾರರೆಲ್ಲ ಒಟ್ಟಾಗಿ ಸಂಘಟನೆಯಿಂದ ತಮ್ಮ ಚೌಕಸಿ ಶಕ್ತಿ ಯನ್ನು ವರ್ಧಿಸಿಕೊಂಡರೂ ಕೂಲಿಯ ಮಟ್ಟದ ಮೇಲೆ ಪರಿಣಾಮವಾಗಲು

ಶಕ್ಯವಿಲ್ಲವೆಂಬುದನ್ನು ಪ್ರದರ್ಶಿಸುವುದರ ಸಲುವಾಗಿಯೇ ಈ ವಾದವು ಹುಟ್ಟಿರಬೇಕು. ಹೆಚ್ಚು ಕೂಲಿ ಕೇಳಿದರೆ, ತತ್‌ಕ್ಷಣ ಕೂಲಿನಿಧಿಯು ಬತ್ತಿ, ಬಂಡವಾಳ ಸಂಚಯನವು ಕುಗ್ಗಿ, ಮೊದಲಿನ ಕೂಲಿಯೇ ಕಾಯಂ ಆಗುವುದಲ್ಲದೆ, ಹೊಸ ಕೂಲಿ ಬಹಳ ಕಾಲ ಸ್ಥಿರವಾಗಿ ನಿಲ್ಲುವುದಿಲ್ಲ. ಶ್ರೀಮಂತರಿಂದ ಕರತೆರಿಗೆ ವಸೂಲು ಮಾಡಿದರಂತೂ ಕೂಲಿನಿಧಿಗೆ ಮತ್ತಷ್ಟು ಹೊಡೆತ ಕೊಟ್ಟಂತೆಯೇ ಸರಿ, ಎಂದು ಸಂಪ್ರದಾಯವಾದಿಗಳು ಬಹಳ ಮಾರ್ಮಿಕವಾಗಿಯೂ, ಚಾಣಾಕ್ಷತೆಯಿಂದಲೂ ವಾದಿಸುತ್ತಾರೆ. ಆದರೆ (೧) ಬಂಡವಾಳಗಾರರ ಲಾಭಕ್ಕೆ ಬಾಧೆತಾರದೆಯೇ ಕೂಲಿಯು ಅಧಿಕವಾಗಲು ಶಕ್ಯವಿದೆ. ಅಧಿಕ ಕೂಲಿಯ ದೆಸೆಯಿಂದ ಕೂಲಿಕಾರರ ಜೀವನದ ಮಟ್ಟವು ಊರ್ಜಿತಕ್ಕೆ ಬಂದು ಅವರ ಕಾರ್ಯ ಸಾಮರ್ಥ್ಯವು ಹೆಚ್ಚುವುದರಿಂದ ಕೂಲಿಯು ಏರಿದರೆ ಬಂಡವಾಳಗಾರನಿಗೂ ಲಾಭ ಉಂಟಾಗಬಹುದು. (೨) ಯಾವುದಾದರೂ ಉದ್ಯಮದಲ್ಲಿ ಮುನಾಫೆಯು ಕ್ಷೀಣಿಸಿದ ಕೂಡಲೇ ಬಂಡವಾಳವು ಅಲ್ಲಿಂದ ಓಡಿಹೋಗುವುದಿಲ್ಲ. (೩) ವಿವಿಧ ವೃತ್ತಿಗಳಲ್ಲಿ ವಿವಿಧ ಕೂಲಿಯು ಇರುವುದನ್ನು ಈ ವಾದವು ಪುರಸ್ಕರಿಸುವುದಿಲ್ಲ. (೪) ವಸ್ತುಸ್ಥಿತಿಯು ಈ ವಾದವನ್ನು ಸುಳ್ಳೆನಿಸಿದೆ. ಆಸ್ಟ್ರೇಲಿಯದಂಥ ಹೊಸ ದೇಶಗಳಲ್ಲಿ ಬಂಡವಾಳ ಪರಿಮಿತವಾಗಿದ್ದರೂ, ಜನಸಂಖ್ಯೆಯು ಏರುತ್ತಿದ್ದರೂ, ಕೂಲಿಯ ದರವುಮಾತ್ರ ಮೇಲುಮಟ್ಟ ದಲ್ಲಿದೆ. ಒಳ್ಳೆಯ ವ್ಯಾಪಾರ ಇರುವಾಗ ಕೂಲಿಯೂ, ಲಾಭವೂ ಎರಡೂ ಮೇಲಕ್ಕೇರುವುವೆಂಬುದನ್ನು ಎಲ್ಲರೂ ಬಲ್ಲರು.

**ಪರಿಸರದ ಉತ್ಪಾದಕ ಶಕ್ತಿಯ ಮೀಮಾಂಸೆ:**

ಇದು ಕೂಡ ಬೇಡಿಕೆ ಮೀಮಾಂಸೆಯ ಒಂದು ಶಿಥಿಲರೂಪ. ಕೂಲಿಗೆ ಕೊಡುವಂಥ ತಿರುಗುಬಂಡವಾಳವು ಸ್ಥಿರವಾದ ಮೊತ್ತವಲ್ಲ; ಅದರ ಪ್ರವಾಹದಲ್ಲಿ ವ್ಯತ್ಯಾಸ ಉಂಟಾಗಬಲ್ಲುದು. ಪರಿಶ್ರಮದ ಉತ್ಪಾದಕ ಶಕ್ತಿಯು ಹೆಚ್ಚಿದಕೂಡಲೇ ಆ ಕಡೆಗೆ ಬಂಡವಾಳವು ವೇಗವಾಗಿ ಚಲಿಸುವುದರಿಂದ ಪರಿಶ್ರಮಕ್ಕೆ ಬೇಡಿಕೆಯು ಅತಿಶಯವಾಗುವುದು. ಒಂದು ಪಟ್ಟಣದಲ್ಲಿ x ಕೂಲಿಕಾರರು ಉದ್ಯೋಗವನ್ನು ಹುಡುಕುತ್ತಿದ್ದಾ

ರೆಂದು ಊಹಿಸೋಣ. ಅವರನ್ನು ನಾವು ನಮ್ಮ ಉದ್ಯಮಕ್ಕೆ ಪರಿಸರದಲ್ಲಿ ಸೇರಿಸಿಕೊಂಡಾಗ ಅವರು ಸಮಗ್ರ ಉತ್ಪನ್ನವನ್ನು y ರುಪಾಯಿಗಳಷ್ಟು ಹೆಚ್ಚಿಸಿದರೆ ಅವರಿಗೆ ದೊರೆಯುವ ಒಟ್ಟು ಕೂಲಿಯ ಮೊಬಲಗು y ರುಪಾಯಿಗಳೇ, ಪ್ರತಿಯೊಬ್ಬನಿಗೆ ಸಿಗುವ ಕೂಲಿ $y \div x$.




AB ಕಮಾನು ಪರಿಸರದ ಪರಿಶ್ರಮದಿಂದ ಬರುವ ಉತ್ಪನ್ನವನ್ನು ಸೂಚಿಸುವುದು. ಕೂಲಿಯನ್ನು ಜೋಳದ ರೂಪದಲ್ಲಿ ಕೊಡುವ ಪಕ್ಷಕ್ಕೆ OW ಕೂಲಿಯಲ್ಲಿ ಸಂಚಾಲಕನು OM ಕೂಲಿಗಾರರನ್ನು ನೇಮಿಸಬಹುದು. ದಿನವೊಂದರ ಜೋಳದ ಉತ್ಪನ್ನವನ್ನು OW $W^1$M ನಿಂದ ಗುರುತಿಸಬಹುದು, ಅವನ ಕೂಲಿಯ ಬೀಲು OW $W^1$M; ಉಳಿದ AW $W^1$ ಭಾಗವು ಇತರ ಅವಯವಗಳಿಗೆ ದೊರೆಯುವ ಪ್ರತಿಫಲವನ್ನು ತೋರಿಸುತ್ತದೆ. ಜೋಳ ಸೇರಿಗೆ ಆಣೆಯಿದ್ದಾಗ ದಿನ

ಕೂಲಿ ೧ರೂ. ೨ಆಣೆಯಲ್ಲಿ OM ಕೂಲಿಕಾರನನ್ನು ನೇಮಿಸಲಾಗಿದೆ ಎಂಬುದನ್ನು ನಕ್ಷೆಯಿಂದ ತಿಳಿಯಬಹುದು

ಕೂಲಿಯ ಒಟ್ಟು ಬೇಡಿಕೆಯೆಂದರೆ ಎಲ್ಲ ಸಂಚಾಲಕರ ಬೇಡಿಕೆಯ ಮೊತ್ತ ತಾನೇ. ಜೋಳದ ಬೆಲೆಯು ಏರಿದರೆ, ಸಂಚಾಲಕರು ಜೋಳ ಬೆಳೆಯಿಸಲು ತೊಡಗುವರು. ಕಡಿಮೆಯಾದರೆ, ಇರುವ ಸಂಚಾಲಕರೇ ಬೇರೆ ಉದ್ಯಮಗಳ ಕಡೆಗೋ, ಬೇರೆ ಬೆಳೆಗಳ ಕಡೆಗೋ ಆಕರ್ಷಿತರಾಗುವರು. ಜೋಳದ ಹೊಲಗಳಲ್ಲಿ ಕೂಲಿಕಾರರ ಸಂಖ್ಯೆಯು ಹೆಚ್ಚಾದ ಹಾಗೆ ಕೂಲಿಯು ಅಷ್ಟಷ್ಟೆ ಇಳಿಯುವುದು ಸ್ಥಿರವಾದ ಪರಿಮಾಣದ ಇತರ ಅವಯವಗಳೊಡನೆ ಉಪಯೋಗಿಸಲ್ಪಡುವ ಕೂಲಿಯ ಸಂಖ್ಯೆಯು ಹೆಚ್ಚಾದಂತೆ ಜೋಳದ ಕೃಷಿಯ ಪರಿಸರದ ಉತ್ಪತ್ತಿಯು ಕಡಿಮೆಯಾಗುವುದು ಕೂಲಿಯ ದರವು ಪರಿಸರದ ಉತ್ಪತ್ತಿಗೆ ಸಮಾನವಾಗಿರುವುದರಿಂದ ಕೂಲಿಯೂ ಇಳಿಯುವುದು.

ಹೆಚ್ಚು ಕೂಲಿಕಾರರನ್ನು ಉಪಯೋಗಿಸಿದಂತೆ ಸಮಗ್ರ ಉತ್ಪಾದನೆಯು ಹೆಚ್ಚುವುದರಿಂದ, ಪೂರೈಕೆಯು ಅಧಿಕವಾಗಿ ಸರಕಿನ ಧಾರಣೆಯು ಇಳಿಯುವುದು; ಇತ್ತ ಕಡೆ ಪರಿಸರದ ಉತ್ಪತ್ತಿಯ ಪರಿಮಾಣವೂ ಇಳಿಯುವುದು ಇಳಿದ ಉತ್ಪತ್ತಿಗೆ, ಇಳಿದ ಧಾರಣೆಯಿಂದ ಗುಣಿಸಿದರೆ ಬರುವ ಕಡಮೆ ಮೊತ್ತ=ಕೂಲಿ.

ಕೂಲಿಕಾರರಿಗೆ ಕೊಡುವ ಕೂಲಿಯು ಅವರು ಹೆಚ್ಚಿಸುವ ಉತ್ಪತ್ತಿಯನ್ನು ಹೊಂದಿಕೊಂಡಿದೆ. ಪರಿಶ್ರಮ, ಬಂಡವಾಳ, ಭೂಮಿ ಮುಂತಾದುವುಗಳಿಗೆ ಅವು ಉತ್ಪಾದನೆಯಲ್ಲಿ ಮಾಡುವ ಕಾರ್ಯಾನುಸಾರವಾಗಿ ನಿರ್ದಿಷ್ಟವಾದ ಮೊಬಲಗು ಸಲ್ಲುತ್ತದೆ. ಪರಮಾವಧಿ ಉತ್ಪಾದನೆಯು ಬರುವುದಕ್ಕೆ ಯಾವ ಯಾವ ಅವಯವಗಳನ್ನು, ಯಾವ ಯಾವ ದಾಮಾಶಯದಲ್ಲಿ ಉಪಯೋಗಿಸಬೇಕೋ ಅವನ್ನು ಸಂಚಾಲಕನು ಆ ದಾಮಾಶಯದಲ್ಲಿ ಉಪಯೋಗಿಸುವನು. ಕೂಲಿಕಾರನು ತನ್ನ ನಿರ್ದಿಷ್ಟ ಉತ್ಪತ್ತಿಗಿಂತ ಹೆಚ್ಚು ಕೂಲಿ ಕೇಳಿದರೆ ಅವನನ್ನು ಕೆಲಸದಿಂದ ವಜಾ ಮಾಡದೆ ಬೇರೆ ಉಪಾಯವಿರುವುದಿಲ್ಲ.

ಉತ್ಪಾದನೆಗೆ ಹೆಚ್ಚು ಸಮಯ ತಗಲುವುದು. ಹೆಚ್ಚಿನ ಕೂಲಿಕಾರರನ್ನು ತೆಗೆದುಕೊಂಡ ಕಾಲಕ್ಕೂ ಅವರ ಉತ್ಪತ್ತಿಯು ಮಾರಿ ಹೋಗುವ ತಾರೀಕಿಗೂ ನಡುವೆ ಸ್ವಲ್ಪ ಕಾಲಾವಕಾಶವಿರುವುದಿಲ್ಲವೇ? ಉತ್ಪತ್ತಿಯನ್ನು ಮಾರಿದ ಬಳಿಕ ಮಾತ್ರ ಸಂಚಾಲಕನ ಕೈಗೆ ಹಣ ಬರುತ್ತದೆ. ಆತನಕ ಕೂಲಿಕಾರರಿಗೆ ಕೂಲಿ ಕೊಡಲು ಉಪಯೋಗಿಸುವ ಬಂಡವಾಳಕ್ಕೆ ಸಲುವ ಬಡ್ಡಿಯನ್ನೂ ಸಂಚಾಲಕನು ಗಮನಿಸಬೇಕಾದುದರಿಂದ ಅವನು ಅವರಿಗೆ ಅವರ ಪರಿಸರದ ಉತ್ಪತ್ತಿಯಷ್ಟೇ ಮೊಬಲಗಿನ ಕೂಲಿಯನ್ನು ಕೊಡಲಾರನು. ಪರಿಸರದ ಉತ್ಪತ್ತಿಯಲ್ಲಿ ಈ ಬಡ್ಡಿಯ ಅಂಶವನ್ನು ಕಳೆಯಬೇಕು. ಇದು ಪರಿಸರದ ಉತ್ಪಾದಕ ಶಕ್ತಿ ಮೀಮಾಂಸೆಯ ಪರಿಷ್ಕೃತ ರೂಪ.

ಈ ಮೀಮಾಂಸೆಗೆ ಎರಡು ಮುಖ್ಯ ಆಕ್ಷೇಪಗಳನ್ನು ಸೂಚಿಸುವ. (೧) ಸರ್ವ ಸಾಧಾರಣವಾಗಿ ಈ ಮೀಮಾಂಸೆಗೆ ಬೇಕಾಗಿರುವಷ್ಟು ಅವಯವ ಸಂಚಲನೆಯೂ, ಪರಿಪೂರ್ಣ ಮೇಲಾಟವೂ ವಾಸ್ತವಿಕ ಪ್ರಪಂಚದಲ್ಲಿ ಕಾಣಸಿಗುವುದಿಲ್ಲ. ಅರ್ವಾಚೀನ ಔದ್ಯಮಿಕ ಸಮಾಜಗಳಲ್ಲಿ ಕೂಲಿಯ ನಿರ್ಣಯವು ಇಂಥ ಮೀಮಾಂಸೆಗಳಿಂದ ಆಗದೆ, ಟ್ರೇಡ್ ಯೂನಿಯನುಗಳಿಗೂ, ಸಂಚಾಲಕ ಸಂಘಗಳಿಗೂ ನಡೆಯುವ ಒಡಂಬಡಿಕೆಯಿಂದ ನಿರ್ಣೀತವಾಗುತ್ತದೆ. (೨) ಮೊದಲೇ ಹೇಳಿರುವಂತೆ, ಉತ್ಪಾದಕ ಶಕ್ತಿಗೆ ಎರಡು ಅರ್ಥಗಳಿವೆ. (ಅ) ಸರಕಿನ ಪರಿಮಾಣವನ್ನು ಹೆಚ್ಚಿಸುವುದು. (ಆ) ಅವುಗಳ ಮೌಲ್ಯವನ್ನು ವರ್ಧಿಸುವುದು. ಪೂರೈಕೆಯು ಅತಿಯಾದರೆ ಮೌಲ್ಯವು ಬೀಳುವ ಸನ್ನಿವೇಶವಿರುವುದರಿಂದ ಸಂಚಾಲಕನಿಗೆ ಅಡ್ಡಿಯಾಗುವುದನ್ನು ನಾವು ಈಗಾಗಲೇ ಪರಿಶೀಲಿಸಿರುವೆವು.

ಮೀಮಾಂಸೆ ಏನೋ ಅಪರಿಪೂರ್ಣವಾಗಿದೆಯಾದರೂ, ಕೂಲಿಯ ಮೇಲೆ ಪರಿಣಾಮ ಮಾಡುವ ಸನ್ನಿವೇಶಗಳನ್ನು ಗುರುತಿಸಲು ಇದರಿಂದ ಸಹಾಯವಾಗುವುದು. ಪರಿಶ್ರಮದ (ಕೂಲಿಕಾರರ) ಕಾರ್ಯಸಾಮರ್ಥ್ಯವು ಹೆಚ್ಚಿದರೆ ಪರಿಸರದ ಮೌಲ್ಯವು ಅಧಿಕವಾಗುವುದೆಂದೂ, ಕೂಲಿಯು ಏರುವುದೆಂದೂ, ಹೇಳಲು ಅಡ್ಡಿಯಿಲ್ಲ. 'ಫ್ಲೆಕ್ಸ್' ಕೂಲಿಯವರು ಬಾಟಾದವರಿಗಿಂತ ಹೆಚ್ಚು ಕೂಲಿ ಕೊಡುತ್ತಿದ್ದರೆ, 'ಫ್ಲೆಕ್ಸ್' ಕೂಲಿಯವರ ಪರಿ

ಸರದ ಉತ್ಪಾದಕ ಶಕ್ತಿಯು ಅಧಿಕತರವೆಂದು ನಿಸ್ಸಂದೇಹವಾಗಿ ಹೇಳ ಬಹುದು. ಭಾರತದ ಜಮ್‌ಷೆದಪುರದ ಕೂಲಿಗೆ ಅಮೇರಿಕದ ಪಿಟ್ಸ್ ಬರ್ಗ ಕೂಲಿಗಿಂತ ಕಡಿಮೆ ಕೂಲಿ ದೊರೆಯಲು ಕಾರಣವೇನೆಂಬುದನ್ನು ಪರಿಸರದ ಉತ್ಪಾದಕ ಶಕ್ತಿ ಮೀಮಾಂಸೆಯು ವ್ಯಕ್ತಪಡಿಸುವುದು. ಯಾವ ಕಾರಣದಿಂದಲೇ ಆಗಲಿ ಪಿಟ್ಸ್‌ಬರ್ಗ ಕೂಲಿಯು ಪರಿಸರದ ಉತ್ಪತ್ತಿಯು ಹೆಚ್ಚಾಗಿರುವುದರಿಂದಲೇ ಆತನಿಗೆ ಜಮ್‌ಷೆದಪುರದ ಕೂಲಿಗಿಂತ ಅಧಿಕ ಕೂಲಿ ದೊರೆಯುತ್ತದೆ ಎನ್ನಲಡ್ಡಿ ಇಲ್ಲ.

**ಕನಿಷ್ಠಾವಧಿ ಕೂಲಿ:**

ಬೀಡಿ ಉದ್ಯಮದಲ್ಲಿ ದಿನಕೂಲಿಯನ್ನು ಈಗಿರುವ ಎರಡು ರೂಪಾಯಿಯಿಂದ ನಾಲ್ಕು ರೂಪಾಯಿಯ 'ಕನಿಷ್ಠಾವಧಿ ಕೂಲಿ'ಗೆ ಏರಿಸಿದರೆ ಬೀಡಿ ಕೆಲಸಗಾರರಿಗೆ ಇದರಿಂದ ಎಷ್ಟು ಹಿತವಾಗುವುದು? ಎಂಬುದನ್ನು ಪರಿಶೀಲಿಸೋಣ ಕೆಲಸದಲ್ಲಿಟ್ಟುಕೊಳ್ಳುವ ಕೂಲಿಕಾರರಿಗೆಲ್ಲ ಸಂಚಾಲಕನು ೪ ರೂಪಾಯಿ ಕೊಡಬೇಕೆಂದು ಸರಕಾರದ ನಿರ್ಬಂಧವಿದೆಯೇ ಹೊರತು ಅವನು ಕೆಲವರನ್ನು ಹೊರದಬ್ಬುವುದಕ್ಕೆ ಸರಕಾರದ ಆಕ್ಷೇಪವಿಲ್ಲ. ಆದುದರಿಂದ ಅನೇಕ ಬೀಡಿ ಕೂಲಿಗಳು ನಿರುದ್ಯೋಗಿಗಳಾಗುವರು. ಅಥವಾ ಕೂಲಿ ಕಡಿಮೆ ಇರುವ ಇತರ ಉದ್ಯಮಗಳಿಗೆ—ಕತ್ತ ಗುದ್ದುವುದು, ಹೊಲ ಉಳುವುದು— ಸೇರುವರು. ಕೆಲವರು ಸಂಪೂರ್ಣ ನಿರುದ್ಯೋಗಿಗಳಾಗುವರು. ಅಂಥವರಿಗೆ ದಯಾಳು ಸರಕಾರವು ಅಶನಾರ್ಥ ಕೊಡುವ ಪ್ರಸಂಗವೂ ಬರುವುದು.

(೧) ಕನಿಷ್ಠಾವಧಿ ಕೂಲಿಯು ಇತರ ಕುಶಲ ಉದ್ಯಮಗಳಿಂದ ಕೂಲಿಕಾರರನ್ನು ಆಕರ್ಷಿಸಿ, ಈಗಿದ್ದ ಕೆಲವರನ್ನೇ ಬೀಡಿ ಉದ್ಯಮದಿಂದ ಹೊರಗಟ್ಟಬಹುದು (೨) ಅಥವಾ ಸಂಚಾಲಕನು ಬೀಡಿ ಎಲೆ ಕತ್ತರಿಸಲು ಹೊಸಯಂತ್ರವನ್ನು ತರಿಸಿ ಕೆಲವು ಜನ ಕೆಲಸಗಾರರನ್ನು ಬರ್ಕಾಸ್ತು ಮಾಡಬಹುದು. (೩) ಹೇಗಿದ್ದರೂ, ಏರಿದ ಕೂಲಿಯ ದೆಸೆಯಿಂದ ಉದ್ಯಮದಲ್ಲಿ ಮುನಾಫೆಯು ಕಡಿಮೆಯಾಗಿ ಕೆಲವರು ಸಂಚಾಲಕರು ದಿವಾಳಿಯಾಗುವರು. ಕೆಲವರು ಬೀಡಿಯ ಕೆಲಸ ಬಿಟ್ಟು ಬೇರೆ ಉದ್ಯಮ ಹಿಡಿ

ಯುವರು ಹೀಗೆ ಕಾಲ ಕಳೆದಂತೆ ಬಂಡವಾಳವು ಬೀಡಿ ಉದ್ಯಮದ ಹತ್ತಿರ ಸುಳಿಯದಿರುವುದರಿಂದ ಬೀಡಿಯ ಫರ್ಮುಗಳ ಉತ್ಪಾದನೆಯ ಮೊತ್ತವು ಕುಗ್ಗುವುದು. ಪೂರೈಕೆಯು ಕ್ಷೀಣಿಸುವುದರಿಂದ ಬೀಡಿಯ ಧಾರಣೆ ಏರುವುದು. ಬೀಡಿ ಉದ್ಯಮದಲ್ಲಿ ಮುನಾಫೆಯ ಆಸೆ ಮರಳಿ ಚಿಗುರುವುದು.

ಒಟ್ಟಾರೆಮೇಲೆ, ಹಿಂದಿರುವುದಕ್ಕಿಂತ ಹೆಚ್ಚು ಕನಿಷ್ಠಾವಧಿ ಕೂಲಿಯನ್ನು ನಿರ್ಬಂಧವಾಗಿ ಒಂದು ಉದ್ಯಮದ ಮೇಲೆ ಹೇರಿದಾಗ ಆ ಉದ್ಯಮದಲ್ಲಿ ಯಾರು ತಮ್ಮ ಕೆಲಸ ಉಳಿಸಿಕೊಳ್ಳುವ ಭಾಗ್ಯ ಪಡೆದಿರುವರೋ ಅವರಿಗೆ ಒಳ್ಳೆಯದಾಗುವುದು. ಪ್ರಾಯಶಃ ಕೆಲವರಿಗೆ ನಿರುದ್ಯೋಗದ ಸರದಿ ಬರುವುದು ಎಷ್ಟು ಜನ ನಿರುದ್ಯೋಗಿಗಳಾಗುವರು ಎಂಬುದು ಆಯಾ ಉದ್ಯಮದ ಸನ್ನಿವೇಶವನ್ನು ಹೊಂದಿಕೊಂಡಿದೆ. ನಿರುದ್ಯೋಗಿಗಳಾದವರಿಗೂ, ಕಡಿಮೆ ಕೂಲಿಯ ಉದ್ಯೋಗಕ್ಕೆ ಸೇರಿದವರಿಗೂ, ನಿಸ್ಸಂದೇಹವಾಗಿ ನಷ್ಟ ಸಂಭವಿಸುವುದು ಉದ್ಯಮದಲ್ಲಿ ಲಾಭವು ಕೆಲವು ಕಾಲ ಕಡಿಮೆಯಾಗುವುದು. ಸರಕಿನ ಧಾರಣೆ ಏರಿದರೆ ಅನುಭೋಗಿಗಳು ದಂಡ ತೆರುವಂತಾಗುವುದು. ಸರಕಾರವೇ 'ನಿರುದ್ಯೋಗಿಗಳ ಹಿತ ಸಂರಕ್ಷಣೆ'ಯನ್ನು ಮಾಡುವ ರೂಢಿ ಇರುವ ಇಂಗ್ಲೆಂಡು, ಜರ್ಮನಿ ಮುಂತಾದ ದೇಶಗಳಲ್ಲಿ ಜನರು ಸರಕಾರಕ್ಕೆ ಹೆಚ್ಚು ತೆರಿಗೆ ಕೊಡಬೇಕಾಗುವುದು.

**ಸಾಪೇಕ್ಷ ಕೂಲಿ:**

ಹಲವು ಉದ್ಯಮಗಳಲ್ಲಿ, ಹಲವು ಮಟ್ಟದ ಕೂಲಿಗಳು ಇರುವುದರಿಂದ 'ಕೂಲಿಗಳ ಸಾಮಾನ್ಯಮಟ್ಟ' ಎಂಬ ಕಲ್ಪನೆಯು ಸಹಜವಾದುದಲ್ಲ. ಒಂದೊಂದು ಉದ್ಯಮದಲ್ಲಿ ಒಂದೊಂದು ಕೂಲಿ– ಒಂದರಲ್ಲಿ ಹೆಚ್ಚು, ಒಂದರಲ್ಲಿ ಕಡಿಮೆ–ಇರುವುದೇ ನಿಯಮ. ಅಲ್ಲದೆ 'ಹಣ ಕೂಲಿ'ಯೂ 'ವಾಸ್ತವಿಕ' ಕೂಲಿಯೂ ಬೇರೆ ಬೇರೆಯಾಗಿರುತ್ತವೆ. ತಿಂಗಳೊಂದಕ್ಕೆ ಒಬ್ಬ ಉಪಾಧ್ಯಾಯನಿಗೆ ೪೦ ರೂಪಾಯಿ ಹಣಕೂಲಿ ಸಿಗುವುದು. ಆದರೆ ಸರಕುಗಳ ಧಾರಣೆಯು ಮಿತಿ ಮೀರಿದರೆ ಅವನ ವಾಸ್ತವಿಕ ಕೂಲಿಯು ೪೦ ರೂಪಾಯಿಗಿಂತ ಕಡಮೆಯಾಗುತ್ತದೆ. ೧೯೩೯ರ ೪೦ ರೂ. ಕೂಲಿಯು

೧೯೪೦ರ ೨೦ ರೂಪಾಯಿ ಕೂಲಿಗೂ ಕೀಳಾಗಿ ತೋರಲು ಧಾರಣೆಯು ನಾಲ್ಕು ಪಟ್ಟು ಏರಿರುವುದು ಕಾರಣ. ಗಿರಣಿಯ ಕೂಲಿಕಾರನು ದಿನಕ್ಕೆಂಟು ತಾಸು ದುಡಿದರೆ ಅವನ ತಾಸುಗಟ್ಟಲೆಯ ಕೆಲಸಕ್ಕೆ ಕೊಡುವ ಕೂಲಿಗೆ 'ಸಮಯ ಕೂಲಿ' ಎಂದೂ; ಒಂದು ಗಾಡಿ ಕಟ್ಟಿಗೆ ಒಡೆದರೆ ಇಷ್ಟು ಕೊಡೋಣ, ನೂರು ಕಲ್ಲುಗಳನ್ನು ಕೆತ್ತಿ ಕಟ್ಟಿದರೆ ಇಷ್ಟು ಎಂದು ಕೂಲಿ ನಿರ್ಣಯಿಸುವುದಕ್ಕೆ 'ಕೆಲಸಕೂಲಿ' ಎಂದೂ ಕರೆಯುವರು. ಸರ್ವಸಾಧಾರಣವಾಗಿ ಚಾತುರ್ಯಕ್ಕೆ ಹೆಚ್ಚು ಆಸ್ಪದವಿಲ್ಲದಿರುವ ಉದ್ಯಮಗಳಲ್ಲಿ ಗಂಡಸರ ಕೂಲಿ ಬೇರೆ (ಹೆಚ್ಚು) ಹೆಂಗುಸರ ಕೂಲಿ ಬೇರೆ (ಕಡಿಮೆ) ಇರುವುದು ವಾಡಿಕೆ.

ಪೈಪೋಟಿಯ ದೆಸೆಯಿಂದ ಎಲ್ಲಾ ಉದ್ಯಮಗಳಲ್ಲಿಯೂ ಕೂಲಿಯ ದರ ಒಂದೇ ಆಗುವುದಿಲ್ಲವೇಕೆ? ಎಂಬುದನ್ನು ವಿಚಾರಿಸುವ

(೧) ವಿವಿಧ ವೃತ್ತಿಗಳಲ್ಲಿನ ವಿವಿಧ ಪರಿಸ್ಥಿತಿಗಳ ದೆಸೆಯಿಂದಾಗಿ ಕೂಲಿಯ ದರದಲ್ಲಿ ಭೇದಗಳುಂಟಾಗುವುವು.

(೨) ಸಾಪೇಕ್ಷ ಕೂಲಿ ಉಂಟಾಗಲು ಮುಖ್ಯ ಕಾರಣವೇನೆಂದರೆ ನಮ್ಮ ಆರ್ಥಿಕ ವ್ಯವಸ್ಥೆಯಲ್ಲಿ ಪೈಪೋಟಿಗೆಳಸುವ ಸರಕುಗಳು ಅಧಿಕವಾಗಿರುತ್ತವೆ. ಪ್ರತಿಯೊಂದು ಸರಕಿನಲ್ಲಿ ನಿರತನಾಗಿರುವ ಕೂಲಿಯ ಕಾರ್ಯಸಾಮರ್ಥ್ಯವೂ ಬಲವೂ ಸಿಲುಮೆಯೂ ಆ ಸರಕಿನ ಉತ್ಪಾದನೆಗೆ ಅನುಗುಣವಾಗಿದ್ದು ಇನ್ನೊಂದು ಸರಕಿನ ಉತ್ಪಾದನೆಯಲ್ಲಿರುವ ಕೂಲಿಗಿಂತ ಅವನು ಬೇರೆಯೇ ಆಗಿರುವನು. ಅವನ ಕೂಲಿ ಇತರ ಉದ್ಯಮಗಳಲ್ಲಿರುವುದಕ್ಕಿಂತ ಬೇರಾಗಬಹುದು. ಒಂದು ಗುಂಪು ಇನ್ನೊಂದು ಗುಂಪಿನೊಡನೆ ಪೈಪೋಟಿ ಮಾಡದೆ ಇರುವುದರಿಂದ ಒಂದೊಂದರಲ್ಲಿ ಒಂದೊಂದು ದರದ ಕೂಲಿ ನಡೆಯಬಲ್ಲುದು. ಕೂಲಿಕಾರ ಗುಂಪುಗಳು ಹೀಗೆ ಪ್ರತಿಸ್ಪರ್ಧಿಸದೆ ಇರಲು (ಅ) ಸರಕಾರೀ ಕಾನೂನು (ಆ) ಪ್ರಾವೀಣ್ಯ ಅಥವಾ ತಜ್ಞತೆ (ಇ) ಸಾಮಾಜಿಕ ಮಾನ ಮರ್ಯಾದೆ (ಈ) ಶಿಕ್ಷಣಕ್ಕೆ ಬಂಡವಾಳ ವಿನಿಯೋಗಿಸಬೇಕಾಗುವುದು (ಉ) ಕಾರ್ಯದಕ್ಷತೆಯ ವಿರಳತ್ವ (ಊ) ಹೆಂಗಸರ ಸಂಪಾದನೆ (ಋ) ಯಶಸ್ಸು ಸಿಗುವುದರಲ್ಲಿ ಇರುವ ಅನಿಶ್ಚಿತತ್ವ— ಮೊದಲಾದುವು ಕಾರಣವಾಗಬಹುದು.

**ಕಾರ್ಮಿಕ ಸಂಘ ಮತ್ತು ಕೂಲಿ:**

ರಾಷ್ಟ್ರದ ಉತ್ಪಾದನೆಯೂ ವರಮಾನವೂ ಪರಮಾವಧಿಯನ್ನು ಮುಟ್ಟಬೇಕಾದರೆ ಔದ್ಯಮಿಕ ರಂಗದಲ್ಲಿ ಶಾಂತಿಯು ನೆಲೆಗೊಳ್ಳಬೇಕು. ಮಾಲಕರಿಗೂ ಕೂಲಿಕಾರರಿಗೂ ಜಗಳಗಳುಂಟಾಗುವುದರಿಂದ ಸಾರ್ವತ್ರಿಕ ಹಾನಿ ಇದೆ ಎಂಬುದನ್ನು ಮುಂಬಯಿಯಲ್ಲಿ ಸಾಮಾನ್ಯವಾಗಿ ನಡೆಯುವ ಒಂದು ಬಟ್ಟೆಯ ಗಿರಣಿಯ ಸಂಪಿನ ನಿದರ್ಶನದಿಂದ ಸಿರ್ಧರಿಸೋಣ. ಸಂಪಿನ ಕಾಲದಲ್ಲಿ ಕೂಲಿಕಾರನಿಗೆ ಕೂಲಿಯು ಸಿಗದೆ ಅವನ ವರಮಾನವೂ, ಗ್ರಾಹಕ ಶಕ್ತಿಯೂ ಕಡಮೆಯಾಗುವುವು ಯಂತ್ರಗಳು ಕೆಲಸವಿಲ್ಲದೆ ನಿಂತಿರುವುದರಿಂದ ಹತ್ತಿಗೆ ಬೇಡಿಕೆಯು ಕುಗ್ಗುವುದು. ಹತ್ತಿ ಬೆಳೆಯುವವರ ಹಾಗೂ ಹತ್ತಿ ಸರಬರಾಯಿ ಮಾಡುವಂಥವರ ವರಮಾನವು ಇಳಿಯುವುದು ರೈಲ್ವೇ ಇಲಾಖೆಗೆ ನಷ್ಟವಾಗುವುದು. ಕಲ್ಕತ್ತೆಯ ಸಣಬಿನ ಕಾರ್ಖಾನೆಯಲ್ಲಿ ಒಡೆಯರ ಸಂಪು (ಲಾಕ್ ಔಟ) ಬಂದರೆ ಅಮೇರಿಕದವರು ಸಣಬಿನ ಚೀಲವನ್ನು ಬಿಟ್ಟು ಕೆನಡಾದ ಕಾಗದದ ಚೀಲಕ್ಕೆ ಆರ್ಡರು ಕಳಿಸಿಯಾರು. ಅಲ್ಪಕಾಲದ ಸಂಪಿನಿಂದ ಈ ಸಣಬಿನ ಉದ್ಯಮಕ್ಕೂ, ದೇಶದ ಡಾಲರು ಸಂಪಾದನೆಯ ಮೂಲಕ್ಕೂ ಭಯಂಕರ ಆಘಾತವಾಗುವುದು. ಆದುದರಿಂದ ಔದ್ಯಮಿಕ ಅಶಾಂತಿಯಿಂದ ರಾಷ್ಟ್ರಕ್ಕೆ ಹಿತವಾಗುವುದಿಲ್ಲ.

ಕೂಲಿಯ ದರವು ಇಳಿಯದಿರಲು ಕೂಲಿಕಾರರ ಸಂಘಟನಾ ಶಕ್ತಿಯೇ ಕಾರಣ. ತಮ್ಮ ಹಿತ ಸಂರಕ್ಷಣೆಗಾಗಿ ಕೂಲಿಕಾರರು ಕಟ್ಟಿಕೊಳ್ಳುವ ಸಂಘಗಳಿಗೆ ಕಾರ್ಮಿಕ ಸಂಘ ಅಥವಾ ಟ್ರೇಡ್ ಯೂನಿಯನ್‌ಗಳು ಎನ್ನುವರು ಕೂಲಿಕಾರರು ಒಂದುಗೂಡಿ ಪರಿಶ್ರಮವೆಂಬ ತಮ್ಮ ಸೊತ್ತಿನ 'ಮೊನೊಪಲಿ' ಪಡೆಯುವುದರಿಂದ ಮಾಲಕ ವರ್ಗವು ಅವರ ಕೇಳಿಕೆಗಳಿಗೆ ತಲೆಬಾಗಬೇಕಾಗಿ ಬರುವುದು. ಕೂಲಿ ಇಳಿಸುವ ಸುದ್ದಿ ಕೇಳಿದೊಡನೆ ಕೂಲಿಕಾರರು ಒಂದಾಗಿ ಅದನ್ನು ತಡೆಯುವರು ಸರಕುಗಳ ಧಾರಣೆಯು ಅತಿಯಾದಾಗ ತಮ್ಮ ವಾಸ್ತವಿಕ ಕೂಲಿಯ ಹೆಚ್ಚಳಕ್ಕಾಗಿ ಹಣಕೂಲಿಯನ್ನು ಏರಿಸಬೇಕೆಂದು ಸಂಚಾಲಕರಿಗೆ ಬಿನ್ನವಿಸಿಕೊಳ್ಳುವರು. ಸಂಚಾಲಕರು ಒಪ್ಪದಿದ್ದರೆ ಸಂಘರ್ಷವು ಉಂಟಾಗುವುದು. ಟ್ರೇಡ್ ಯೂನಿ

ಯನ್ ಇತಿಹಾಸವೆಂದರೆ ಕೂಲಿಕಾರ ಹೋರಾಟದ ಸಾಹಸಮಯವಾದ ಇತಿಹಾಸ. ಸಾಂಪ್ರದಾಯಿಕವಾಗಿ ಬಂದ ಜೀವನದ ಮಟ್ಟವನ್ನು ಸ್ಥಿರಗೊಳಿಸುವುದಕ್ಕೂ, ನ್ಯಾಯಪೂರ್ವಕವಾದ ಕೂಲಿಯನ್ನು ಗಳಿಸುವುದಕ್ಕೂ, ಯುದ್ಧಕಾಲದಂಥ ಅಯಾಚಿತ ಸಂದರ್ಭಗಳಲ್ಲಿ ಮಾಲಕರಿಗೆ ಕೊಚ್ಚಿಕೊಂಡು ಬರುವ ಲಾಭದಲ್ಲಿ ಪಾಲು ಕೇಳುವುದಕ್ಕೂ, ತಮ್ಮ ಕೆಲಸದ ಪರಿಸ್ಥಿತಿಯನ್ನೂ ವಸತಿ ಸೌಕರ್ಯವನ್ನೂ ತಮ್ಮದೇ ನಿರ್ಣಯದಿಂದ ನಿರ್ಮಿಸಿಕೊಳ್ಳುವುದಕ್ಕೂ ಟ್ರೇಡ್ ಯೂನಿಯನ್‌ಗಳು ಯತ್ನಿಸುತ್ತವೆ.

ಸಾಧಾರಣವಾಗಿ ಟ್ರೇಡ್ ಯೂನಿಯನ್‌ಗಳಿಗೆ ಎರಡು ವಿಧದ ಕಾರ್ಯಭಾರಗಳಿವೆ (೧) ಸಂರಕ್ಷಕ ಕಾರ್ಯಭಾರ—ಕೂಲಿಕಾರರಿಗೆ ವಿಮೆ ಮಾಡಿಸುವುದು; ಅವರಿಗೂ ಅವರು ಮಕ್ಕಳಿಗೂ ಶಿಕ್ಷಣ ಕೊಡಿಸುವುದು; ಕೂಲಿಕಾರರ ಘನವಂತಿಕೆಯು ಸಮಾಜದಲ್ಲಿ ಹೆಚ್ಚುವಂತೆ ನೋಡಿಕೊಳ್ಳುವುದು ಮುಂತಾದುವು. ಅಮೇರಿಕ, ಜರ್ಮನಿ, ಇಂಗ್ಲೆಂಡುಗಳಲ್ಲಿ ಸಂರಕ್ಷಕ ಕಾರ್ಯಭಾರಗಳಿಗೆ ಎರಡನೆಯದಾದ ಸಾಹಸ ಕಾರ್ಯಭಾರದಷ್ಟೇ ಪ್ರಾಧಾನ್ಯವಿದೆ. ಆದರೆ ಉತ್ಕಟಕಾಲವನ್ನಿದಿರಿಸುತ್ತಿರುವ ಭಾರತದೇಶದಲ್ಲಿ ವಿಶಿಷ್ಟ ರಾಜಕೀಯ ಪಕ್ಷಗಳು ಸಾಹಸ ಕಾರ್ಯಭಾರಕ್ಕೇ ಅಧಿಕ ಮಹತ್ತ್ವವನ್ನು ಕೊಟ್ಟು ಕಾರ್ಮಿಕ ಕ್ಷೇಮದ ರಚನಾತ್ಮಕ ಕಾರ್ಯಗಳನ್ನು ಮರೆತಂತಿದೆ. (೨) ಉದ್ಯಮಗಳ ಒಡೆತನದಲ್ಲಿಯೂ, ವ್ಯವಸ್ಥೆಯಲ್ಲಿಯೂ ಪಾಲುಬೇಡುವುದೇ ಮುಂತಾದ ಸಾಹಸ ಕಾರ್ಯಭಾರಗಳು.

ಒಡೆಯರಿಗೂ ಕೂಲಿಕಾರರಿಗೂ ಜರಗುವ ಸಂಘರ್ಷಗಳನ್ನು ಸುಧಾರಿಸಲು ಪ್ರಪಂಚದಲ್ಲಿ ಕೆಲವು ಪದ್ಧತಿಗಳು ಜಾರಿಗೆ ಬಂದಿವೆ:—

**[೧] ಲಾಭದಲ್ಲಿ ಪಾಲು:** ನಿಶ್ಚಿತವಾದ ಕೂಲಿಯಲ್ಲದೆ ಲಾಭದಲ್ಲಿಯೂ ಪಾಲುಕೊಡುವೆನು ಎಂಬ ಸಂಚಾಲಕನ ವಾಗ್ದಾನದ ಮೇಲೆ ಕೂಲಿಕಾರರು ಕೆಲಸಮಾಡುವುದು. ಸಂಚಾಲಕರು ಮೋಸಮಾಡದ ಹಾಗೆ ಟ್ರೇಡ್ ಯೂನಿಯನಿನ ಅಧಿಕಾರಿಗಳು ಎಚ್ಚರದಲ್ಲಿರಬೇಕು. ಆದುದರಿಂದ ಈ ಪದ್ಧತಿಯು ಶಿಕ್ಷಣದಲ್ಲಿ ಮುಂದುವರಿದ ಹಾಗೂ ಅಧಿಕಾರಿಗಳಿಗೆ ಹೆಚ್ಚು ಸಂಬಳ ಕೊಡುವಂಥ ಸನ್ನಿವೇಶಗಳಲ್ಲಿ— ಅಮೇರಿಕದ ಸಂಯುಕ್ತ ರಾಷ್ಟ್ರದಲ್ಲಿ—ಮಾತ್ರವೇ ಸಾಧ್ಯವಾದೀತು.

**[೨] ಜಾರುವ ಮಾನದಂಡ:** ಧಾರಣೆ ಸೂಚಿಯಲ್ಲಿ ಬದಲಾವಣೆ ಯಾದಹಾಗೆ ಕೂಲಿಯಲ್ಲಿ ಏರಿಳಿತಗಳಾಗುವುದಕ್ಕೆ ಜಾರುವ ಮಾನದಂಡದ ವ್ಯವಸ್ಥೆ ಎನ್ನಬಹುದು. ಧಾರಣೆಸೂಚಿಯ ಏರಿಕೆಗನುಸರಿಸಿ ಕೂಲಿ ಏರುವಾಗ ಕೂಲಿಕಾರರು ಸಂತೋಷಪಡುವರು; ಧಾರಣೆ ಕಡಿಮೆ ಯಾದಾಗ ತಮ್ಮ ಕೂಲಿಯನ್ನು ಕಡಮೆ ಮಾಡಿಕೊಳ್ಳಲು ಅವರು ಒಪ್ಪುವುದು ಕಷ್ಟ.

**[೩] ಸಹಭಾಗಿ ಯೋಜನೆ:** ಕೂಲಿಕಾರರು ಉದ್ಯಮದಲ್ಲಿ ಷೆಯುರು ದಾರರಾಗಿ ಒಡೆತನದಲ್ಲೂ, ವ್ಯವಸ್ಥೆಯಲ್ಲೂ ಅವರ ಷೆಯರಿನ ಮೊತ್ತಕ್ಕನು ಸಾರವಾಗಿ ಭಾಗವಹಿಸುವುದು. ಕೂಲಿಕಾರರಿಗೆ ಒಡೆತನದಲ್ಲಿಯೂ ವ್ಯವ ಸ್ಥೆಯಲ್ಲಿಯೂ ಭಾಗಕೊಡುವುದು ನ್ಯಾಯವೆಂಬುದನ್ನು ಈ ಯೋಜನೆಯು ಅಂಗೀಕರಿಸಿರುವುದು ಟ್ರೇಡ್‌ಯೂನಿಯನ್ ಹೋರಾಟದ ಒಂದು ದೊಡ್ಡ ಹೆಜ್ಜೆಯಾಗಿದೆ.

**[೪] ಸಂಧಾನದ ಮಂಡಲಿಗಳು:** ಸಂಧಾನ ಮಂಡಲಿಗಳಲ್ಲಿ ಮಾಲಕರು, ಕೂಲಿಕಾರರು ಎಂಬ ಹೋರಾಡುವ ಪಕ್ಷಗಳಲ್ಲದೆ ಮೂರ ನೆಯ ಒಂದು ಪಂಗಡ ಇರುವುದುಂಟು. ವಿವಾದಗಳು ಈ ಮಂಡಲಿಯ ಮುಂದೆ ಬಂದು ಇತ್ಯರ್ಥವಾಗತಕ್ಕುವು. ಕೂಲಿಕಾರರಿಗೂ ಮಾಲಕರಿಗೂ ಸಮಪ್ರಾತಿನಿಧ್ಯವಿರುವ ಇಂಥ ಬೋರ್ಡುಗಳಲ್ಲಿ ಪ್ರಾಮುಖ್ಯ ವಿವಾದಗ ಳನ್ನು ತೀರ್ಮಾನಿಸುವ ಜವಾಬುದಾರಿಯು ಬೋರ್ಡಿನಿಂದ ಹೊರಗೆ, ವಿವಾ ದಕ್ಕೆ ಸಂಬಂಧವಿರದ, ಮೂರನೆಯ ಪಂಗಡದ ಕೈಗೆ ಬರುವುದರಿಂದ ವಿವಾ ದಪಕ್ಷಗಳನ್ನು ಇತ್ಯರ್ಥಕ್ಕೆ ಒಪ್ಪಿಸುವುದು ಕಷ್ಟಸಾಧ್ಯವಾದ ಕೆಲಸ.

**[೫]** ಸಂಧಾನವು ಮುರಿದರೆ **'ಆರ್ಬಿಟ್ರೇಷನ್'** ಒಂದೇ ಉಳಿದ ಹಾದಿ. 'ಆರ್ಬಿಟ್ರೇಷನ್' ಸ್ವಬುದ್ಧಿಪ್ರೇರಿತವಾಗಿ ಬರಬಹುದು; ಅಥವಾ ರಾಷ್ಟ್ರವು ಅದನ್ನು ಕಡ್ಡಾಯವಾಗಿ ವಿಧಿಸಬಹುದು. 'ಆರ್ಬಿಟ್ರೇಷನ್' ನಡೆಯಿಸುವ ಮಧ್ಯಸ್ಥನು/ರು ವಿವಾದದ ಹಿನ್ನೆಲೆ-ಮುನ್ನೆಲೆಗಳನ್ನು ಕೂ ಲಂಕಷವಾಗಿ ತಿಳಿದು ತೀರ್ಮಾನಿಸುವಾಗಬಹಳ ತಡವಾಗುವುದರಿಂದ ಇದು ಅಷ್ಟೊಂದು ಸೂಕ್ತವಾದ ವಿಧಾನವಲ್ಲ.

**[೬] ಕೂಲಿಕಾರ ಕಾಯಿದೆಗಳು:** ಕೂಲಿಕಾರರ ಕೆಲಸ, ಕೂಲಿ, ವಸತಿ-ಸೌಕರ್ಯ ಇತ್ಯಾದಿಗಳನ್ನು ಅವರಿಗೆ ಹಿತವಾಗುವ ರೀತಿಯಲ್ಲಿ ನೆರವೇರಿಸಲು ಶಾಸನಗಳನ್ನು ರಚಿಸುವುದು. ಶಾಸನ ಸಭೆಗಳಲ್ಲಿ ಜಾರಿಗೆ ಬರುವ ಕೂಲಿಕಾರ ಕಾಯಿದೆಗಳು ಮುಂದುವರಿದ ದೇಶಗಳ ಕೂಲಿಕಾರರಿಗೆ ಅನೇಕ ಲಾಭಗಳನ್ನು ತಂದಿರುವುವಾದರೂ ಟ್ರೇಡ್ ಯೂನಿಯನ್‌ಗಳ ಹೋರಾಟವು ಇನ್ನೂ ನಿಲ್ಲದಿರುವುದು ಶೋಚನೀಯ.

**[೭] ಸಾಮಾಜಿಕ ವಿಮೆ:** ಜರ್ಮನಿಯಲ್ಲಿ ಈಗ ಅರುವತ್ತು ವರ್ಷಗಳಿಂದ ಈ ಯೋಜನೆಯು ಜಾರಿಯಲ್ಲಿದೆ. ಪ್ರತಿಯೊಂದು ಉದ್ಯಮವು ತನ್ನ ಕೂಲಿಕಾರರನ್ನು ಅವರಿಗೆ ಬರುವ ಪಂಚಮಹಾನಷ್ಟ ಸಂಭವಗಳಿಂದ ಪಾರುಮಾಡಲು ವಿಮೆಯ ಯೋಜನೆ ಕೈಗೊಳ್ಳಬಹುದು. ಆ ನಷ್ಟ ಸಂಭವಗಳು ಯಾವುವೆಂದರೆ. (ಅ) ವೃದ್ಧಾಪ್ಯ (ಆ) ಅನಾರೋಗ್ಯ (ಇ) ನಿರುದ್ಯೋಗ (ಈ) ಜಖಮು (ಉ) ಮರಣ. ಇಂಗ್ಲೆಂಡಿನ ಬೆವರಿಜ್ ಯೋಜನೆಯು ಸಾಮಾಜಿಕ ಭದ್ರತೆಯ ಜವಾಬುದಾರಿಯನ್ನು ರಾಷ್ಟ್ರದ ಹೆಗಲ ಮೇಲೆ ಹೊರಿಸಿತು. ಅಲ್ಲಿನ ಸಮಾಜವಾದಿ ಸರಕಾರವು ಅದನ್ನು ಶಿರಸಾವಹಿಸಿ 'ನ್ಯಾಶನಲ್ ಹೆಲ್ತ್ ಇನ್ಶ್ಯೂರೆನ್ಸ್' ಎಂಬ ಸಮಗ್ರ ಸಾಮಾಜಿಕ ಭದ್ರತೆಯ ಉತ್ತಮ ಯೋಜನೆಯನ್ನು ತೆರಿಗೆದಾರರು ಕೊಡುವ ಹಣದಿಂದ ನಡೆಯಿಸುತ್ತಿದೆ.

ಈ ಹಲವು ಏರ್ಪಾಡುಗಳಿಂದ ಕೂಲಿಕಾರಿಗೆ ಸಮಾಧಾನವಾಗದಿದ್ದರೆ ಕೊನೆಗೆ ಸಂಪಿನ ಬ್ರಹ್ಮಾಸ್ತ್ರವು ಇದ್ದೇ ಇದೆ. ಟ್ರೇಡ್ ಯೂನಿಯನ್‌ಗಳ ಕೋಶದಲ್ಲಿ ಎಷ್ಟು ಹಣವಿದೆ? ಸಂಪು ಮುಂಬರಿದರೆ ಕೂಲಿಕಾರರಿಗೆ ಸಹಾಯ ಒದಗಿಸ ಬಹುದೆ? ಕೂಲಿಕಾರ ಸಂಘಟನೆಯು ಎಷ್ಟು ದೃಢವಾಗಿದೆ? ಮಾಲಕರ ಧಾರಣಶಕ್ತಿಯು ಎಷ್ಟಿದೆ? ಮುಂತಾದ ಹಲವು ಅನಿರೀಕ್ಷಿತ ಘಟನೆಗಳ ಮೇಲೆ ಸಂಪಿನ ಜಯಾಪಜಯಗಳು ಹೊಂದಿಕೊಂಡಿವೆ.

## ಹತ್ತನೆಯ ಅಧ್ಯಾಯ

# ಜನಸಂಖ್ಯೆ

### ಪರಿಶ್ರಮ ಹೆಚ್ಚುಗಾರಿಕೆ:

ಪ್ರಪಂಚದ ಉತ್ಪಾದನೆಯನ್ನು ನಡೆಯಿಸುವ ಕೂಲಿಕಾರರೂ ಸಂಚಾಲಕರೂ, ವ್ಯವಸ್ಥಾಪಕರೂ ಇತರ ಎಲ್ಲ ಅವಯವಗಳಿಗಿಂತ ಮೇಲ್ಮೆಯುಳ್ಳವರು ರಾಷ್ಟ್ರದ ಉತ್ಪಾದನೆಯ ಮಟ್ಟವು ಅದರ ಜನಶಕ್ತಿಯ ಬೆಂಬಲದಿಂದಲೇ ಏರಬೇಕು ಜನಸಂಖ್ಯೆಯ ಪ್ರಶ್ನೆಯನ್ನು ಒಂದಲ್ಲ ಒಂದು ರೀತಿಯಲ್ಲಿ, ಒಂದಲ್ಲ ಒಂದು ಸಮಯ, ಎಲ್ಲ ರಾಷ್ಟ್ರಗಳವರೂ ಇದಿರಿಸಬೇಕಾಗಿದೆ. ಜನವೃದ್ಧಿಯ ಪ್ರಗತಿಯು ಮಂದವಾಗಿರುವ ಫ್ರಾನ್ಸ್, ಕೆನಡಾ ಮೊದಲಾದ ದೇಶಗಳಿಗೆ ಜನಶಕ್ತಿ ಬೆಳೆಯಿಸಿಕೊಳ್ಳುವ ಹಂಬಲು, ಜನವೃದ್ಧಿ ಅತಿರೇಕವಾಗಿರುವ ಚೀನ, ಇಂಡಿಯಾ, ಮೊದಲಾದ ಏಶಿಯದ ನಾಡವರಿಗೆ ಇದ್ದವರಿಗೆ ಅನ್ನ ದೊರಕಿಸಿ ದೇಶದ ಉತ್ಪಾದನೆ ಹೆಚ್ಚಿಸಬೇಕೆಂಬ ಗೀಳು. ಪಾಶ್ಚಾತ್ಯರಿಗೆ ಜನರ ಕೊರತ ಒಂದು ರೋಗ, ನಮಗೆ ಅದರ ಬಾಹುಳ್ಯವು ಮಹಾಮಾರಿ. ಜನಸಂಖ್ಯೆಯು ಹೆಚ್ಚಾಗಿದ್ದು ದೇಶದ ವಿಸ್ತಾರವೂ, ಪ್ರಚ್ಛನ್ನಶಕ್ತಿಯೂ, ಉತ್ಪಾದನೆಯೂ ಕಡಿಮೆಯಾಗಿದ್ದಲ್ಲಿ, ನೆರೆ ರಾಷ್ಟ್ರಗಳ ಮೇಲೆ ದಂಡೆತ್ತಿಹೋಗಿಯಾದರೂ ಉದ್ಧಾರವಾಗೋಣ ಎಂಬ ಅವಿವೇಕ ತಲೆದೋರುವುದುಂಟು. ಇದುವೇ ಸಾಮ್ರಾಜ್ಯವಾದದ ಅಡಿಗಲ್ಲು. ಆದುದರಿಂದ ಜನಸಂಖ್ಯೆಯ ಗಾತ್ರದ ಪರಿಣಿತಗಳು ಅರ್ಥ ಶಾಸ್ತ್ರದಲ್ಲಿ ಮಾತ್ರವೇ ಅಲ್ಲದೆ, ರಾಜನೀತಿಯಲ್ಲಿಯೂ ಪ್ರಭಾವ ಬೀರುವುವು

### ಮಾಲ್ಥೂಸನ ಮೀಮಾಂಸೆ:

ಈಗ ಒಂದು ಶತಮಾನದ ಹಿಂದೆ ಮಾಲ್ಥೂಸ್ ಎಂಬವನು ಇಂಗ್ಲೆಂಡಿನಲ್ಲಿ ಜನಸಂಖ್ಯೆಯಮೇಲೆ ರಚಿಸಿದ ಒಂದು ಪ್ರಬಂಧದ ಚರ್ಚೆ ನಿನ್ನೆ ಮೊನ್ನಿನವರೆಗೂ ನಡೆಯುತಿದ್ದಿತು. ಅದರಲ್ಲಿ ಆತ ಸಾಮಾನ್ಯವಾಗಿ

(೧) ಪ್ರಪಂಚದ ಜನಸಂಖ್ಯೆಯು ಪ್ರಪಂಚದ ಮೂಲಸಂಪತ್ತಿಗಿಂತ ಅತಿಶಯವಾಗಕೂಡದೆಂದೂ (೨) ಮೂಲ ಸಂಪತ್ತನ್ನು ಅಂಕಗಣಿತದ ರೀತಿಯಾಗಿ ಮಾತ್ರವೇ ಏರಿಸಬಹುದೆಂದೂ (೩) ಆದರೆ ಜನಸಂಖ್ಯೆಯ ಅಭಿವೃದ್ಧಿಯನ್ನು ತಡೆಯದಿದ್ದರೆ ಅದು ೨, ೪, ೮, ೧೬, ೩೨, ೬೪ ಹೀಗೆ ಜ್ಯಾಮಿತಿ ಪರಿಮಾಣದಲ್ಲಿ ಬೆಳೆಯುವುದೆಂದೂ ಘೋಷಿಸಿದನು. ಜನ ಸಂಖ್ಯೆಯನ್ನು ತಡೆಹಿಡಿಯುವ ಕೆಲವು ಸಂಗತಿಗಳಲ್ಲಿ ಬಡತನ, ಕಂಗಾಲ, ಬರಗಾಲ, ರೋಗರುಜೆಗಳಂತಹ ಪ್ರಾಕೃತಿಕ ಸನ್ನಿವೇಶಗಳೂ, ಸಂತಾನ ನಿರೋಧದಂಥ ಕೃತಕ ಸಂವಿಧಾನಗಳೂ, ಬ್ರಹ್ಮಚರ್ಯ ಅಥವಾ ತಡವಾದ ಮದುವೆಯಂಥ ನೈತಿಕ ಸನ್ನಿವೇಶಗಳೂ ಇರುವುವು. ಕೂಲಿನಿಧಿಯ ತತ್ತ್ವದಿಂದ ಕೂಲಿಕಾರರಿಗೆ ಕಡಿಮೆಕೂಲಿ ಕೊಡಬೇಕೆಂದಿದ್ದ ಬಂಡವಾಳ ಗಾರರಿಗೆ ಮಾಲ್ಥೂಸ್ ಮೀಮಾಂಸೆಯಿಂದ ಉಪಕಾರವಾಯಿತು. ಕೂಲಿ ಹೆಚ್ಚಿಸಿದರೆ ಜನಸಂಖ್ಯೆಯು ಜ್ಯಾಮಿತಿ ಪರಿಮಾಣದಲ್ಲಿ ಬೆಳೆಯುವು ದೆಂದೂ, ಹಾಗೆ ಬೆಳೆದರೆ ಸ್ವತಃ ಏವ ಕೂಲಿಯ ಧಾರಣೆ ತಗ್ಗುವುದೆಂದೂ ಬೆದರಿಕೆ ಹಾಕಲು ಅನುಕೂಲವಾಯಿತು. ಏವಂಚ, ಕೂಲಿಕಾರರು ಯಾವ ರೀತಿಯಿಂದಲೂ ತಮ್ಮ ಕೂಲಿ ಏರಿಸಿಕೊಳ್ಳಲಾರರೆಂದೂ, ಅವರ ವರಮಾನವು ಸರ್ವದಾ ಜೀವನಾಂಶದ ಮಟ್ಟದಲ್ಲೇ ಉಳಿಯುವುದು ಅನಿ ವಾರ್ಯವೆಂದೂ ಸಿದ್ಧಾಂತಿಸಲಾಯಿತು. ಹತ್ತೊಂಭತ್ತನೆಯ ಶತಮಾ ನದ ಕೂಲಿಕಾರ ಶಾಸನಗಳೂ, ಔದ್ಯಮಿಕ ಧೋರಣೆಯೂ, ಮಾಲ್ಥೂಸ್ ತತ್ವದಿಂದ ಬಹುಮಟ್ಟಿಗೆ ಪ್ರಭಾವಿತವಾದುವು.

ಆದರೆ 'ಮಾಲ್ಥೂಸ್' ತತ್ವವು ಈಗಿನ ಕಾಲಕ್ಕೆ ಅಷ್ಟು ರುಚಿಸುವು ದಿಲ್ಲ. ಮುಂಬರಿದ ದೇಶಗಳಲ್ಲಿ ಕಳೆದ ೫೦ ವರ್ಷಗಳಲ್ಲಿ ಜನನಸಂಖ್ಯೆಯು ೩೫%ನಿಂದ ೧.೫%ಗೂ, ಮರಣ ಸಂಖ್ಯೆಯು ೨೧%ನಿಂದ ೧೩%ಗೂ ಇಳಿ ದಿದ್ದು, ಒಟ್ಟು ಬದುಕುವವರ ಸಂಖ್ಯೆಯು ಅತಿರೇಕ ಬೆಳೆದುದು ಕಂಡು ಬರುವುದಿಲ್ಲ. ಆರ್ಥಿಕ ಅಭ್ಯುದಯವು ನಡೆದಹಾಗೆ ಮಾಲ್ಥೂಸ ತತ್ತ್ವವು ಹಿಂದೆ ಬೀಳಬೇಕಾಗುತ್ತದೆ. ಆದರೆ ಕೋಟಿಗಟ್ಟಲೆ ಜನಸಂಖ್ಯೆಯುಳ್ಳ ಹಿಂದುಳಿದ ದೇಶಗಳಲ್ಲಿ ಮಾಲ್ಥೂಸ್ ತತ್ವವನ್ನು ತೀರ ಅಲ್ಲಗಳೆಯುವುದು ಅಸಾಧ್ಯ. ಕೂಲಿಕಾರರ ಸಂಖ್ಯೆಯು ಅತಿಯಾಗಿರುವುದರಿಂದ ಪ್ಲೆಪೋ

ಟೆಯು ಹೆಚ್ಚಾಗಿ ಕೂಲಿಯು ಕಡಿಮೆಯಾಗಿರುತ್ತದೆ. ಕೃಷಿಯೋಗ್ಯವಾದ ಭೂಮಿಯೆಲ್ಲ ಹೆಚ್ಚಿನಪಾಲು ಕೃಷಿಗೆ ಒಳಗಾಗಿರುವುದರಿಂದ ಹೊಸ ನೆಲವನ್ನು ಸೇರಿಸಿ ಉತ್ಪಾದನೆಯು ಅಧಿಕವಾಗುವಂತಿಲ್ಲ. ಬಂಡವಾಳದ ಕೊರತೆಯಿರುವುದರಿಂದ ಇನ್ವೆಸ್ಟ್‌ಮೆಂಟ್ ಉದ್ಯಮ ಹೆಚ್ಚಾಗುವಂತಿಲ್ಲ. ಮೂಲ ಸಂಪತ್ತು ಬೆಳೆದರೂ ಕೂಡ ಗಣಿತದ ದಾಮಾಶಯದಲ್ಲಿಯೇ ಬೆಳೆಯಬಲ್ಲುದು. ಜನಸಂಖ್ಯೆಯು ಮಾತ್ರ ಅದಕ್ಕಿಂತ ಹೆಚ್ಚಿನ ದಾಮಾಶಯದಲ್ಲಿ ಬೆಳೆದು ಬರುತ್ತದೆ ಎರಡನೆಯದಾಗಿ, ಮುಂಬರಿದ ದೇಶಗಳಲ್ಲಿ ಔದ್ಯೋಗೀಕರಣದ ದೆಸೆಯಿಂದಾಗಿ ಮೂಲಸಂಪತ್ತು ಜನಸಂಖ್ಯೆಯನ್ನು ಮೀರುವ ದಾಮಾಶಯದಲ್ಲಿ ಬೆಳೆದು ಬಂದಿದೆ. ಮೂರನೆಯದಾಗಿ, ಜನಸಂಖ್ಯೆಯು ಬೆಳೆದಂತೆ ರಾಷ್ಟ್ರದ ಸಾರ್ವತ್ರಿಕ ಆರೋಗ್ಯವೂ ಉತ್ತಮವಾಗಿದೆ.

**ಒಪ್ಟಿಮುಮ್ ಜನಸಂಖ್ಯೆ:**

ಮಾಲ್ಥೂಸ್ ತತ್ವವನ್ನು ದಾಟಿದರೆ ಮುಂದಕ್ಕೆ ಕಾಣುವುದು 'ಒಪ್ಟಿಮುಮ್' ತತ್ವ. ದೇಶದ ಎಲ್ಲಾ ಉದ್ಯಮಗಳಲ್ಲೂ ಪರಮಾವಧಿ ಫಲಿತಾಂಶವು ಬರುವ ಸನ್ನಿವೇಶ ಉಂಟಾಯಿತೆಂದು ಭಾವಿಸುವ. ಆಗ ಇರುವ ಜನಸಂಖ್ಯೆಯು ಒಪ್ಟಿಮುಮ್ ಜನಸಂಖ್ಯೆ. ಪರಮಾವಧಿ ಫಲಿತಾಂಶವು ವರಿಷ್ಠ ಬಿಂದುವಿನಲ್ಲಿ ಇಲ್ಲದಿರುವಾಗ 'ಕಡಿಮೆ ಜನಸಂಖ್ಯೆಯೂ' ಅದಕ್ಕಿಂತ ಮೇಲಿದ್ದರೆ 'ಅತಿಶಯ ಜನಸಂಖ್ಯೆಯೂ' ಇರುವುವು. ಈ ಒಪ್ಟಿಮುಮ್ ಸ್ಥಿರವಾದ ಒಂದು ಮಿತಿಯಲ್ಲವೆಂದೂ, ಅದು ಯಾವಾಗಲೂ ಚಲಿಸುವುದೆಂದೂ ನಾವು ತಿಳಿದಿರಬೇಕು. ಜನಸಂಖ್ಯೆಯನ್ನು ಅಳೆಯಲು ನ್ಯಾಯವೂ, ಸರ್ವ ಸಮ್ಮತವೂ ಆದ ಮಾನದಂಡವು ಇಲ್ಲದಿರುವುದರಿಂದಲೂ, ಒಪ್ಟಿಮುಮ್ ಇಡೀ ಪ್ರಪಂಚಕ್ಕೇ ಅನ್ವಯಿಸುವುದರಿಂದಲೂ ಈ ಮೀಮಾಂಸೆಯಿಂದ ಹೆಚ್ಚು ಉಪಯೋಗವಿಲ್ಲ.

**ನಮ್ಮ ದೇಶದ ಜನಸಂಖ್ಯೆ:**

ಚೀನವೊಂದನ್ನು ಬಿಟ್ಟರೆ, ಅವಿಭಕ್ತ ಇಂಡಿಯವು ಪ್ರಪಂಚದ ಅತ್ಯಂತ ಜನಸಾಂದ್ರ ದೇಶವಾಗಿದೆ. ಕಳೆದ ನೂರು ವರ್ಷಗಳಲ್ಲಿ ಇಂಡಿ

ಯುದ ಜನಸಂಖ್ಯೆ ೨೦% ರಷ್ಟು ಏರಿದರೆ ಇದರಲ್ಲಿ ಅರ್ಧಕ್ಕಿಂತ ಹೆಚ್ಚು ಹೊಸ ಪ್ರದೇಶಗಳನ್ನು ಸೇರಿಸಿಕೊಂಡುದರಿಂದ ಬಂದುದಾಗಿದೆ. ಆದುದರಿಂದ ಒಟ್ಟು ಜನಸಂಖ್ಯೆಯು ನಲ್ವತ್ತುಕೋಟಿಯಷ್ಟು ಕಂಡರೂ, ಜನಸಂಖ್ಯೆಯು ಹೆಚ್ಚಿದ ದಾಮಾಶಯವು ಯುರೋಪಿಗಿಂತಲೂ ಕಡಿಮೆ ಅಲ್ಲಿ ೬೦%, ನಮ್ಮಲ್ಲಿ ೩೦%. ಭಾರತದ ಜನಸಂಖ್ಯೆಯ ಸಮಸ್ಯೆಯು ಬರಿಯ ಸಂಖ್ಯೆಯ ಸಮಸ್ಯೆಯಲ್ಲ. ಬರಿಯ ಆರ್ಥಿಕ ಸಮಸ್ಯೆಯೂ ಅಲ್ಲ ಅದು ಅನೇಕ ಜಟಿಲವಾದ ಸಾಮಾಜಿಕ ಹಾಗೂ ಸಾಂಪ್ರದಾಯಿಕ ಸಮಸ್ಯೆಗಳ ಚಕ್ರವ್ಯೂಹ. ನಮ್ಮ ಜನಸಂಖ್ಯೆಯ ಕುರಿತಾದ ಕೆಲವು ಪ್ರಶ್ನೆಗಳು ಯಾವುವೆಂದರೆ (೧) ಜನನ ಸಂಖ್ಯೆಯು ಕಡಿಮೆಯಾಗಿದ್ದು ಮರಣಸಂಖ್ಯೆಯು ಅತಿರೇಕವಾಗಿರುವುದು (೨) ಮಗು ಜನಿಸುವಾಗ ಮಗುವೂ, ತಾಯಿಯೂ ಸಾವಿಗೆ ತುತ್ತಾಗುವ ಸಾಮಾನ್ಯ ನೋಟ. (೩) ನಿವಾರ್ಯ ರೋಗರುಜಿನಗಳಿಂದ ಜನ ಸಾಯುವುದು (೪) ಆಯುಷ್ಯ ನಿರೀಕ್ಷೆಯು ತೀರ ಕಡಿಮೆಯಾಗಿರುವುದು ಭಾರತೀಯನ ಸರಾಸರಿ ಆಯುಷ್ಯ ಕೇವಲ ಇಪ್ಪತ್ತಾರು ವರ್ಷ. (೫) ಗಂಡಸರಿಗೂ ಹೆಂಗಸರಿಗೂ ೧:೧ ದಾಮಾಶಯ ಇಲ್ಲದೆ ಕಡಿಮೆಯಾಗಿರುವುದು. (೬) ವೃತ್ತಿಯ ಸಮಸ್ಯೆಗಳು.

ಈ ಸಮಸ್ಯೆಗಳು ಸ್ವಲ್ಪಮಟ್ಟಿಗಾದರೂ, ಪರಿಹಾರವಾಗಬೇಕಾದರ ಆರ್ಥಿಕ ರಂಗದಲ್ಲಿ ಬದಲಾವಣೆಗಳಾಗಬೇಕು. ಪ್ರತಿಯೊಬ್ಬ ಕೃಷಿಕನಿಗೂ, ಐದು ಎಕರೆ ಭೂಮಿ ಸಿಕ್ಕಿದರೆ ಅವನ ಕುಟುಂಬದ ಕನಿಷ್ಠಾವಧಿ ಬೇಡಿಕೆಗಳನ್ನೂ, 'ಹಿತಗಳನ್ನೂ' ಪೂರೈಸಲು ಸಾಧ್ಯವಾದೀತು ಈಗಿರುವಂತ ಹರಕು ಮುರುಕು ಗದ್ದೆಗಳನ್ನು ಆರಿಸಿಕೊಂಡರೆ, ದೇಶದಲ್ಲಿ ೩೦% ರೈತ ಕುಟುಂಬಗಳು ಶಾಶ್ವತ ದಾರಿದ್ರ್ಯದಲ್ಲಿಯೂ, ಸುಮಾರು ೫೦% ರೈತರು ಅರ್ಧವರ್ಷ ದಾರಿದ್ರ್ಯದಲ್ಲಿಯೂ, ಕಾಲಹರಣಮಾಡದೆ ಇನ್ನೇನು ಮಾಡಿಯಾರು?

# ಹನ್ನೊಂದನೆಯ ಅಧ್ಯಾಯ

# ಬಂಡವಾಳ

## ಬಂಡವಾಳ ಎಂದರೇನು?

ಬಂಡವಾಳಕ್ಕೆ ಪ್ರಪಂಚದಲ್ಲಿ ಎಷ್ಟು ಜನ ಅರ್ಥಶಾಸ್ತ್ರಿಗಳಿದ್ದಾರೋ ಅಷ್ಟೇ ಅರ್ಥಗಳಿವೆ. ನಿರ್ದಿಷ್ಟವಾದ ಒಂದು ಕಾಲಾವಧಿಯಲ್ಲಿ ಇರುವ ಸಂಗ್ರಹ ಅಥವಾ ಮೊತ್ತವೇ ಬಂಡವಾಳ, ಕಾಲಕಾಲಕ್ಕೆ ನಮಗೆ ದೊರೆಯುವುದು ವರಮಾನ, ಎಂದು ಎಲ್ಲರೂ ನಂಬುವರು. ಒಟ್ಟಾರೆ ಮೇಲೆ ವ್ಯಕ್ತಿಯ ಅಥವಾ ದೇಶದ ಸಂಪತ್ತನ್ನು ವೃದ್ಧಿಗೊಳಿಸಲು ಶೇಖರಿಸಿಟ್ಟಿರುವ ಸಂಪತ್ತಿಗೆ ಬಂಡವಾಳ ಎಂದು ಕರೆಯಬಹುದು. ತನ್ನ ಬೇಡಿಕೆಯ ಸರಕುಗಳನ್ನು ಒಬ್ಬ ಮನುಷ್ಯ ಅಥವಾ ಒಂದು ಸಮಾಜವು ಪರಿಮಿತ ಸೀಮೆಯೊಳಗೆ ತಾವೇ ಉತ್ಪಾದಿಸಿಕೊಳ್ಳುತ್ತಿದ್ದಾಗ ಬಂಡವಾಳದ ಆವಶ್ಯಕತೆ ಹೆಚ್ಚಾಗಿರಲಿಲ್ಲ. ಮನುಷ್ಯರು ನೇರವಾಗಿ ಶ್ರಮಿಸಿ ಸರಕು ಸಿದ್ಧಗೊಳಿಸುವಾಗ ಬಂಡವಾಳ ಬೇಡ. ಉತ್ಪಾದನೆಯು ಯಾವಾಗ ದೀರ್ಘಕಾಲವನ್ನುಪಯೋಗಿಸಿಕೊಂಡು ಪರೋಕ್ಷಮಾರ್ಗದಲ್ಲಿ ನಡೆಯಲು ಆರಂಭವಾಯಿತೋ ಅಂದೇ ಉಪಕರಣಗಳು, ಯಂತ್ರಗಳು, ಧನಸಂಗ್ರಹಗಳು–ಬಂಡವಾಳ–ಆವಶ್ಯಕವಾದುವು. ವ್ಯಕ್ತಿಯ ಬಂಡವಾಳವು ಏನೆಂಬುದನ್ನು ಈ ಕೆಳಗಿನ ಬ್ಯಾಲೆನ್ಸ್ ಶೀಟಿನಿಂದ ತಿಳಿಯಬಹುದು

| (ಅ) **ಸೊತ್ತುಗಳು** | ರೂಪಾಯಿ | (ಈ) **ದೇಣಿ** | ರೂಪಾಯಿ |
|---|---|---|---|
| ಮನೆ ಮತ್ತು ಆಸ್ತಿ. | ೧೯,೦೦೦ | ಅಡವು | ೨,೦೦೦ |
| ಮೋಟಾರು ಕಾರು: | ೯,೦೦೦ | ಚುಕ್ತಾಮಾಡುವ ಲೆಕ್ಕ. | ೭೫೦ |
| ಸೈಕಲು. | ೩೦೦ | ಕೊಡುವ ನೋಟು. | ೩೫೦ |
| ಮನೆಯೊಳಗಿನ ಚರಸೊತ್ತು: | ೪,೫೦೦ | ತೆರಿಗೆ. | ೫೦೦ |

**(ಅ) ಹಕ್ಕು ಪತ್ರಗಳು**

| | | | |
|---|---|---|---|
| ಬಾಂಡುಗಳು: | ೫,೦೦೦ | (ಉ) ನಿವ್ವಳ ಮೌಲ್ಯ: | ೩೫,೪೦೦ |
| ನೋಟುಗಳು: | ೧,೦೦೦ | | |
| ಬರಬೇಕಾದ ಹಣ; | ೭೦೦ | | |
| **(ಇ) ನಗದು** | ೨೮೦ | | |
| | ೪೯,೯೦೦ | | ೪೯,೯೦೦ |

ಒಂದು ರಾಷ್ಟ್ರದ ಬಂಡವಾಳವೆಂದರೆ ಕಾರ್ಖಾನೆ, ರೈಲು, ಹಡಗು. ಗನಿಗಳು, ಕಚ್ಚಾಮಾಲು, ವ್ಯಾಪಾರಿಗಳ ಹತ್ತಿರ ಇರುವ ಅನುಭೋಗಿ ಸರಕಿನ ಸಂಗ್ರಹ, ವಿದೇಶೀಯ ಹಣದ ಸಂಗ್ರಹ--ಮೊದಲಾದ ಮನುಷ್ಯ ನಿರ್ಮಿತವಾದಂತಹ ಉತ್ಪಾದನೆಯ ಉಪಾದಾನಗಳು. ಭೂಮಿಯನ್ನೂ ಇವುಗಳ ಜತೆಗೆ ಸೇರಿಸಬಹುದು.

**ಬಂಡವಾಳದ ರೂಪಗಳು:**

**ವ್ಯಕ್ತಿಪರ ಮತ್ತು ಸಾಮಾಜಿಕ ಬಂಡವಾಳ:** ಉತ್ಪಾದನೆಯ ಕಾರ್ಯದಲ್ಲಿ ಉಪಾದಾನವಾಗಿ ಕೆಲಸಮಾಡುವ ಬಂಡವಾಳವು ಸಾಮಾಜಿಕ ಬಂಡವಾಳ; ವ್ಯಕ್ತಿಗೆ ವರಮಾನವನ್ನು ತರುವ ಸಂಪತ್ತು ವ್ಯಕ್ತಿಪರ ಬಂಡವಾಳ. ನಾನು ಒಬ್ಬನಿಗೆ ಸಾಲಕೊಟ್ಟ ನೂರು ರೂಪಾಯಿಗಳನ್ನು ಅವನು ಹೊಳೆಗೆ ಚೆಲ್ಲಿ ವರ್ಷ ವರ್ಷವೂ ನನಗೆ ಅದರ ಸಲೆಬಡ್ಡಿ ಕೊಟ್ಟರೆ ನೂರು ರೂಪಾಯಿಯು ನನ್ನ ದೃಷ್ಟಿಯಲ್ಲಿ ಬಂಡವಾಳವಾಯಿತು.

**ಸ್ಥಿರ ಮತ್ತು ಚರ ಬಂಡವಾಳ:** ಬಾಳಿಕೆಯಾಗಿ ನಿಂತಿದ್ದು ಹಲವುಸಲ ಉಪಯೋಗಕ್ಕೆ ಬೀಳುವುವು– ಉದಾ: ಹಡಗು, ಆಫೀಸು, ಪಿಕ್ಕಾಸು, ಯಂತ್ರಗಳು. ಒಂದೇ ಉಪಯೋಗದಲ್ಲಿ ತಮ್ಮ ಕರ್ತವ್ಯ ಮುಗಿಸುವುವು— ಮೊಳೆ, ಬೀಜ,ತುಪಾಕಿ. ಶಾಯಿ ಚರಬಂಡವಾಳ, ಪೆನ್ನು ಸ್ಥಿರಬಂಡವಾಳ.

**ಹೂತುಹೋದ ಮತ್ತು ತೇಲುವ ಬಂಡವಾಳ:** ಆರ್ಮ್‌ಸ್ಟರ್ ಡಾಮಿನ ವಜ್ರದ ಯಂತ್ರವು ಹೂತುಹೋದ ಬಂಡವಾಳ; ಏಕೆಂದರೆ ಅದನ್ನು ವಿಶಿಷ್ಟ ಸರಕುತಯಾರಿಸಲು ಮಾತ್ರ ಉಪಯೋಗಿಸಬಹುದು. ಕಲ್ಲಿದ್ದಲು, ರುಪಾಯಿ ಮುಂತಾದ ಹಲವು ಉಪಯೋಗಕ್ಕೆ ಬರುವಂಥವು ತೇಲುವ ಬಂಡವಾಳ.

**ಸ್ವತ್ತಿನ ಮತ್ತು ವ್ಯಕ್ತಿಗತ ಬಂಡವಾಳ:** ಹರಿಕಥೆಯವರ ತಾಳ ಮೊದಲಿನ ಜಾತಿಗೂ, ಅವರ ಕಂಠಧ್ವನಿ ಎರಡನೆಯ ಜಾತಿಗೂ ಸೇರುವುವು

**ಎರಡು ಅಭಿಪ್ರಾಯಗಳು:**

(೧) ಬಂಡವಾಳ ಎಂದರೆ ಉತ್ಪಾದನೆಯ ಉಪಕರಣ ಎಂಬುದನ್ನು ಬಂಡವಾಳಗಾರ ಸಮಾಜವೂ ಒಪ್ಪುವುದು, ಸಾಮ್ಯವಾದಿ ಸಮಾಜವೂ ಒಪ್ಪುವುದು. ರಶಿಯಾದಲ್ಲಿಯೂ ಯಂತ್ರ, ಸ್ಥಿರ ಬಂಡವಾಳಗಳು ಇಲ್ಲದೆ ಕೆಲಸ ನಡೆದೀತೆ?

(೨) ಪ್ರತ್ಯಕ್ಷವಾಗಿ ಪರಿಶ್ರಮಮಾಡದೆಯೂ ವರಮಾನಕ್ಕೆ ಮೂಲವಾಗುವುದು. ಪಿತ್ರಾರ್ಜಿತವಾದ ೧೦,೦೦೦ ಮುಡಿ ಅಕ್ಕಿಯ ಆಸ್ತಿಯಿಂದ ಅತ್ಯಂತ ಸೋಮಾರಿಗೂ ವರ್ಷ ವರ್ಷವೂ ೧೦,೦೦೦ ಮುಡಿ ಅಕ್ಕಿ ಬಂದರೆ ಅದು ತಪ್ಪು ಎಂದು ಸಾಮ್ಯವಾದಿಗಳ ಅಭಿಪ್ರಾಯ. ರಾಷ್ಟ್ರದೊಳಗಿನ ಎಲ್ಲಾ ಬಂಡವಾಳವೂ ನಮ್ಮ ಪೂರ್ವಿಕರ ಪರಿಶ್ರಮದ ಫಲವಾದ್ದರಿಂದ ಇಡೀ ಸಮಾಜಕ್ಕೂ, ರಾಷ್ಟ್ರಕ್ಕೂ ಅದರಲ್ಲಿ ಸಮಾನವಾದ ಪಾಲು ದೊರೆಯತಕ್ಕದು, ಹಾಗೆ ದೊರೆಯಲು ಅನುಕೂಲವಾಗುವಂತೆ ರಾಷ್ಟ್ರವೇ ಬಂಡವಾಳದ ಸ್ವಾಮ್ಯ ವಹಿಸಬೇಕು—ಎಂಬುದು ಸಮೂಹವಾದಿಗಳ ಅಭಿಪ್ರಾಯ. ಸ್ವತಂತ್ರ ಸಮಾಜದ ಪುರಸ್ಕರ್ತರು ಬಂಡವಾಳದಿಂದ ವ್ಯಕ್ತಿಗೆ ವರಮಾನವು (ಬಡ್ಡಿ) ಸಿಗದೆಹೋದಲ್ಲಿ ಉಳಿತಾಯಕ್ಕೆ ಪ್ರೋತ್ಸಾಹವಿಲ್ಲದೆ ವಾಣಿಜ್ಯ ಉದ್ದಿಮೆಗಳಿಗೆ ಬೇಕಾದಷ್ಟು ಬಂಡವಾಳವು ಹುಟ್ಟಲಾರದು ಎನ್ನುವರು.

**ದ್ರಾವಿಡ ಪ್ರಾಣಾಯಾಮ:**

ನೇರವಾಗಿ ಮೂಗು ಮುಟ್ಟಕೊಳ್ಳುವುದರ ಬದಲು, ಕೈಯನ್ನು ತಲೆಗೊಂದು ಸುತ್ತು ತಂದು ಮೂಗು ಮುಟ್ಟಕೊಳ್ಳುವುದಕ್ಕೆ ದ್ರಾವಿಡ ಪ್ರಾಣಾಯಾಮ ಎಂಬ ನಗೆಮಾತು ನಮ್ಮಲ್ಲಿ ರೂಢಿಯಲ್ಲಿದೆ. ನೇರವಾಗಿ ಮಾಡುವುದನ್ನು ಬಿಟ್ಟು ಸುತ್ತುವುದೇಕೆ? ಎಂಬುದು ಇದರರ್ಥ. ಮೂಲ ಅವಯವಗಳಾಗಿರತಕ್ಕ ಜಮೀನು, ಪರಿಶ್ರಮ ಮುಂತಾದುವುಗಳನ್ನು

ನೇರವಾಗಿ ಅನುಭೋಗಿ ಸರಕುಗಳನ್ನೇ ಮಾಡಲು ಹೆಚ್ಚಬಹುದು. ಇದು ಪ್ರತ್ಯಕ್ಷ ಉತ್ಪಾದನೆಯಾಯಿತು. ನಮಗೆ ಯಾವ ಸರಕು ತಯಾರಾಗ ಬೇಕಾಗಿದೆಯೋ ಅದನ್ನು ತಯಾರಿಸಲು ಸುಲಭವಾಗುವಂತೆ ಬೇರೆ ಕೆಲವು ಮಧ್ಯಾಂತರದ ಸರಕುಗಳನ್ನು ಮೊದಲು ತಯಾರಿಸಿಕೊಂಡರೆ ಆಗ ಸುತ್ತು ಪರಿಯ ಅಥವಾ ಪರೋಕ್ಷವಾದ ಉತ್ಪಾದನೆ ಜರಗಿದಂತಾಗುವುದು

ಬಂಡವಾಳವನ್ನು ಹೇಗೆ ಸಂಗ್ರಹಿಸಬಹುದು ಎಂಬುದನ್ನು ಪರಿಶೀಲಿ ಸಲು ಒಂದು ಬೆಸ್ತರ ಸಮಾಜವನ್ನು ಉದಾಹರಣೆಯಾಗಿ ತೆಗೆದುಕೊಳ್ಳೋ ಣ. ದೋಣಿಯಿದ್ದರೆ ಗಾಳಹಾಕುವುಕ್ಕಿಂತ ಜಾಸ್ತಿ ಮೀನು ಬರುವುದೆಂಬ ಪರಿಜ್ಞಾನ ಬೆಸ್ತರಿಗೆ ಇರುವ ಪಕ್ಷಕ್ಕೆ ಅವರು ದೋಣಿಯನ್ನು (ಅಂದರೆ ಬಂ ಡವಾಳವನ್ನು) ಹೇಗೆ ದೊರಕಿಸಿಕೊಳ್ಳಬಹುದು? ಒಂದೋ ಬಟ್ಟೆ, ಹಿಟ್ಟು ಎಣ್ಣೆ ಮೊದಲಾದ ಅನುಭೋಗಿ ಸರಕುಗಳನ್ನು ಕೂಡ ಹಾಕುತ್ತಾ ಹಾಕು ತ್ತಾ ಒಂದು ತಿಂಗಳಿಗೆ ಬೇಕಾದಷ್ಟು ಪೂರೈಕೆಯಾದೊಡನೆ ಆ ಸರಕುಗಳ ಉತ್ಪಾದನೆಯ ಕಾರ್ಯವನ್ನು ತೊರೆದು. ಮತ್ತಿನ ಒಂದು ತಿಂಗಳು ದೋ ಣಿಯ ಕೆಲಸ ಮಾಡಬಹುದು; ಅಥವಾ ಪ್ರತಿದಿನವೂ ಕೆಲಸ ಮಾಡುವ ಹತ್ತು ತಾಸಿನಲ್ಲಿ ಒಂದು ತಾಸನ್ನು ದೋಣಿ ನಿರ್ಮಿಸಲು ಉಪಯೋಗಿಸ ಬಹುದು; ಅಥವಾ ಅವರಲ್ಲೇ ಹತ್ತು ಜನರಿಗೆ ಇಡೀ ವರ್ಷವೂ ದೋಣಿಯ ಕೆಲಸ ಮಾಡುವುದಕ್ಕೆ ಹೇಳಿ ಅಂಥವರಿಗೆ ಉಣ್ಣಲು ಅನುಭೋಗಿ ಸರಕು ಗಳನ್ನು ಉಳಿದವರ ಉತ್ಪಾದನೆಯಿಂದ ಪೂರೈಸಬಹುದು. ಈ ಮೂರು ದಾರಿಗಳಲ್ಲಿ ಯಾವುದನ್ನು ಹಿಡಿದರೂ ಸಮಾಜದ ಪರಿಶ್ರಮದಲ್ಲಿ ಒಂದಂಶವು ಬಂಡವಾಳಕ್ಕೆ ವಿನಿಯೋಗಿಸಲಾಗುವುದರಿಂದ ಮುಂದಕ್ಕೆ ಅಧಿಕವಾದರೂ ಪ್ರಕೃತದಲ್ಲಿ ಅನುಭೋಗಿ ಸರಕಿನ ಉತ್ಪಾದನೆಯ ಪರಿಮಾಣವು ಕಡಿಮೆ ಯಾಗುವುದು ಭವಿಷ್ಯದಲ್ಲಿ ಸಿಗುವ ಹೆಚ್ಚಿನ ಮೀನು ದೋಣಿ ಕಟ್ಟಲು ಹೂಡಿದ ಪರಿಶ್ರಮಕ್ಕೆ ದೊರೆತ ಪ್ರತಿಫಲ. ಆದರೆ ಈ ಪ್ರತಿಫಲವು ಬರಲು ಸ್ವಲ್ಪ ಸಮಯ ಕಳೆಯ ಬೇಕು. ಬಂಡವಾಳವನ್ನು ರಚಿಸಲು ಸಮಯ ತಗಲುವುದರಿಂದಲೇ (ಮನೆ ಕಟ್ಟಲು) ಬಂಡವಾಳದ ಸೇವೆಯು ತುಂಬಾ ಬಾಳಿಕೆ ಬರುವುದು. ದೋಣಿ ಇದ್ದಷ್ಟು ದಿನ ಹೆಚ್ಚು ಮೀನು ಸಿಗುವು ದಿಲ್ಲವೆ?

## ಬಂಡವಾಳಯುತ ಉತ್ಪಾದನೆಯ ಗುಟ್ಟೇನು?

ಕಾಲಾವಧಿಯು ತಗಲುವ ಸುತ್ತುಪರಿ ಅಥವಾ ಪರೋಕ್ಷ ಉತ್ಪಾದನೆಯೇ ಬಂಡವಾಳಗಾರ ಉತ್ಪಾದನೆಯ ಒಳಗುಟ್ಟು. ಪರೋಕ್ಷ ಉತ್ಪಾದನೆ ಎಂದರ ೧. ಅವಯುವಗಳನ್ನು ಒದಗಿಸಿದ ಸಮಯಕ್ಕೂ, ಪ್ರತಿಫಲವು ಹೊರಬೀಳುವ ಸಮಯಕ್ಕೂ ನಡವೆ ಬಂದು ಕಾಲಾಂತರವು ಕಳೆದು ಹೋಗಬೇಕು. ೨ ಇಂಥ ಪರೋಕ್ಷ ಕ್ರಮಗಳನ್ನು ಉಪಯೋಗಿಸಿದ್ದರಿಂದ ಉತ್ಪಾದನೆಯು ಹೆಚ್ಚಾಗುವುದು, ಹೊಸ ಹೊಸ ಸರಕುಗಳು ಸೃಷ್ಟಿಯಾಗುವುವು ೩ ಮಧ್ಯಾಂತರದ ಉತ್ಪತ್ತಿಗಳನ್ನು ತಯಾರಿಸುವವರಿಗೆ ಬೇಕಾಗುವ ಅನುಭೋಗಿ ಸರಕುಗಳನ್ನು ಬೇರೆ ಕಡೆಯಿಂದ ಒದಗಿಸುವ ಸೌಕರ್ಯವನ್ನು ಏರ್ಪಡಿಸಬೇಕು.

ವಾಸ್ತವಿಕ ಜಗತ್ತಿನಲ್ಲಿ ಉತ್ಪಾದನೆಯು ಬಂಡವಾಳದ ಮೂಲಕ ನಡೆಯಬೇಕೆ? ಬಂಡವಾಳ ಇಲ್ಲದೆ ನಡೆಯಬೇಕೆ? ಎಂಬ ಪ್ರಶ್ನೆ ನಿಜವಾಗಿಯೂ ಇಲ್ಲ ನಾವು ಹುಟ್ಟುವುದಕ್ಕೆ ಮೊದಲೇ ದೇಶದಲ್ಲಿ ಬಂಡವಾಳ ಇತ್ತು. ಆದುದರಿಂದ ನಮ್ಮ ಮುಂದಿರುವ ಪ್ರಶ್ನೆ. ಕಡಿಮೆ ಬಂಡವಾಳ ಉಪಯೋಗಿಸಿದರೆ ಸಾಕೆ? ಹೆಚ್ಚು ಬಂಡವಾಳ ಬೇಕೆ? ಎಂಬುದು ಮಾತ್ರ. ಇಂದು ಭಾರತದಲ್ಲಿ ಆಹಾರ ಧಾನ್ಯ ಕಡಿಮೆಯಾಗಿದೆ. ಇದ್ದ ಬಂಡವಾಳವನ್ನು ಈ ವರ್ಷವೂ—ಬಹುಶಃ ಇನ್ನು ಹತ್ತು ವರ್ಷಗಳ ವರೆಗೂ-ಪರದೇಶದ ಆಹಾರ ಧಾನ್ಯವನ್ನು ತರಿಸಲು ವಿನಿಯೋಗಿಸೋಣವೋ? ಅಥವಾ ನಮ್ಮ ಆಹಾರದ ಉತ್ಪಾದನೆಯನ್ನು ಮುಂದಿನ ಕಾಲವೆಲ್ಲ ವರ್ಧಿಸುವ ದಾಮೋದರ ಕೋಸೀ ಯೋಜನೆಗಳಂಥವನ್ನು ಕೈಕೊಳ್ಳೋಣವೋ? ಎಂಬುದು ನಮ್ಮಿದಿರು ಕಾಣುವ ಕವಲುದಾರಿ. ದಾಮೋದರ ಯೋಜನೆಯಿಂದ ಹೆಚ್ಚು ಜಮೀನು ನೀರಾವರಿಯಾಗಿ ಹೆಚ್ಚು ಧಾನ್ಯ ಉತ್ಪಾದನೆಯಾಗಲು ಇನ್ನು ಐದು ವರ್ಷಕಾಲ ಇದೆಯಲ್ಲವೆ? ಆತನಕ ರೇಶನ್ ಉಂಡು ನರಳುವುದು ಹೇಗೆ? ಎಂದು ಉಭಯ ಸಂಕಟವನ್ನು ಸೂಚಿಸುವವರಿಗೆ ನಮ್ಮ ಉತ್ತರವಿಷ್ಟೆ. ದಾರಿ ಕವಲಾಗಿದೆ. ಒಂದು ನೇರವಾಗಿ ಗುರಿಮುಟ್ಟುತ್ತದೆ. ಆದರೆ

ಅದು ಮುಗಿದ ಮೇಲೆ ಬೋಳು ಬಯಲಿನ ದೃಶ್ಯ ಮಾತ್ರ ನಿಮಗೆ ಕಂಡೀತು ಎರಡನೆಯ ದಾರಿ ನಡೆಯಲು ಕಷ್ಟ, ಕಾಲ ಹೆಚ್ಚುಬೇಕು; ಪರಿಶ್ರಮ, ಸಹನೆ ಹೆಚ್ಚಿರಬೇಕು, ನಿಜ ಆದರೆ ಗುರಿಮುಟ್ಟಿದ ಮೇಲೆ ನಿಮಗೂ ನಿಮ್ಮ ಮುಂದಿನ ಜನಾಂಗಕ್ಕೂ ಹಚ್ಚ ಹಸುರಾದ ಉಜ್ಜ್ವಲ ಭವಿಷ್ಯ ಕಾದಿರುವುದು ಆರಿಸಿಕೊಳ್ಳಿ ಜಾಣರಾದವರೆಲ್ಲ ಬಂಡವಾಳ ಯುತ ಉತ್ಪಾದನೆಯನ್ನೇ ಆರಿಸಿಕೊಂಡಿದ್ದಾರೆ. ನಾವೂ ಹಾಗೆಯೇ ಮಾಡಬೇಕು.

**ಬಂಡವಾಳದ ರಕ್ಷಣೆ: ಹಾಗೇ ಇದ್ದುದು ಹಾಗೇ ಇರಲಿ:**

ಮನೆಯು ಬಾಳಿಕೆ ಬರುವ ಸ್ಥಿರಸೊತ್ತು. ಆದರೆ ವರ್ಷವರ್ಷವೂ ಒಂದುಕಡೆ ಮಾಡು ಸೋರುವುದೂ, ಗೋಡೆಗೆ ಸುಣ್ಣ ಬಳಿಯುವುದೂ, ಹೆಗ್ಗಣ ಕೊರೆದಲ್ಲಿ ಸಿಮೆಂಟು ಹಾಕುವುದೂ, ಹತ್ತು ವರ್ಷಕ್ಕೊಮ್ಮೆ ನೆಲಕ್ಕೆ ಗಾರೆ ಹಾಕುವುದೂ ನಡೆಯಲೇ ಬೇಕು. ಮನೆಯು ಜೀರ್ಣವಾಗುತ್ತಾ ಬಂದ ಹಾಗೆ ಅದರ ರಕ್ಷಣೆಯ ಕೆಲಸವೂ ನಡೆಯಬೇಕು. ಯಂತ್ರವು ಜೀರ್ಣವಾದಾಗ ಅದಕ್ಕೆ ತಗಲುವ ವೆಚ್ಚವನ್ನು 'ಡಿಪ್ರಿಶಿಯೇಷನ್' ಎನ್ನು ವರು. ಇಂಥ ಇಳಿಮಾನದ ಪ್ರಶ್ನೆ ಬಾಳಿಕೆ ಬರುವ ಬಂಡವಾಳಕ್ಕೆ ಇದ್ದೇ ಇದೆ. ದೋಣಿಗೆ ತೇಪೆ ಹಾಕಬೇಕು. ದೋಣಿ ಪೂರ್ತಿ ಹಾಳಾದ ಮೇಲೆ ಹೊಸ ದೋಣಿಯನ್ನು ಕಟ್ಟುವ ಯತ್ನವು ಎಡೆಬಿಡದೆ ಸಾಗುತ್ತಿರ ಬೇಕು. ಯುದ್ಧಕಾಲದಲ್ಲಿ ಅನುಭೋಗಿ ಸರಕುಗಳಿಗೆ ಹೆಚ್ಚು ಪ್ರಾಧಾನ್ಯ ಬರುವುದರಿಂದಲೂ, ಯಂತ್ರಗಳಿಗೆ ಕೆಲಸವು ಹೆಚ್ಚಾಗುವುರಿಂದಲೂ ಹೊಸ ಯಂತ್ರಗಳು ಸೃಷ್ಟಿಯಾಗುವುದಿಲ್ಲವಾದ್ದರಿಂದಲೂ, ಯುದ್ಧ ಮುಗಿದ ಮೇಲೆ ಜನತೆಯ ಜೀವನದ ಮಟ್ಟವು ಇಳಿಯುವುದು. ಬಂಡವಾಳದ ಸರಕುಗಳ ರಕ್ಷಣೆಯ ಸಮಯ ಪ್ರಕೃತ ಅನುಭೋಗವು ಕಡಿಮೆಯಾಗು ವುದು, ಉಳಿತಾಯವು ಹೆಚ್ಚುವುದು. ಭವಿಷ್ಯದಲ್ಲಿ ವರಮಾನವು ದೊರೆಯ ಲನುಕೂಲವಾಗುವಂತೆ ಉಳಿತಾಯವನ್ನು ಇನ್ವೆಸ್ಟ್ ಮಾಡುವ(ಹೂಡುವ) ಕೆಲಸವೂ ಸಮಾನ ಭರದಿಂದ ಸಾಗುವುದು ಅನಿವಾರ್ಯವಾಗಿದೆ. ಉಳಿ ತಾಯವೂ ಬೇಕು, ಇನ್ವೆಸ್ಟ್‌ಮೆಂಟೂ ಬೇಕು.

**ಬಂಡವಾಳದ ಚಲಶಕ್ತಿ ಮೀಮಾಂಸೆ:**

ಅತ್ಯಾಧುನಿಕವಾದ ಈ ಮೀಮಾಂಸೆಯ ದರ್ಶನ ಮಾಡಿಸಿದವರಲ್ಲಿ ಪ್ರೊ. ಹಯೆಕ್ ಎಂಬವರು ಮುಖ್ಯ ಯಂತ್ರಗಳು ಬಾಳಿಕೆಯುಳ್ಳವೆಂದು ನಮಗೆ ಕಂಡರೂ ಅವು ಶಾಶ್ವತವಾದುವುಗಳಲ್ಲ. ಅವುಗಳ ಪುನರ್ ನಿರ್ಮಾಣದ ಪ್ರಶ್ನೆ ಬಂಡವಾಳದ ಅತಿ ಮಹತ್ತ್ವದ ಪ್ರಶ್ನೆ ಎಂಬುದನ್ನು ನಾವು ಅವಲೋಕಿಸಿದೆವು. ಹಯೆಕ್ ಮಹಾಶಯನ ವಾದವು ಇಲ್ಲಿಂದ ಆರಂಭಿಸುವುದು. ಅಶಾಶ್ವತವಾದ ಮೂಲ ಸಂಪತ್ತಿನ ಮೊತ್ತವೇ ಬಂಡವಾಳ. ರಾಷ್ಟ್ರದ ಬಂಡವಾಳವನ್ನು ಒಂದು ನಿರ್ದಿಷ್ಟವಾದ ಮಟ್ಟದಲ್ಲಿ ಶಾಶ್ವತವಾಗಿ ನಿಲ್ಲಿಸಲು ಅಪ್ರತ್ಯಕ್ಷವಾಗಿ, ಸುತ್ತುವರಿಯಲ್ಲಿ ನೆರವಾಗುವುದು ಬಂಡವಾಳದ ಲಕ್ಷಣ; ಅನುಭೋಗಿ ಸರಕುಗಳು ತಯಾರಾಗುತ್ತಲೇ ಇರುವುದಕ್ಕೆ "ಪರಿಶುದ್ಧ ಆಗಮನ" ಎನ್ನಬಹುದು. ಉತ್ಪಾದನೆಯ ಕಾರ್ಯಭಾಗದ ಯಾವ ಕಡೆಯಲ್ಲಾದರೂ ಏಕಾಂಶ ಒಳ ಸೇರಿಕೆಯನ್ನು ಜೋಡಿಸುವುದೇ ಇನ್ವೆಸ್ಟ್‌ಮೆಂಟು. ಇದು ಎರಡು ವಿಧ. ೧. ಒಳ ಸೇರಿಕೆಯನ್ನು ನಿರಂತರ ನೇರಿಸುತ್ತಾ ಇದ್ದು ಕೆಲವು ಕಾಲ ಕಳೆದ ಮೇಲೆ ಉತ್ಪತ್ತಿಯು ಹೊರಬರುವುದಕ್ಕೆ "ನಿರಂತರ ಆಗಮನ-ಬಿಂದು ನಿರ್ಗಮನ" ಎನ್ನುವರು. ೨. ಬಿಂದುವಿನಲ್ಲಿ ಒಳಸೇರಿಕೆಯಿದ್ದು ಪ್ರತಿಫಲವು ನಿರಂತರವೂ ನಮಗೆ ಸಿಗುತ್ತಾ ಇದ್ದರೆ "ಬಿಂದು ಆಗಮನ-ನಿರಂತರ ನಿರ್ಗಮನ" ಎನ್ನಬಹುದು. ವಾಸ್ತವಿಕ ಜಗತ್ತಿನಲ್ಲಿ ಇವೆರಡೂ ಇವೆ. ತೆಂಗಿನ ಮರಗಳನ್ನು ನೆಟ್ಟ ಹತ್ತು ವರ್ಷ ಫಲವಿಲ್ಲ-ಅಮೇಲೆ ನಿರಂತರ ಫಲ ಬರುತ್ತದೆ. ಹೊಗೆಸೊಪ್ಪಿನ ಗಿಡ ನೆಟ್ಟು ಅದಕ್ಕೆ ನೀರೆರೆಯಲು ವೆಚ್ಚಮಾಡಿ, ಅದರ ರಕ್ಷಣೆಮಾಡಿ, ಕೊನೆಗೆ ಒಂದು ದಿನ 'ಬಿಂದು-ನಿರ್ಗಮನ'ವಾಗುವುದು. ಬಂಡವಾಳವು ಬಾಳಿಕೆ ಬರುತ್ತದೆ ಎಂದರೆ ಕಾಲ ಕಳೆದಹಾಗೆ ಅದು ನಾಶವಾಗುವುದಿಲ್ಲ ಎಂಬರ್ಥವಲ್ಲ; ಅದನ್ನು ಒಂದು ಸಲ ಉಪಯೋಗಿಸಿದ್ದರಿಂದಲೇ ಅದರ ಕೆಲಸ ಮುಗಿಯುವುದಿಲ್ಲ. ಅದು ಮರಳಿ ಮರಳಿ ನಮ್ಮ ಸೇವೆಗೆ ನೆರವಾಗುವುದು ಎಂದರ್ಥ. ಇಂಥ ಬಾಳಿಕೆಯಿಂದ ಇನ್ವೆಸ್ಟ್‌ಮೆಂಟ್‌ನ ಸಮಸ್ಯೆ ಪ್ರಬಲವಾಗುತ್ತದೆ.

## ಹನ್ನೆರಡನೆಯ ಅಧ್ಯಾಯ

# ಬಡ್ಡಿ

### ಬಡ್ಡಿಯ ಸ್ವರೂಪ:

ಬಂಡವಾಳದ ಉಪಯೋಗವನ್ನು ಪಡೆದುಕೊಂಡುದಕ್ಕಾಗಿ ತೆರುವ ಧಾರಣೆಗೆ "ಬಡ್ಡಿ" ಎಂದು ಕರೆಯುವರು, ಉತ್ಪಾದನೆಯ ಪರಿಮಾಣ ವನ್ನೂ, ಇನ್‌ವೆಸ್ಟ್‌ಮೆಂಟಿನ ಗೊತ್ತುಗುರಿಯನ್ನೂ ಇದು ನಿರ್ಣಯಿಸುವು ದರಿಂದ ಸಮಾಜದಲ್ಲಿರುವ ಉದ್ಯೋಗದ ಪರಿಮಾಣಕ್ಕೂ ಒಟ್ಟು ಹಿತಕ್ಕೂ ಬಡ್ಡಿಯು ಹೊಣೆಯೆಂದು ನಾವು ತಿಳಿಯಬಹುದು. ಬಂಡವಾಳದ ಉಪ ಯೋಗವು ಅತಿ ಕಡಿಮೆಯಾಗಿದ್ದ ಪ್ರಾಚೀನಕಾಲದಲ್ಲಿ ದುಡ್ಡನ್ನು ಬಡ್ಡಿ ಇಲ್ಲದೆಯೇ ಕೊಡಬೇಕೆಂದು ಧರ್ಮಶಾಸ್ತ್ರಜ್ಞರು ವಿಧಿಸಿದ್ದರು. ಕ್ರೈಸ್ತ, ಮಹಮದೀಯ ಮತಗಳಲ್ಲಿ ಬಂಡವಾಳವು "ಬಂಜೆ"ಯೆಂದೂ ಅದನ್ನು ಸಾಲಕೊಟ್ಟಾಗ 'ಬಡ್ಡಿ' ಪಡೆದರೆ ಪಾಪವೆಂದೂ ನಂಬಿಕೆ ಇದೆ. ಆದರೆ ಬಂಡವಾಳದ ಉಪಯೋಗವು ಹೆಚ್ಚುತ್ತಾ ಬಂದಹಾಗೆ, ಸಾಲ ಪಡೆಯುವ ಜನ ಹೆಚ್ಚಿದಹಾಗೆ, ಅವರು ದುಡ್ಡಿನ ಉಪಯೋಗಕ್ಕೆ ಪ್ರತಿಯಾಗಿ ದುಡ್ಡು ಕೊಡಲು ಸಿದ್ಧರಾದರು. ಬಂಡವಾಳಗಾರ ಉತ್ಪಾದನೆಯು ಪ್ರಾಬಲ್ಯಕ್ಕೆ ಬಂದಮೇಲಂತೂ ಬಡ್ಡಿಯು ಸ್ಪರ್ಶಮಣಿಯ ರೂಪವನ್ನು ತಾಳಿದೆ. ಬಡ್ಡಿಯ ದರವನ್ನು ಅನುಸರಿಸಿ ರಾಷ್ಟ್ರದ ಉತ್ಪಾದಕ ಕಾರ್ಯಕ್ರಮಗಳ ದೈನಂದಿನ ಚಟುವಟಿಕೆಗಳು ನಡೆಯುವುವು.

### ಬಡ್ಡಿಯ ಮೀಮಾಂಸೆಗಳು:

೧. ಉತ್ಪಾದಕ ಶಕ್ತಿ: ಬಡ್ಡಿಯ ವಿಷಯವಾಗಿ ಬಂದ ಅನೇಕ ಮೀಮಾಂಸೆಗಳಲ್ಲಿ ಉತ್ಪಾದಕ ಶಕ್ತಿ ಮೀಮಾಂಸೆಯೂ ಒಂದು. ಭೂಮಿಯು ಬೆಳೆ ಈಯುವಂತೆ, ಬಂಡವಾಳವು ಬಡ್ಡಿಯನ್ನು ಈಯುವುದು ಎಂಬುದು ಪ್ರಾಚೀನರವಾದ. ಬಂಡವಾಳದ ಉಪಯೋಗದಿಂದ ಪರಿಶ್ರಮದ ಫಲಿತಾಂ ಶವು ಹೆಚ್ಚಾದರೆ, ಉತ್ಪಾದನೆಯು ಅಧಿಕವಾದರೆ, ಈ ಹೆಚ್ಚಳದ ಕೀರ್ತಿ

ಯಾರಿಗೆ?—ಬಂಡವಾಳಕ್ಕೋ, ಪರಿಶ್ರಮಕ್ಕೋ? ಈ ಹೆಚ್ಚಳವು ಯಾರಿಗೆ ಹೋಗಬೇಕು?—ಬಂಡವಾಳಗಾರನಿಗೋ, ಕಾಮಗಾರನಿಗೋ? ಎಂಬ ವಿಷಯದಲ್ಲಿ ಭಿನ್ನಭಿನ್ನ ಅಭಿಪ್ರಾಯಗಳಿದ್ದರೂ ಉತ್ಪಾದನೆಯು ಹೆಚ್ಚಿದುದರಲ್ಲಿ ಒಮ್ಮತವಿದೆ. ಬಂಡವಾಳಕ್ಕೆ ಉತ್ಪಾದಕ ಶಕ್ತಿಯಿರುವುದರಿಂದಲೇ ಅದು ಬಡ್ಡಿಯನ್ನು ಪಡೆಯಿತು ಎಂಬ ವಾದದಲ್ಲಿ ಬಡ್ಡಿಯನ್ನು ಬರೇ ಜನರ ಬೇಡಿಕೆಯ ದೃಷ್ಟಿಯಿಂದಷ್ಟೇ ನೋಡಲಾಗಿದೆ. ಆದರೆ ಉತ್ಪಾದಕ ಕೆಲಸಗಳಿಗೆ ಹಚ್ಚದೆ, ಸುಮ್ಮಗೆ ಅನಾವ್ರಯಕ್ಕೆಂದು ತಂದ ಬಂಡವಾಳಕ್ಕೂ ನಾವು ಯಾಕೆ ಬಡ್ಡಿಕೊಡುತ್ತೇವೆ? ಎಂಬ ಪ್ರಶ್ನೆಗೆ ಉತ್ಪಾದಕ ಶಕ್ತಿಮೀಮಾಂಸೆಯು ಜವಾಬುಕೊಡಲಾರದು.

೨. ತ್ಯಾಗ ಮೀಮಾಂಸೆ: ತಕ್ಷಣ ಅನುಭೋಗವನ್ನು ದೂರೀಕರಿಸಿದ ತ್ಯಾಗದ ಪುಣ್ಯಫಲವೇ 'ಬಡ್ಡಿ' ಎಂಬುದು ತ್ಯಾಗ ಮೀಮಾಂಸೆಯ ತಿರುಳು. ಇದ್ದ ನೂರು ರುಪಾಯಿಯಲ್ಲಿ ದನವನ್ನು ಕೊಂಡು ಹಾಲಿನ ಸವಿಯನ್ನು ಈಗಿನಿಂದಲೇ ಅನುಭವಿಸುವುದನ್ನು ತ್ಯಾಗಮಾಡಿ, ಹತ್ತರಸಲೆಯಲ್ಲಿ ಗರ್ಜಿ ಇದ್ದಾತನಿಗೆ ಈಗ ಸಾಲಕೊಟ್ಟು, ಹತ್ತು ವರ್ಷಗಳ ಕಾಲ ಕಾದು, ನೂರನ್ನು ಇನ್ನೂರಕ್ಕೆ ಬೆಳೆಸಿ ಎಮ್ಮೆಯನ್ನೇ ಕೊಂಡು ಘೇಡೆಯ ಸವಿಯನ್ನೇ ನೋಡುವ ಭಾಗ್ಯ ಬಂಡವಾಳಗಾರನದು. ಹತ್ತುವರುಷ ಹಾಲುಘೇಡೆಯ ಧ್ಯಾನಮಾಡುತ್ತಾ, ಈಗ ಹಾಲುಕುಡಿಯುವುದನ್ನು ಬಿಟ್ಟ 'ತ್ಯಾಗಕ್ಕೆ' ಸಲ್ಲಬೇಕಾದ ಮೊಬಲಗೇ ಹತ್ತರಸಲೆಯ ಬಡ್ಡಿ. ಈ ಮೀಮಾಂಸೆಯಲ್ಲಿ 'ಬಡ್ಡಿ'ಯನ್ನು ಬರೇ ಬಂಡವಾಳದ ಪೂರೈಕೆಯ ದೃಷ್ಟಿಕೋನದಿಂದಲೇ ನೋಡಲಾಗಿದೆ. ಬಂಡವಾಳಕ್ಕೂ ಉತ್ಪಾದಕ ಶಕ್ತಿಯುಂಟು, ಬೇಡಿಕೆಯ ಒಂದು ಪಾರ್ಶ್ವ ಉಂಟು ಎಂಬುದನ್ನು ಇಲ್ಲಿ ಮರೆತಂತಿದೆ.

೩. ಏಜಿಯೋ ಮೀಮಾಂಸೆ: ಮನಃಶಾಸ್ತ್ರವನ್ನು ಉಪಯೋಗಿಸಿ ಪರಿಸರದ ಇನ್‌ವೆಸ್ಟ್‌ಮೆಂಟಿನ ಪೂರೈಕೆಯನ್ನು ಮಾತ್ರ ಪ್ರೋತ್ಸಾಹಿಸುವ ಬಡ್ಡಿಯದರ ಯಾವುದರಿಂದ ನಿರ್ಣಯವಾಗುವುದು ಎಂಬುದನ್ನು ಬೊಂಬೊವಾರ್ಕ ಎಂಬ ಆಸ್ಟ್ರಿಯಾದ ಅರ್ಥಶಾಸ್ತ್ರಿ ವಿಚಾರಿಸಿದನು. ಮನುಷ್ಯನು ವರ್ತಮಾನದ ಸುಖವನ್ನು ಭವಿಷ್ಯತ್ತಿನ ಸುಖಕ್ಕಿಂತ ಹೆಚ್ಚಾಗಿ ಒಲಿಯು

ವುದೇ ಬಡ್ಡಿಯ ಅಸ್ತಿತ್ವಕ್ಕೆ ಕಾರಣವೆಂದು ಅವನ ವಾದ. ಈಗ ನೂರು ರೂಪಾಯಿಯನ್ನು ಕೊಡುತ್ತೇನೆ. ಇನ್ನು ಒಂದುವರ್ಷದ ಮೇಲಾದರೆ ನೂರಎರಡು ರೂಪಾಯಿ ಕೊಡುತ್ತೇನೆ ಎಂದರೆ ನಾವು ಈಗಿನ ನೂರನ್ನು ಇಚ್ಛಿಸುತ್ತೇವೆ ಈಗ೧೦೦ ಆಮೇಲಾದರೆ ೧೦೩ ಎಂದಾಗ ನಮ್ಮ ಮನಸ್ಸು ತುಸು ಹೊಯ್ದಾಡುವುದು ೧೦೪ ಎಂದರೆ ನಾವು 'ಸರಿ, ಈಗ ಬೇಡ, ಒಂದುವರ್ಷದ ಮೇಲೆಯೇ ಕೊಡಿರಿ' ಎಂದು ಸಮ್ಮತಿಸುವೆವು. ಅಂದರೆ, ಈಗಿನ ನೂರು ರೂಪಾಯಿಯಲ್ಲಿ ನಮಗೆ ಮುಂದಿನ ವರ್ಷದ ೧೦೩ ರೂಪಾಯಿಗಿಂತಲೂ ಮಿಗಿಲು ತೃಪ್ತಿಯುಂಟು ಕಟ್ಟಕಡೆಗೆ ನಮ್ಮನ್ನು ೧೦೪ ರೂಪಾಯಿಗೊಪ್ಪಿಸಿದಾಗ ನೂರು ರೂಪಾಯಿಯ ಸರಕುಗಳ ಅನುಭವವನ್ನು ಒಂದು ವರ್ಷ ಮುಂದುವರಿಸಿದುದಕ್ಕೆ ನಮಗೆ ಸಲ್ಲಬೇಕಾದ ಮೊತ್ತವು ನಾಲ್ಕು ರೂಪಾಯಿಎಂದು ತಿಳಿಯಬೇಕು. 'ಏಜಿಯೋ' ಮೀಮಾಂಸೆ ಕೂಡ ತ್ಯಾಗ ಮೀಮಾಂಸೆಯಂತೆ, 'ಪೂರೈಕೆ'ಯ ಪಾರ್ಶ್ವಕ್ಕೆಯೆ ಗಮನ ವನ್ನು ಕೊಟ್ಟು ಅಸಂಪೂರ್ಣತೆಯ ಅಪಕೀರ್ತಿಗೆ ಒಳಗಾಗಿರುವುದು

೪. ಬಂಡವಾಳದ ಪರಿಸರದ ಉತ್ಪಾದಕಶಕ್ತಿ. ಹತ್ತುಸಾವಿರ ರುಪಾಯಿಯ ಸಾಲ ತೆಗೆದು ಒಂದು ವಿದ್ಯುತ್ತಿನ ಮಗ್ಗವನ್ನು ತರುವುದು ನಮಗೆ ಲಾಭ ಬರುವುದೆಂದು ತಾನೆ? ಲಾಭ ಎಷ್ಟಾಗಬೇಕು ಎಂಬುದನ್ನು ನೋಡುವ ಐದರಸಲೆ ಬಡ್ಡಿಯಲ್ಲಿ ನಾವು ಸಾಲ ತೆಗೆದಿದ್ದರೆ ನಾವು ತೆಗೆದುಕೊಂಡ ಹತ್ತುಸಾವಿರಕ್ಕೆ ಒಂದು ವರ್ಷಕ್ಕೆ ರೂ. ೫೦೦ ಬಡ್ಡಿಯಾಗುವುದು ಬಂಡವಾಳದ ಉಪಯೋಗದಿಂದ ನಮ್ಮ ವಿದ್ಯುತ್ತಿನ ಮಗ್ಗದಲ್ಲಿ ಉತ್ಪಾದನೆಗೊಂಡ ಬಟ್ಟೆಯ ಪರಿಸರದ ನಿವ್ವಳ ಆದಾಯವು ೫೦೦ ರೂಪಾಯಿಯಾದರೆ, ಬಂಡವಾಳದ ಪ್ರಯೋಜನ ಪಡೆದಂತಾಯಿತು. ೫% ಬಡ್ಡಿ ತೆತ್ತುದು ಸಾರ್ಥಕವಾಯಿತು. ವಿದ್ಯುತ್ತಿನ ಮಗ್ಗದಲ್ಲಿ ಐದು ನೂರಕ್ಕಿಂತ ಹೆಚ್ಚು ಪರಿಸರದ ಆದಾಯವು ಬಂದರೆ, ಬಂಡವಾಳವು ಇತ್ತ ಕಡೆಗೆ ಚಲಿಸುವುದು. ಸ್ವಲ್ಪಕಾಲದ ಮೇಲೆ ಉತ್ಪಾದನೆಯ ಗಾತ್ರವು ಬೆಳೆದು, ಧಾರಣೆ ಇಳಿದು, ಪರಿಸರದ ಆದಾಯವು ಮರಳಿ ಬಂಡವಾಳದ ಧಾರಣೆ = ಬಡ್ಡಿಯ ದರಕ್ಕೆ ಸಮಾನವಾಗುವುದು. ಆದುದರಿಂದ ಲಾಭದ ಪ್ರತೀಕಾರದರ ಅಥವಾ ಬಂಡವಾಳದ ಪರಿಸರದ ಉತ್ಪಾದಕ ಶಕ್ತಿಯು ಎಲ

ಉದ್ಯಮಗಳಲ್ಲಿಯೂ ಸಮಾನವಾಗಿರುವುದು. ಬಂಡವಾಳವನ್ನು ಸಾಲ ಕೊಡುವುದರಿಂದ ಉತ್ಪಾದಕ ಶಕ್ತಿಯು ವೃದ್ಧಿಯಾಗಲು ಎರಡು ಕಾರಣ ಗಳಿವೆ. (೧) ಬಂಡವಾಳವು ಪರೋಕ್ಷ ಉತ್ಪಾದನೆಗೆ ಅನುಕೂಲವಾಗು ವುದು. (೨) ಸಾಮಾನ್ಯವಾಗಿ ಸಾಲಗಾರನಿಗಿಂತ ಸಾಲಿಗನು (ಉದ್ದಿಮೆ ದಾರನು) ದುಡ್ಡನ್ನು ಹೆಚ್ಚು ಸಮರ್ಥವಾಗಿ ಉಪಯೋಗಿಸಬಲ್ಲನು. ತಾತಾ ಡೆಫರ್ಡ್ ಷಯರುಗಳಿಗೆ ಬೇಡಿಕೆ ಇರಲು ಇದೇ ಕಾರಣ. ನಾವು ನಮ್ಮ ಬಂಡವಾಳವನ್ನು ಒಳಗೆಯೇ ಇಟ್ಟುಕೊಳ್ಳುವುದಕ್ಕಿಂತ ಒಂದು ಕೂಡು ಬಂಡವಾಳ ಸಂಸ್ಥೆಗೆ ಸಾಲಕೊಡುವುದೊಳ್ಳೆಯದು. ಆದರೆ ಹೊಸ ಉದ್ಯಮಗಳಲ್ಲಿ ಹಣಹೂಡುವಾಗ ಲಾಭದ ನಿರೀಕ್ಷೆಯನ್ನು ಚೆನ್ನಾಗಿ ವಿಮರ್ಶಿಸಿಕೊಳ್ಳಬೇಕು.

ಇನ್ವೆಸ್ಟ್ ಮಾಡಲು ತಯಾರಾದ ಬಂಡವಾಳವು ಹೆಚ್ಚಾಗಿದ್ದರೆ, ಅದರ ಉತ್ಪಾದಕ ಶಕ್ತಿಯು ಕಡಿಮೆಯಾಗಲು ಕಾರಣವೇನು? ಉತ್ಪಾ ದನೆಯ ಭಿನ್ನ ಭಿನ್ನ ಮಾರ್ಗಗಳಲ್ಲಿ ಅದು ಕಡಿಮೆಯಾಗುವುದೇತಕ್ಕೆ? ಎಂಬ ಪ್ರಶ್ನೆಗೆ ಹೆಚ್ಚು ಫರ್ಮುಗಳ ಒತ್ತಡದಿಂದ ಧಾರಣೆಯು ತಗ್ಗಿ ಲಾಭದ ಪ್ರತೀಕ್ಷೆ ಇಳಿಯುವುದು ಕಾರಣ ಎಂದು ಉತ್ತರ ಹೇಳಬಹುದು ಆದರೆ ಉತ್ಪಾದನೆಯ ಎಲ್ಲ ಮಾರ್ಗಗಳಲ್ಲಿಯೂ ನಾವು ಬಂಡವಾಳವನ್ನು ಹೆಸುಗೆ ಮಾಡಿ ಹಾಕಿದಾಗಲೂ ಲಾಭ ಪ್ರತೀಕ್ಷೆಯು ಇಳಿಯಲು ಕಾರಣವೇನು? ಒಳ್ಳೊಳ್ಳೆಯ ಗಣಿಗಳು ಈಗಾಗಲೇ ನಮ್ಮ ಬಂಡವಾಳದ ಸಹಾಯವಿಲ್ಲದೆನೆ ನಡೆಯುತ್ತಿವೆ. ಗಿರಣಿಗಳು ಅತ್ಯುತ್ತಮವಾದ ಸ್ಥಳದಲ್ಲಿ ಈಗಾಗಲೇ ಸ್ಥಾಪಿತವಾಗಿವೆ. ಆದುದರಿಂದ ಅವಯವಗಳ ಸಂಯೋಜನೆಯ ದಾಮಾ ಶಯದಲ್ಲಿ ವ್ಯತ್ಯಾಸವಿರುವುದೂ, ಅದರಿಂದಾಗಿ ಸಂಯೋಜನೆಯ ವೆಚ್ಚವು ಏರುವುದೂ, ನಾವು ಹೂಡುವ ಬಂಡವಾಳವು ಅಷ್ಟು ಫಲವತ್ತಾಗದಿರಲು ಕಾರಣ. ಹೊಸ ಗಣಿಗೆ ಹೆಚ್ಚು ಕ್ರಯದ ಉಪಕರಣಗಳು ಬೇಕಾದಾವು, ಹೆಚ್ಚು ಪರಿಶ್ರಮ ಬೇಕೆನಿಸೀತು. ಅಂತೂ ಎರಡು ದೃಷ್ಟಿಯಿಂದಲೂ ಉತ್ಪಾದನೆಯ ವೆಚ್ಚವು ಹೆಚ್ಚಿ, ಬಂಡವಾಳದ ಪರಿಸರದ ಆದಾಯವು ಇಳಿ ಮುಖವಾಗಿಯೇ ಇರುವುದು. ಬಡ್ಡಿಯೂ ಇಳಿಯುವುದು. ಹೊಸ ಹೊಸ ಆವಿಷ್ಕಾರಗಳೂ, ಅಧಿಕ ಬಂಡವಾಳವನ್ನುಪಯೋಗಿಸುವ ಉತ್ಪಾದನಾ

ಕ್ರಮಗಳೂ ಪ್ರಚಾರಕ್ಕೆ ಬಂದರೆ ಬಡ್ಡಿಯ ದರ ಮರಳಿ ಏರಬಹುದು. ಆತನಕ ಬಡ್ಡಿಯ ದರವು ಇಳಿಯುವುದು ಸಿದ್ಧ.

ಪ್ರಗತಿ ಶೀಲ ಸಮಾಜಗಳಲ್ಲಿ ಬಡ್ಡಿಯ ದರವು ಇಳಿಮುಖವಾಗಿರಲು ಇನ್ನೂ ಕೆಲವು ಕಾರಣಗಳಿವೆ: (೧) ಜನರ ವರಮಾನವು ಹೆಚ್ಚಿದ ಹಾಗೆ ಅವರ ಜೀವನಾವಶ್ಯಕಗಳು ಪೂರ್ಣವಾಗುವುದರಿಂದ ಅವರು ಮುಂಚಿಗಿಂತ ಅಧಿಕ ದಾಮಾಶಯದಲ್ಲಿ ಹಣವನ್ನು ಉಳಿಸುವರು. (೨) ಜನರಿಗೆ ಉಳಿತಾಯದ ಕಡೆಗೆ ಒಲವೂ, ಸಾಮರ್ಥ್ಯವೂ ಹೆಚ್ಚುವುದು. ಮಾತ್ರವಲ್ಲದೆ ಇನ್‌ವೆಸ್ಟ್‌ಮೆಂಟು ಅವಕಾಶಗಳು ಅಧಿಕವಾಗುವುವು. (೩) ಬಡ್ಡಿಯ ದರವನ್ನು ಲಕ್ಷ್ಯಕ್ಕೆ ತರದೆಯೇ ಉಳಿತಾಯವನ್ನು ನಡೆಯಿಸುವ ಜನರು ಇರುತ್ತಾರೆ.

## ಬಡ್ಡಿಯ ದರ ಸೊನ್ನೆಯಾಗುವುದೆ?

"ಹೌದು" ಎನ್ನುವವನು ಬೊಂಬೊವಾರ್ಕ. ಬಂಡವಾಳದ ವಿರಳತ್ವವು ಮಾಯವಾಗುವ ಬಿಂದುವಿನ ವರೆಗೆ ಬಂಡವಾಳದ ಸಂಚಯನವು ಇರಬಾರದೇಕೆ? ಅಂಥ ಪ್ರಸಂಗದಲ್ಲಿ ಬಡ್ಡಿಯ ಬೇಡಿಕೆ ನಿಂತು, ದರವು ಸೊನ್ನೆಯಾಗಬಾರದೆ? ಎಂದು ಬೊಂಬೊವಾರ್ಕ ಕೇಳುವನು. ಅನಿಶ್ಚಿತತೆಯೂ, ನಷ್ಟಸಂಭವವೂ ಇರುವ ಪ್ರಗತಿಶೀಲವಾದ ಸಮಾಜದಲ್ಲಿ, ಜನರ 'ದ್ರವ್ಯದೊಲವು' ಬಡ್ಡಿಯ ದರವು ಒಂದು ನಿರ್ದಿಷ್ಟ ಬಿಂದುವಿಗಿಂತ ಕೆಳಗಿಳಿಯಲು ಖಂಡಿತವಾಗಿಯೂ ಬಿಡುವುದಿಲ್ಲ ಎಂಬ ಮುಖ್ಯ ಆಕ್ಷೇಪವನ್ನು ಸದ್ಯ ಬದಿಗಿರಿಸಿ, ಬರೇ ವಿಶ್ಲೇಷಣೆಯ ಬಗ್ಗಾದರೂ ಬೊಂಬೊವಾರ್ಕನ ಸೊನ್ನೆ ಬಡ್ಡಿಯ ದರವನ್ನು ಸಮರ್ಥಿಸಬಹುದೆ? ಎಂದು ವಿಮರ್ಶಿಸೋಣ. ಅಪಾಯವೂ ಇಲ್ಲ, ಅನಿಶ್ಚಿತತೆಯೂ ಇಲ್ಲ, ಜನ ಸಾಯುವುದೂ ಇಲ್ಲ, ಅವರಿಗೆ ಭವಿಷ್ಯದ ಕುರಿತು ಯಾವ ಸಂದೇಹವೂ ಇಲ್ಲ ಎಂಬ ಧುರಂಧರ ಸಮಾಜದಲ್ಲಿ ಬಡ್ಡಿಯ ಸಮತೋಲ ದರವು ಸೊನ್ನೆ ಆಗಲೂ ಬಹುದು ಎಂಬುದನ್ನು ನಾವು ನಂಬಲು ಯತ್ನಿಸುವ. ಆಗಲೂ ಭವಿಷ್ಯದ ಬಗ್ಗೆ ವಿಶ್ವಾಸವಿಲ್ಲದ ಸಮಾಜವು ಬಂಡವಾಳವನ್ನೇ ಉಪಯೋಗಿಸುವ ದುರ್ವ್ಯಸನಕ್ಕೆ ತುತ್ತಾಗುವುದರಿಂದ, ಬಂಡವಾಳವು ಮರಳಿ ವಿರಳವಾಗಿ,

ಬಡ್ಡಿಯು ಧನಾತ್ಮಕ(+)ವಾಗಿರುವುದು ಎಂದು ವಿಕ್‌ಸೆಲ್ ಮತ್ತು ಕೆಸೆಲ್ ಆಕ್ಷೇಪಿಸುವುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಐದು ರೂಪಾಯಿ ದರದಲ್ಲಿ ರಾಮನು ಸಾವಿರ ರೂಪಾಯಿಯನ್ನು ಇನ್ವೆಸ್ಟ್ ಮಾಡಿದ್ದಾನೆಂದು ಭಾವಿಸೋಣ ಅವನು ಇಪ್ಪತ್ತು ವರ್ಷ ಬದುಕಿದರೆ ಬಡ್ಡಿಯಿಂದಲೇ ಅವನ ಆಸಲು ಐವೇಜು ಅವನಿಗೆ ಮುಟ್ಟುವುದು. ಬಂಡವಾಳ=ಇಪ್ಪತ್ತು ವರ್ಷದ ಬಡ್ಡಿ. ೨೦ ವರ್ಷಗಳ ತನಕ ವರಮಾನವು ದೊರೆಯುವುದರಿಂದ ರಾಮನು ಈಗಲೇ ಸಾವಿರ ರೂಪಾಯಿಯನ್ನು ತಿಂದು "ಫಡ್ಚ" ಮಾಡುವುದಿಲ್ಲ. ದರವು ೧% ಆದರೆ ಬಂಡವಾಳ ತುಂಬಿ ಬರಲು ೧೦೦ ವರ್ಷಗಳು ಬೇಕು. ಈ ಬಡ್ಡಿಯಲ್ಲಿ ನಾಲಕೊಡುವುದಕ್ಕಿಂತ "ವರ್ಷಾಶನ" (ಎನ್ಯುವಿಟಿ)ವನ್ನು ಕೊಂಡು ೨½%ನ ಹಾಗಾದರೆ ೪೦ ವರ್ಷಗಳ ವರೆಗೂ, ೨% ನ ಹಾಗಾದರೆ ೫೦ ವರ್ಷಗಳ ವರೆಗೂ ಬಂಡವಾಳವನ್ನೇ ಭುಂಜಿಸಬಹುದು. ಎರಡೂ ಒಂದರ ಸಲೆ ಬಡ್ಡಿಗಿಂತ ವಾಸಿ ಎಂದು ರಾಮನು ಎಣಿಸುವನು. ಇದೇ ವಾದ ಸರಣಿಯಲ್ಲಿ ನಾವು ಮುಂದೆ ಹೋದರೆ ಬಡ್ಡಿಯು ಸೊನ್ನೆಯಾದಾಗ ಸಮಾಜವು ಕೂಡ ಇದೇ ಪ್ರಕಾರವಾಗಿ ಬಂಡವಾಳ ಭುಂಜನಕ್ಕೆ ಒಲಿಯುವುದನ್ನು ಕಲ್ಪನೆಮಾಡಬಹುದು. ಆದುದರಿಂದ ಬಡ್ಡಿಯು ಇಳಿದ ಹಾಗೆಬಂಡವಾಳವು ವಿರಳವಾಗುವ ಸನ್ನಿವೇಶವು ಹೆಚ್ಚುವುದರಿಂದ ಯಾವಕಾಲಕ್ಕೂ ಬಡ್ಡಿಯು ಸೊನ್ನೆ ಆಗಲಾರದು ಎಂದು ನಾವು ಬೊವಾರ್ಕನಿಗೆ ಜವಾಬು ಕೊಡಬಹುದು.

**ಉಳಿತಾಯ:**

ವ್ಯಕ್ತಿಯು ತನಗೆ ಬಂದ ವರಮಾನವನ್ನೆಲ್ಲ ವೆಚ್ಚ ಮಾಡಬೇಕಾಗಿಲ್ಲ. ಆತ ಅದನ್ನು ಉಳಿಸಬಹುದು. ಉಳಿಸಿದ್ದನ್ನು ಅವನು ಬ್ಯಾಂಕಿನಲ್ಲಿಟ್ಟರೂ, ಅಂಚೆ ಕಚೇರಿಯಲ್ಲಿಟ್ಟರೂ, ತನ್ನ ಪ್ರತ್ಯಕ್ಷ ಉಪಯೋಗವನ್ನು ಬಿಟ್ಟು ಅವರಿಗೆ ಅದನ್ನು ಸಾಲಕೊಟ್ಟ ಹಾಗೆ ಎಂದು ಭಾವಿಸಬೇಕು. ಬ್ಯಾಂಕಿನವರು ಅವನ ಉಳಿತಾಯವನ್ನೇ ಉದ್ಯಮಗಳಿಗೆ ಹೂಡಿ ದೇಶದ ವಾಸ್ತವಿಕ ಸಂಪತ್ತನ್ನು ಹೆಚ್ಚಿಸುವರು. ಸಾಮಾನ್ಯವಾಗಿ ವರಮಾನವು ಹೆಚ್ಚಿದ ಹಾಗೆ ನಾವು ಹೆಚ್ಚು ದಾಮಾಶಯದಲ್ಲಿ ಉಳಿತಾಯವನ್ನು ಬೆಳೆಸುತ್ತೇವೆ.

ಆದುದರಿಂದಲೇ ಆಸ್ಟ್ರೇಲಿಯಾ, ಅಮೇರಿಕ ಮುಂತಾದ ಶ್ರೀಮಂತರಾಷ್ಟ್ರಗಳಲ್ಲಿ ಬಡ ಭಾರತಕ್ಕಿಂತ ಹೆಚ್ಚು ಉಳಿತಾಯವಿರುವುದು. ಬಡ್ಡಿಯ ದರವು ಹೆಚ್ಚಿದರೆ ಜನ ಹೆಚ್ಚು ಉಳಿತಾಯ ಮಾಡಬಹುದು ಎಂಬುದು ಇನ್ನೊಂದು ಸಾಮಾನ್ಯ ನಿಯಮ ದರಗಳ ಕಡೆಗೆ ಲಕ್ಷ್ಯಕೊಡದೆ ಯಂತ್ರವತ್ತಾಗಿ, ಉಳಿತಾಯ ಮಾಡುವವರು ಸಮಾಜದಲ್ಲಿ ವಿರಳ. ೧೨ರ ಸಲೆ ಬಡ್ಡಿ ಸಿಗುವುದಾದರೆ ರಾಮನು ತನ್ನ ಹತ್ತಿರವಿರುವ ಬಂಡವಾಳದ ಹೆಚ್ಚಿನಂಶವನ್ನು ಬಡ್ಡಿಗೆ ಹಾಕುವಂತೆಯೇ, ಹಣ ಉಳಿಸುವವನಿಗೂ ೧೨ರ ಸಲೆ ಬಡ್ಡಿಯು ಸಾಮಾನ್ಯವಾದಾಗ ಆಕರ್ಷಣೆ ಹೆಚ್ಚು ಹೇಗಿದ್ದರೂ ೬% ಇರುವ ಸಮಯಕ್ಕಿಂತ ಹೆಚ್ಚು ಉಳಿತಾಯ ಮಾಡುವ ಆಕರ್ಷಣೆ ಇರುವುದು ಖಂಡಿತ.

ಬಂಡವಾಳಗಾರ ಸಮಾಜದಲ್ಲಿ ಎಷ್ಟು ಬಂಡವಾಳ ಸಿಗುವುದೋ ಅಷ್ಟೇ ಮೊಬಲಗಿಗೆ ಬೇಡಿಕೆಯು ಸರಿಸಮಾನವಾಗುವಂತೆ ನೋಡಿಕೊಳ್ಳುವ ಕೆಲಸವನ್ನು ಬಡ್ಡಿಯು ನಿರ್ವಹಿಸುವುದು ಬಡ್ಡಿಯುದರವಷ್ಟಾದರೂ ಲಾಭ ಹುಟ್ಟದ ಯೋಜನೆಯು ನಡೆಯುವುದಿಲ್ಲ ಬಡ್ಡಿ ಎಂದರೆ ಒಂದು ಧಾರಣೆ—ಬಂಡವಾಳವೆಂಬ ಸರಕಿನ ಧಾರಣೆ, ಸಾಲಕೊಂಡದ್ದಕ್ಕೆ ಕೊಡುವ ಧಾರಣೆ. ಮೂರೂಕಾಲು ಸಲೆ ಬಡ್ಡಿ ಎಂದರೆ ನೂರು ರೂಪಾಯಿಯ ಧಾರಣೆಯು ೩¼ ರೂಪಾಯಿ ಎಂದರ್ಥ ಸರಕಿನ ಧಾರಣೆ ೩¼ ಆದಾಗ ಹೇಗೆ ಬೇಡಿಕೆ ಪೂರೈಕೆಗಳು ಸಮಾನವಾಗಿರುವುವೋ, ಅಂತೆಯೇ ೩¼ರ ಬಡ್ಡಿಯು ಸಾಲಗಳ ಬೇಡಿಕೆಯನ್ನೂ, ಅವುಗಳ ಪೂರೈಕೆಯನ್ನೂ ಸಮೀಕರಿಸುವುದು ಎಂದು ನಾವು ಹೇಳಬಹುದು ಬೇಡಿಕೆ ಕಮಾನಿನಲ್ಲಾಗಲೀ ಪೂರೈಕೆಯ ಕಮಾನಿನಲ್ಲಾಗಲೀ ಸ್ಥಳ ಪರಿವರ್ತನೆಯುಂಟಾದರೆ ಬಡ್ಡಿಯ ದರವು ಪರಿವರ್ತನೆಗೊಳ್ಳುವುದರಿಂದ ಸಾಲಗಳ ಬೇಡಿಕೆ ಪೂರೈಕೆಗಳು ಅಥವಾ ಇನ್ವೆಸ್ಟ್‌ಮೆಂಟ್ ಮತ್ತು ಉಳಿತಾಯವು ಸಮಾನವಾಗುವುವು.

**ಆಸ್ತಿಗಳು:**

(೧) ಬಾಂಡುಗಳು. ದೀರ್ಘಾವಧಿಯ ಸ್ಥಿರಬಡ್ಡಿಯ ಸೆಕ್ಯೂರಿಟಿಗಳನ್ನು 'ಬಾಂಡು' ಎನ್ನುವರು. ಬಾಂಡುದಾರನಿಗೆ ಅವನ ಬಾಂಡಿನ

ವೊಬಲಗನ್ನನುಸರಿಸಿ. ಸ್ಥಿರಬಡ್ಡಿಯ ಆದಾಯ ಬರುವುದು. ಸರಕಾರದ ೩$\frac{೧}{೪}$ ಸಲೆಯ ಬಾಂಡು ನಾವಿದ್ದಷ್ಟು ಕಾಲವೂ ನಾವು ಕೊಟ್ಟ ನೂರು ರೂಪಾಯಿಗೆ ೩$\frac{೧}{೪}$ ರೂಪಾಯಿಯನ್ನು ತಂದೇ ತರುವುದು ಇತರ ಖಾಸಗಿ ಸಂಸ್ಥೆಗಳು ಹೊರಡಿಸುವ 'ಡಿಬೆಂಚರು' ಕೂಡಾ ಸ್ಥಿರ ಬಡ್ಡಿಯ ವಾಗ್ದಾನ ಮಾಡಿದರೂ, ಈ ಸಂಸ್ಥೆಗಳು ಸರಕಾರದಷ್ಟು ಭದ್ರವಾಗಿರುವುದಿಲ್ಲವಾದ್ದರಿಂದ, 'ಡಿಬೆಂಚರಿಗೆ' 'ಬಾಂಡಿ'ಗಿಂತ ಹೆಚ್ಚು ಬಡ್ಡಿ ಬರಲಾರದು ಆದರೆ ಬಾಂಡಿನಲ್ಲಿ ಒಂದು ಅಪಾಯವಿದೆ. ಸರಕಾರವು ಸಾಲ ತೆಗೆಯುವ ಪ್ರಕೃತ ಬಡ್ಡಿಯ ದರವು ಏರಿದರೆ ನಾವು ಈ ಒಂದೆ ತೆಗೆದುಕೊಂಡಿರುವ ಬಾಂಡಿನ ಬೆಲೆಯು ಇಳಿಯುವುದು. ಹೇಗೆಂದರೆ ರಾಮನು ೧೦೦ ರೂಪಾಯಿ ಕೊಟ್ಟು ೫ ರೂಪಾಯಿ ದರದ ಬಾಂಡು ಕೊಂಡಿದ್ದಾನೆ. ಎರಡು ವರ್ಷದ ಮೇಲೆ ಸರಕಾರವು ೬%ನಲ್ಲಿ ಸಾಲ ತಗೆದುಕೊಂಡರೆ ಅವನ ೧೦೦ ರೂಪಾಯಿ ಬಾಂಡಿನ ಬೆಲೆ ೧೦೦ × $\frac{೫}{೬}$ = ೮೩$\frac{೧}{೩}$ ರೂ. ಆದ ಹಾಗಲ್ಲವೆ? ರಾಮನು ಸರಕಾರಿ ಬಾಂಡಿಗೆ ಈಗ ನೂರು ರೂಪಾಯಿ ಕೊಟ್ಟಿದ್ದರೆ ೬ ರೂಪಾಯಿ ಸಿಗುತಿತ್ತು; ಅಥವಾ ಈಗ ೫ ರೂ. ಬರಲು ೮೩$\frac{೧}{೩}$ ರೂ. ಕೊಟ್ಟಿದ್ದರೆ ಸಾಕಾಗಿತ್ತು ಬಾಂಡಿನ ಮಾರ್ಕೆಟ್ ಧಾರಣೆಯು ದೀರ್ಘಾವಧಿಯ ಬಡ್ಡಿಯ ದರದ ದೆಸೆಯಿಂದ ಬದಲಾವಣೆ ಹೊಂದುವುದು.

(೨) ಷಯರುಗಳು. ಇಂಪೀರಿಯಲ್ ಕೆಮಿಕಲ್‌ನವರ ಷಯರುಗಳನ್ನು ಕೊಂಡರ ನಮಗೆ ಕಂಪೆನಿಯ ಲಾಭಾಂಶದಲ್ಲಿ ಪಾಲುಸಿಗುತ್ತದೆ. ಲಾಭಾಂಶವು ಚಂಚಲವಾದುದರಿಂದ ನಮ್ಮ ಷೆಯರಿನ ಪ್ರತಿಫಲವೂ ಚಂಚಲವಾಗಿರುವುದು. ಲಾಭಾಂಶವು ಬಾಂಡಿನ ಬಡ್ಡಿಗಿಂತ ಹೆಚ್ಚಾಗಬಹುದು, ಕಂಪೆನಿಗೆ ಲಾಭ ಕಡಿಮೆ ಆದಾಗ ಕಡಿಮೆಯಾಗಬಹುದು. ಅಪಾಯವೂ ನಷ್ಟಸಂಭವವೂ ಇರುವುದರಿಂದಲೇ ಈ ಬಗೆಯ ಚಾಂಚಲ್ಯವಿದೆ. ಇಲ್ಲವಾದರೆ ಲಾಭದ ದರವೂ, ಬಡ್ಡಿಯ ದರವೂ ಸಮಾನವಾಗುತ್ತಿದ್ದುವು.

**(೩) ಕಾಲಾವಧಿಯ ಸ್ಥಿರ ಬಡ್ಡಿಯ ಸೆಕ್ಯೂರಿಟಿಗಳಿಗೆ 'ಹುಂಡಿ' ಎನ್ನುವರು. ಖಜಾನೆ ಹುಂಡಿ ಈ ಬಗೆಯದು.**

(೪) ನಗದು: ನೂರು ರೂಪಾಯಿ ಸಾಲಕೊಟ್ಟವನು ಥಕ್ಕನೆ ನಗದು ತರುವುದು ಕಷ್ಟ. ಆದುದರಿಂದ ಕಿರುವಾಯಿದೆ ಬಡ್ಡಿ ಎಂದರೆ ಅವನು 'ನಗದು ಹಣ'ದ ಸೌಲಭ್ಯವನ್ನು ತ್ಯಜಿಸಿದ್ದಕ್ಕಾಗಿ ಅವನಿಗೆ ತೆರುವ ಹಣ ಎಂದಿಟ್ಟುಕೊಳ್ಳಬಹುದು. ಎಲ್ಲ ಜನರಲ್ಲಿಯೂ ಈ 'ದ್ರವ್ಯದೊಲವು' ಹೆಚ್ಚಿದರೆ ಕಿರುವಾಯಿದೆಬಡ್ಡಿ ಯದರವು ಏರುವುದು. 'ಹಣಕಾಸಿನ ಗಲಾಟೆ'ಯ ಸಮಯ ಜನರು ಕೇಳಿದ ನಗದನ್ನು ಅವರಿಗೆ ಕೊಟ್ಟು ತಮ್ಮ ದಿವಾಳಿತನವನ್ನು ಹೊರಗೆ ತೋರಿಸಬಾರದೆಂದು ವ್ಯಾಪಾರಿಗಳೂ, ಉದ್ದಿಮೆದಾರರೂ ಹಂಬಲಿಸುವುದರಿಂದ 'ದ್ರವ್ಯದೊಲವು' ಅತಿಶಯವಾಗಿ ಬಡ್ಡಿಯ ದರವು ಮೇಲಕ್ಕೆ ನೆಗೆಯುವುದು.

## ದ್ರವ್ಯದೊಲವು:

ಬಡ್ಡಿಯ ಆಧುನಿಕ ಮೀಮಾಂಸೆಯಲ್ಲಿ ಪದೇ ಪದೇ ನಾವು ಉಪಯೋಗಿಸಬೇಕಾದ 'ದ್ರವ್ಯದೊಲವು' ಎಂದರೇನೆಂದು ನಾವು ವಿವರವಾಗಿ ತಿಳಿಯಬೇಕು. ಬಾಂಡು, ಷೇರು, ಮುಂತಾದ ನಗದು ಅಲ್ಲದ ರೂಪಗಳಲ್ಲಿ ಬಂಡವಾಳವನ್ನು ನಾವು ಇಟ್ಟುಕೊಂಡಾಗ ನಮಗೆ ಸಿಗುವ ಹಣವು (ಬಡ್ಡಿ) ಒಂದು ಬಗೆಯ ಲಂಚ. ಸೆಕ್ಯೂರಿಟಿಯ ಧಾರಣೆಯು ಕಡಿಮೆಯಾಗಿದ್ದರೆ ಮಾತ್ರ ಬಂಡವಾಳವನ್ನು ನಾವು ಸೆಕ್ಯೂರಿಟಿ ಆಗಿ ಮಾರ್ಪಡಿಸಿಯೇವು ಒಂದು ಸೆಕ್ಯೂರಿಟಿಗೆ ನೂರು ರೂಪಾಯಿ ಕೊಟ್ಟಾಗ ನೂರೈದು ರೂಪಾಯಿ ಸಿಕ್ಕರೆ ಮಾತ್ರ ನಗದನ್ನು ಸೆಕ್ಯೂರಿಟಿ ಮಾಡಿದುದರ ಫಲ ಸಿಕ್ಕೀತು. ಬಡ್ಡಿಯು ಸೊನ್ನೆಯಾದರೆ ಎಲ್ಲರೂ ಸೆಕ್ಯೂರಿಟಿಯನ್ನು ಮಾರಲು ಯತ್ನಿಸುವರು. ಸೆಕ್ಯೂರಿಟಿಯ ಧಾರಣೆ ಇಳಿಯುವುದು; ಅಂದರೆ ಬಡ್ಡಿಯ ದರ ಏರುವುದು. ಬಂಡವಾಳವನ್ನು ಸೆಕ್ಯೂರಿಟಿಯ ರೂಪದಿಂದ ತೆಗೆದು ನಗದು ರೂಪಕ್ಕೆ ತರುವುದರಿಂದ ಲಾಭಸಿಗುವತನಕ ಬಡ್ಡಿಯ ದರವು ಏರುವುದು. ಆ ಮೇಲೊಂದು ನಿಶ್ಚಿತ ಬಿಂದುವಿನಲ್ಲಿ ಬಡ್ಡಿಯು ನಿಂತಾಗ ಮಾರಲು ಬಂದ ಸೆಕ್ಯೂರಿಟಿಯೂ (ಪೂರೈಕೆ) ಕೊಳ್ಳುವವರು ಅದನ್ನು ಬೇಡುವ ಸಂಖ್ಯೆಯೂ (ಬೇಡಿಕೆ) ಒಂದೇ ಆಗಿರುವುದೆಂದು ನಾವು ತಿಳಿಯಬೇಕು.

'ದ್ರವ್ಯದೊಲವಿ'ನಲ್ಲಿ ಏನಾದರೂ ಪರಿವರ್ತನೆಇದ್ದರೆ ಅದು ಕೂಡಲೇ ಸೆಕ್ಯೂರಿಟಿಯ ಧಾರಣೆಯಲ್ಲಿ ಪ್ರತಿಬಿಂಬಿಸುವುದು. ಜನರು ಸೆಕ್ಯೂರಿಟಿ




ಮಾರಲು ಕಾತರರಾದ ಪಕ್ಷಕ್ಕೆ, ಉಳಿದವರು ಅದನ್ನು ಕೊಳ್ಳುವುದಕ್ಕೆ ಕಡಿಮೆ ಕಾತರರಾಗಿರುತ್ತಾರೆ. ಸೆಕ್ಯೂರಿಟಿಯ ಬೇಡಿಕೆಯ ಕಮಾನು (ಎಡಕ್ಕೆ) ಬೀಳುವುದು. ಪೂರೈಕೆಯ ಕಮಾನು (ಬಲಕ್ಕೆ) ಏರುವುದು. ಆದುದರಿಂದ ಸೆಕ್ಯೂರಿಟಿಯ ಬೆಲೆ ಇಳಿಯುವುದು (NP ಯಿಂದ NQ ಗೆ) ಇದರರ್ಥ: ಬಡ್ಡಿಯ ದರವು ಏರುವುದು. ಏಕೆಂದರೆ, ಈಗ ನಗದಿಗೆ ಗಿರಾಕಿ ಹೆಚ್ಚು, ಸೆಕ್ಯೂರಿಟಿಗೆ ಕಡಿಮೆ. ಸೆಕ್ಯೂರಿಟಿ ಕೊಳ್ಳಬೇಕಾದರೆ "ಲಂಚ"ದ ಮೊಬಲಗನ್ನು ಹೆಚ್ಚಿಸಬೇಕು.

**ಕೀನ್ಸ್‌ನ ಬಡ್ಡಿಯ ಮೀಮಾಂಸೆ:**

ಬಂಡವಾಳದ ಪರಿಸರದ ಉತ್ಪಾದಕ ಶಕ್ತಿಯನ್ನು ತಿದ್ದಿ ಕೀನ್ಸ್

"ಬಂಡವಾಳದ ಪರಿಸರದ ಸಾಮರ್ಥ್ಯ"ವೆಂಬ ಪದವನ್ನು ರಚಿಸಿಕೊಂಡನು. ಬಡ್ಡಿಯ ದರವು ವರ್ತಮಾನದಲ್ಲಿ ಸಾಲದ ಮೊತ್ತಗಳನ್ನು ಪೂರೈಕೆಮಾಡುವ ಧಾರಣೆಯನ್ನು ನಿರ್ಣಯಿಸುವುದಾದರೆ ಬಡ್ಡಿಯದರವನ್ನು ಯಾವುದು ನಿರ್ಣಯಿಸುವುದು? ಎಂದು ಕೇನ್ಸ್ ತನ್ನನ್ನು ತಾನೇ ಪ್ರಶ್ನಿಸಿಕೊಂಡನು.

ಜನರ 'ದ್ರವ್ಯದೊಲವು' ಬಡ್ಡಿಯನ್ನು ನಿರ್ಣಯಿಸುತ್ತದೆ ಎಂಬುದು ಕೇನ್ಸನ ವಾದ. ಕೇನ್ಸ್ ಮೀಮಾಂಸೆಯಲ್ಲಿ 'ದ್ರವ್ಯದೊಲವಿ'ಗೆ ಬಹಳ ಮಹತ್ತ್ವವಿದೆ. ಅನುಭೋಗಿಸುವ ಪ್ರವೃತ್ತಿಯಿಂದಲೂ, 'ದ್ರವ್ಯದೊಲವಿ'ನ ಕ್ರಿಯೆಯಿಂದಲೂ ವ್ಯಕ್ತಿಯ ಉಳಿತಾಯದ ಪರಿಮಾಣವು ನಿರ್ಣೀತವಾಗುವುದು. ಅನುಭೋಗಿಸುವ ಪ್ರವೃತ್ತಿಯು (೧) ವ್ಯಕ್ತಿಯ ವಾಸ್ತವಿಕ ವರಮಾನದ ಬದಲಾವಣೆ (೨) ಅವನ ನಿವ್ವಳ ವರಮಾನ (ಇದು ಸ್ಥಿರವಾಗಿರುವುದು ವಾಡಿಕೆ)ದ ಬದಲಾವಣೆ (೩) ಅವನ ಬಂಡವಾಳದ ಮೌಲ್ಯದಲ್ಲಿ ಅನಿರೀಕ್ಷಿತವಾಗಿ ಉಂಟಾದ ಬದಲಾವಣೆ (೪) ತೆರಿಗೆಯ ಬದಲಾವಣೆ (೫) ವರ್ತಮಾನ ಹಾಗೂ ಭವಿಷ್ಯತ್ತಿನ ವರಮಾನ ಮಟ್ಟದ ಪ್ರತೀಕ್ಷೆಗಳಿಗಿರುವ ಪರಸ್ಪರ ಸಂಬಂಧ- ಇವುಗಳನ್ನು ಅವಲಂಬಿಸಿವೆ. ಆದರೂ ಅನುಭೋಗ ಪ್ರವೃತ್ತಿಯು ಇದ್ದಲ್ಲೇ ಅಂಟಿಕೊಂಡಿರುವುದು ಹೆಚ್ಚು. ಏಕೆಂದರೆ ಸಮಾಜದ ವಾಸ್ತವಿಕ ವರಮಾನವನ್ನು ಹೆಚ್ಚಿಸಿದ ಪರಿಮಾಣದಲ್ಲಿಯೇ ಅನುಭೋಗವು ಹೆಚ್ಚುವುದಿಲ್ಲ. ಮುಂಬರುವ ಅನಿರೀಕ್ಷಿತ ವೆಚ್ಚಕ್ಕೆ ಈಗಿನ ಉಳಿತಾಯವು ಎಷ್ಟು ಸಹಾಯಮಾಡೀತು? ಕುಟುಂಬದ ವೆಚ್ಚ ಎಷ್ಟು ಏರೀತು? ಎಂದು ಮೊದಲಾದ ಕೆಲವು ವ್ಯಕ್ತಿಗತ ಕಾರಣಗಳನ್ನು ಹೊಂದಿಕೊಂಡು ಅನುಭೋಗವು ನಡೆಯುವುದು. ಯಾವುದೋ ಒಂದು ವರಮಾನದ ಮಟ್ಟದಲ್ಲಿರುವ ಅನುಭೋಗ ಪ್ರವೃತ್ತಿಯಿಂದ ಸಮಾಜದ ಒಟ್ಟು ಅನುಭೋಗವು ಬದಲಾವಣೆ ಹೊಂದುವುದಿಲ್ಲವೆಂದೂ, ವಾಸ್ತವಿಕ ವರಮಾನದ ಬದಲಾವಣೆಯು ಸಮಾಜದ ಅನುಭೋಗದಲ್ಲಿ ಬದಲಾವಣೆಗಳನ್ನು ತರುವುದೆಂದೂ ಹೇಳಬಹುದು. ಎರಡನೆಯದಾಗಿ, ಭವಿಷ್ಯದ ಅನುಭೋಗವನ್ನು ಯಾವಬಗೆಯಾಗಿ ಸ್ವಾಧೀನದಲ್ಲಿಟ್ಟುಕೊಳ್ಳಬೇಕು?—ಶೀಘ್ರ ಪರಿವರ್ತನೆಯಾಗಬಲ್ಲ ಆಸ್ತಿ(ನಗದು)ಯಲ್ಲೆಷ್ಟು? ಇನ್ವೆಸ್ಟ್‌ಮಾಡುವುದೆಷ್ಟು?

'ದ ವ'ನಾಗಲು ವ್ಯಕ್ತಿ ಇಚ್ಛಿಸುವುದು ವ್ಯವಹಾರ, ಮುಂಜಾಗ್ರತೆ, ಸಟ್ಟ.

ಗಳೆಂಬ ಮೂರು ಉದ್ದೇಶಗಳಿಂದ ಎಂಬುದು ಕೇನ್ಸನ ವಾದ ಈ ಮೂರರಲ್ಲಿ ವ್ಯಕ್ತಿಯು ತನ್ನ ವರಮಾನವನ್ನು ಹೇಗೆ ಹಂಚಿಹಾಕುವನೋ ಅದು ಅವನ "ದ್ರವ್ಯದೊಲವು." ಸಮಾಜಕ್ಕೆ ಬೇಕಾಗಿರುವ ಹಣದ ಪರಿಮಾಣವನ್ನು ಸಮಾಜದ "ದ್ರವ್ಯದೊಲವಿ"ನಿಂದ ತಿಳಿಯಬಹುದು. ಬಡ್ಡಿಯು ಉಳಿತಾಯಕ್ಕೋ, ಕಾದದ್ದಕ್ಕೋ ಬರುವ ಪ್ರತಿಫಲವಲ್ಲ. ಏಕೆಂದರೆ ಅನುಭೋಗವನ್ನು ತ್ಯಜಿಸಿದ್ದರಿಂದ ಮಾತ್ರವೇ ಬಡ್ಡಿ ಹೆಚ್ಚುವುದಿಲ್ಲ. ನಿರ್ದಿಷ್ಟ ಕಾಲಾವಧಿಗೆ ನಮ್ಮ ದ್ರವ್ಯದೊಲವನ್ನು ಇನ್ನೊಬ್ಬನ ಕೈಯಲ್ಲಿಡುವುದಕ್ಕೆ ದೊರೆಯುವ ಪ್ರತಿಫಲವು ಬಡ್ಡಿ. ಬಡ್ಡಿಯು ಜನರ ದ್ರವ್ಯದೊಲವನ್ನು ನಿಷ್ಕರ್ಷಿಸುವುದು

ನಮ್ಮ ಮೂಲ ಸಂಪತ್ತನ್ನು ನಗದಾಗಿ ಹಿಡಿದುಕೊಳ್ಳುವ ಅಭಿಲಾಷೆಯನ್ನು ಇರುವ ನಗದಿನ ಮೊತ್ತದೊಡನೆ ಸಮೀಕರಿಸುವ ಧಾರಣೆಯು ಬಡ್ಡಿಯ ಒಂದು ನಿರ್ಣಾಯಕವಾದರೆ ಹಣದ ಪರಿಮಾಣವು ಇನ್ನೊಂದು ನಿರ್ಣಾಯಕವು ಎಂದಾಯಿತು. ಸಮಾಜವು ಉಪಯೋಗಿಸುವ 'ದ್ರವ್ಯ' ಹಣದ ಮೊತ್ತವನ್ನು ನಿರ್ಣಯಿಸಬೇಕಾದರೆ, ದೊರೆಯುವ ಹಣದ ಮೊತ್ತದ ಕಡೆಗೆ ನಾವು ದೃಷ್ಟಿ ಹರಿಯಿಸಬೇಕು. ದ್ರವ್ಯವಾಗಿರುವ ಹಣದ ಮೊತ್ತವು ಜನರ 'ದ್ರವ್ಯದೊಲವನ್ನು' ಅವಲಂಬಿಸಿರುವುದು. ದ್ರವ್ಯದೊಲವು ಬಡ್ಡಿಯ ದರದ ಒಂದು ಕ್ರಿಯೆಯಾದುದರಿಂದ

M = ಹಣದ ಪರಿಮಾಣ, ಮೊತ್ತ.
L = ದ್ರವ್ಯದೊಲವಿನ ಕ್ರಿಯೆ
r = ಬಡ್ಡಿಯ ದರ—ಹಾಗಾದರೆ

$$M = L(r)$$

ಇದರಲ್ಲಿ M ನಲ್ಲಿ $M_1$ $M_2$ ಎಂದು ಎರಡು ವಿಧ. $M_1$ ವ್ಯವಹಾರ ಮತ್ತು ಮುಂಜಾಗ್ರತೆಯ ದೆಸೆಯಿಂದ ಇಟ್ಟುಕೊಳ್ಳುವ ದ್ರವ್ಯ; $M_2$ ಸಟ್ಟ ಉದ್ದೇಶದಿಂದ ಇರಿಸಿಕೊಳ್ಳುವಂತಹುದು. $M_1$ಗೂ ಬಡ್ಡಿಯ ದರಕ್ಕೂ ಪ್ರತ್ಯಕ್ಷ ಸಂಬಂಧವಿಲ್ಲ, ವರಮಾನದ ಮಟ್ಟದ ಮೂಲಕವಾಗಿ ಪರೋಕ್ಷವಾದ ಸಂಬಂಧ ಮಾತ್ರ. ವರಮಾನದ ಮಟ್ಟವು ಬಡ್ಡಿ

ಯ ದರದಿಂದಲೂ, ಬಂಡವಾಳದ ಪರಿಸರ–ಸಾಮರ್ಥ್ಯದಿಂದಲೂ ನಿರ್ಣಯಿಸಲ್ಪಡುವುದು.

ಆದುದರಿಂದ $M_1 = L_1 (y)$. ಇಲ್ಲಿ y ಎಂದರೆ ವರಮಾನದ ಮಟ್ಟ.

ಬಡ್ಡಿಯ ದರದ ಬದಲಾವಣೆಯು $M_1$ ನ ಮೇಲೆ ಪರಿಣಾಮ ಮಾಡುವುದು ಅಪ್ರತ್ಯಕ್ಷವಾಗಿ—ಇನ್ವೆಸ್ಟ್‌ಮೆಂಟ್ ಮೂಲಕವಾಗಿ. M (ಹಣದ ಮೊತ್ತ) ಬೆಳೆದ ಹಾಗೆ, ಬಡ್ಡಿಯ ದರವು ಸಾಮಾನ್ಯವಾಗಿ ಇಳಿಯುವುದು. ವ್ಯವಹಾರ ಮುಂಜಾಗ್ರತೆಗಳ ಉದ್ದೇಶಕ್ಕಾಗಿ ಇರಿಸಿಕೊಳ್ಳುವ ಹಣದ ಪರಿಮಾಣವು ಈಗ ಅಧಿಕವಾಗುವುದು. ಏಕೆಂದರೆ ಒಂದನೆಯದಾಗಿ, ವರಮಾನವು ಹೆಚ್ಚಿತು. ಎರಡನೆಯದಾಗಿ, ಬಡ್ಡಿಯೇ ಇಳಿದಿರುವುದರಿಂದ 'ದ್ರವ್ಯದೊಲವಿ'ನ ವೆಚ್ಚವೂ ಇಳಿಯಿತು.

ಸಟ್ಟಾ ಧ್ಯೇಯದಿಂದ ಇಟ್ಟುಕೊಳ್ಳುವ ಹಣದಪರಿಮಾಣವು ಬಡ್ಡಿಯ ದರಕ್ಕೆ ಪ್ರತ್ಯಕ್ಷವಾಗಿ ಸಂಬಂಧಿಸಿರುವುದರಿಂದ—$L_2 (r)$—ಜನರು ಬೇರೆ ಬೇರೆ ಬಡ್ಡಿಯ ದರದಲ್ಲಿ ಬೇರೆ ಬೇರೆ ಮೊತ್ತಗಳನ್ನು ಇಟ್ಟುಕೊಳ್ಳುವರು. ಬಡ್ಡಿಯ ದರವು ಕಡಿಮೆಯಾದಷ್ಟು, ಈ ಬಾಬತಿನ ಹಣವು ಹೆಚ್ಚಾಗುವುದು. $M_2$ಗೆ ಬೇಕಾದಷ್ಟು ಪರಿಮಾಣದಲ್ಲಿ ಹಣದ ಮೊತ್ತವು ಹೆಚ್ಚಿದ ಪಕ್ಷಕ್ಕೆ, ಬಡ್ಡಿಯ ದರವು ಬೀಳುವುದು ಖಂಡಿತ. ಆದುದರಿಂದ ಹಣದ ಪೂರೈಕೆಯನ್ನು ಬದಲಾಯಿಸಿ ಬಡ್ಡಿಯ ದರದಲ್ಲಿ ವ್ಯತ್ಯಾಸಗಳನ್ನು ತರಬಹುದು.

ಹಣದ ಪೂರೈಕೆಯು ಎಷ್ಟು ಬದಲಾವಣೆಯಾಗಬೇಕು? $M_1$ ಮತ್ತು $M_2$ನ್ನು ಜೋಡಿಸಿರುವ Mನ್ನು ನಿಶ್ಚಿತ ಪರಿಮಾಣವಾಗಿ ಸ್ವೀಕರಿಸಿದಲ್ಲಿ ಬಡ್ಡಿಯ ದರ ಹೇಗಿರಬೇಕೆಂದರೆ, $M_1$ಕ್ಕೆ ಇಟ್ಟಿರುವ ಹಣವು, ಜನರು ಬೇಕೆಂದು ಹೇಳುವಷ್ಟು $M_2$ನ್ನೂ ಒದಗಿಸುವಂತಾಗ ಬೇಕು. $M_2$ಕ್ಕೆ ಸಿಗುವ ಹಣವು ಇದಕ್ಕಿಂತ ಭಿನ್ನವಾದರೆ, ಇವೆರಡೂ ಸಮವಾಗುವ ತನಕ ಬಡ್ಡಿಯ ದರವು ವ್ಯತ್ಯಾಸವಾಗುವುದು. $M_1$ ಧ್ರುವ (+) ವಾಗ ಬೇಕಾದರೆ ಬಡ್ಡಿಯ ದರವು ಪೂರ್ಣೋದ್ಯಮಕ್ಕೆ ಅನುಕೂಲವಾಗಿರತಕ್ಕದು. $M_2$ ಧ್ರುವ ಆಗಬೇಕಿದ್ದರೆ ಭವಿಷ್ಯದ ಬಗೆ ಅನಿಶ್ಚಯಗಳು ಕಮ್ಮಿಯಾಗ

ತಕ್ಕುದು. ಪೂರ್ಣೋದ್ಯಮದ ಸ್ಥಿತಿಯನ್ನು ತಲುಪಲು ಬಡ್ಡಿಯ ದರವು ಕಡಿಮೆಯಾಗಿರಬೇಕು.

## ಸಂಪದಭಿವೃದ್ಧಿಗೆ ಬೇಕಾದ ಬಡ್ಡಿ:

ಮುಂದುವರಿದ ರಾಷ್ಟ್ರಗಳಲ್ಲಿ ಉತ್ಪಾದನೆಯ ಒಂದೊಂದು ದಿಶೆಯಲ್ಲಿಯೂ ಬೇಕಷ್ಟು ಇನ್ವೆಸ್ಟ್‌ಮೆಂಟು ಈಗಾಗಲೇ ಆಗಿರುವುದರಿಂದ ಬಂಡವಾಳಕ್ಕೆ ದೊರೆಯುವ ಬಡ್ಡಿಯು ಕಡಿಮೆ. ಅಲ್ಲಿ ಬಡ್ಡಿಯಲ್ಲಿ ಬದಲಾವಣೆಗಳಾಗಲು ಹಣದ ಪರಿಮಾಣವು ಹೆಚ್ಚು ಕಡಿಮೆಯಾಗುವುದೇ ಕಾರಣ. ಜನಸಂಖ್ಯೆಯು ಅತಿಯಾಗಿರುವ, ಬೆಳೆವಣಿಗೆಯಲ್ಲಿ ಹಿಂದೆ ಬಿದ್ದ, ಹಿಂದುಳಿದ ರಾಷ್ಟ್ರಗಳಲ್ಲಿ ಬಡ್ಡಿಯ ದರವು ಶ್ರೀಮಂತ ರಾಷ್ಟ್ರಗಳಲ್ಲಿರುವುದಕ್ಕಿಂತ ಹೆಚ್ಚು. ಹಿಂದುಳಿದ ರಾಷ್ಟ್ರಗಳಲ್ಲಿ ಹಣವಲ್ಲದೆ ಇತರ ಎಷ್ಟೋ ವಸ್ತುಪರ ಶಕ್ತಿಗಳು ಬಡ್ಡಿಯ ಮೇಲೆ ಪರಿಣಾಮ ಮಾಡುವುವು. ಇಂಡೊನೇಶಿಯದಲ್ಲಿ ಬಂಡವಾಳದ ಪರಿಸರದ ಉತ್ಪಾದಕ ಶಕ್ತಿಯು ಹೆಚ್ಚಾಗಿರಲು, ಅಲ್ಲಿ ಅದರ ಪೂರೈಕೆಯು ವಿರಳವಾಗಿರುವುದೇ ಕಾರಣ. ಒಂದು ದೃಷ್ಟಿಯಿಂದ ಈ ರಾಷ್ಟ್ರಗಳಲ್ಲಿ ಬಡ್ಡಿಯ ದರವು ಏರಿಕೆಯಲ್ಲಿರುವುದೊ ಒಳ್ಳೆಯದೇ. ಇವುಗಳ ಆರ್ಥಿಕೋನ್ನತಿಗೆ ಅತ್ಯಾವಶ್ಯಕವಾದ ಬಂಡವಾಳವು ಮುಂಬರಿದ ರಾಷ್ಟ್ರಗಳಿಂದ ಸಂಚಲಿಸುವುದಕ್ಕೆ ಬಡ್ಡಿಯು ಆಕರ್ಷಕವಾಗಿದ್ದರೆ ಒಳ್ಳೆಯದು.

## ಹದಿಮೂರನೆಯ ಅಧ್ಯಾಯ

# ನಿರುದ್ಯೋಗ ಮತ್ತು ಪೂರ್ಣೋದ್ಯೋಗ

### ನಿರುದ್ಯೋಗ:

ಪ್ರಪಂಚದ ಎಲ್ಲ ರಾಷ್ಟ್ರಗಳ ಜನರೂ ಒಂದಲ್ಲ ಒಂದು ಉದ್ಯಮದಲ್ಲಿ ನಿರತರಾಗಿದ್ದು ರಾಷ್ಟ್ರದ ಉತ್ಪಾದನೆಯನ್ನು ಹೆಚ್ಚಿಸುವುದರಲ್ಲಿ ಭಾಗಿಗಳಾಗುವರು. ಆದರೆ 'ಉದ್ಯೋಗಂ ಪುರುಷ ಲಕ್ಷಣಂ' ಎಂಬ ಮಾತನ್ನು ಅಕ್ಷರಶಃ ಪಾಲಿಸಬೇಕೆಂದು ಮನಸ್ಸುಳ್ಳವರಿಗೂ ಒಮ್ಮೊಮ್ಮೆ ತಿಂಗಳುಗಟ್ಟಲೆ, ವರ್ಷಗಟ್ಟಲೆ ಉದ್ಯೋಗವು ದೊರೆಯದೆ ಇರುವುದುಂಟು. ನಮ್ಮ ಭಾರತೀಯ ರೈತನು ವರ್ಷದಲ್ಲಿ ಆರು ತಿಂಗಳು ಉದ್ಯೋಗಶೂರನಾಗಿದ್ದು ಮತ್ತಿನ ಆರು ತಿಂಗಳು ನಿರುದ್ಯೋಗಿಯಾಗಿ ವ್ಯರ್ಥ ಕಾಲ ಹರಣ ಮಾಡುವನು ಪಡುವಣದ ಔದ್ಯೋಗಿಕ ರಾಷ್ಟ್ರಗಳಲ್ಲಿ ಕಾಲ ಕಾಲಕ್ಕೆ -ಎಂಟು ಹತ್ತು ವರ್ಷಗಳಿಗೊಮ್ಮೆ- ಮಿಲಿಯಾಂತರ ಜನರು ಕೆಲಸವಿಲ್ಲದೆ ನಿರುದ್ಯೋಗಿಗಳಾಗುವರು. ಇಂಥ ಸಾರ್ವತ್ರಿಕ ನಿರುದ್ಯೋಗಕ್ಕೆ ಕಾರಣವೇನು? ಇದನ್ನು ನಿವಾರಿಸುವ ಉಪಾಯ ಯಾವುದು? ಎಂಬುದು ಅರ್ಥಶಾಸ್ತ್ರದಲ್ಲಿ ಅನೇಕ ವಾದ ವಿವಾದಗಳಿಗೆ ಎಡೆಕೊಟ್ಟ ಪ್ರಶ್ನೆಯಾಗಿದೆ. ಆರ್ಥಿಕ ಮುಗ್ಗಟ್ಟಿನ ಸಮಯ ಸಂಚಾಲಕರಿಗೆ ದೊರೆಯುವ ಲಾಭವು ಕಡಿಮೆಯಾಗುವುದು; ಆಗ ಅವರು ಕೂಲಿಯನ್ನು ಕಮ್ಮಿ ಮಾಡಿಯಾದರೂ ತಮ್ಮ ಲಾಭವನ್ನು ಹೆಚ್ಚಿಸಲು ಯತ್ನಿಸುವರು ಕೂಲಿಕಾರರು ಕೂಲಿಯ ಕಡಿತವನ್ನು ತೀವ್ರವಾಗಿ ವಿರೋಧಿಸುವರು ಈ ಆನೆ-ಮೊಸಳೆ ಕಾದಾಟದಲ್ಲಿ ಕೂಲಿಕಾರರು ಯಶಸ್ವಿಗಳಾದರೆ ಅವರಲ್ಲೇ ಕೆಲವು ಜನ ಕೆಲಸ ಬಿಟ್ಟು ಹೊರಡದೆ ಉಪಾಯವಿಲ್ಲ ಏಕೆಂದರೆ ಉದ್ದಿಮೆದಾರರು ಹಿಂದಿನ ಕೂಲಿಯಲ್ಲಿ ಎಲ್ಲ ಕೂಲಿಕಾರರಿಗೂ ಉದ್ಯೋಗ ಕೊಟ್ಟು ಉದ್ಯಮವನ್ನು ಮುನ್ನಡೆಸಲಾರರು ಸಂಚಾಲಕರಿಗೆ ಜಯಲಕ್ಷ್ಮಿ ಒಲಿದಳೋ ಆಗ ಕೂಲಿ ಕಡಮೆಯಾಗಿದ್ದರೂ ಹೆಚ್ಚು ಜನರಿಗೆ ಉದ್ಯೋಗ ದೊರೆಯುವುದು. ಕೂಲಿಗೂ ಉದ್ಯೋಗದ ಸಮಸ್ಯೆಗೂ ಇರುವ ಹತ್ತಿರದ ಸಂಬಂಧ ಇಂಥ

ಉತ್ಕಟಕಾಲಗಳಲ್ಲಿ ಚೆನ್ನಾಗಿ ವ್ಯಕ್ತವಾಗುವುದು. ಆರ್ಥಿಕ ಮುಗ್ಗಟ್ಟು ವಿಷಮವಾದರೆ ಹೆಚ್ಚು ಹೆಚ್ಚು ಜನ ನಿರುದ್ಯೋಗಿಗಳ ಕೂಟಕ್ಕೆ ಭರ್ತಿಯಾಗುವರು

**ನಿರುದ್ಯೋಗದ ಬಗೆಗಳು:**

ಅರ್ಥಶಾಸ್ತ್ರಿಗಳು ಕೂಲಿಯ ಮೇಲೆ ಪರಿಣಾಮ ಮಾಡದ 'ನಿರುದ್ಯೋಗ'ಗಳ ಪೈಕಿ ನಾಲ್ಕನ್ನು ಗುರುತಿಸಿರುವರು:

(೧) ಅಂಗಹೀನರು, ರೋಗಿಗಳು, ಬೆಪ್ಪುತಕ್ಕಡಿಗಳು, ತಿರುಕುಳಿಗಳು, ಭಾರತೀಯ ಬೈರಾಗಿಗಳು ಇವರ ನಿರುದ್ಯೋಗವನ್ನು ನಾವು ಗಣನೆಗೆ ತಾರದಿದ್ದರೂ ಉದ್ಯೋಗ ಸಂಪಾದಿಸುವ ಸಾಮರ್ಥ್ಯ ಇಲ್ಲದ ಇನ್ನೂ ಅನೇಕರು ಇರುತ್ತಾರೆ ಅಂಥವರ ಸ್ವಭಾವದಲ್ಲಿ ಸೋಮಾರಿತನವೋ, ಠಕ್ಕುರವುಳಿಯೋ, ಮುಂಗೋಪವೋ ಅತಿಯಾಗಿ ಸೇರಿರಬೇಕು ಅವರನ್ನು ಕೆಲಸಕ್ಕೆ ಹಚ್ಚಿದರೆ ಸುಖವಿಲ್ಲ ಕಡಮೆ ಕೂಲಿಕೊಟ್ಟರೆ ಅವರು ಕೇಳುವುದಿಲ್ಲ; ಹೆಚ್ಚು ಕೂಲಿ ಕೊಡುವುದರ ಬದಲು ಅವರನ್ನು ಹೊರದಬ್ಬುವುದು ಒಳ್ಳೆಯದು— ಇಂತು ಎರಡು ರೀತಿಯಲ್ಲಿಯೂ ಅವರಿಗೆ ನಿರುದ್ಯೋಗವು ಕಟ್ಟಿಟ್ಟ ಗಂಟಾಗುವುದು ಇಂಥ ನಿರುದ್ಯೋಗವನ್ನು ಹೋಗಲಾಡಿಸಲು ಜನರ ಗುಣನಡತೆಯನ್ನು ತಿದ್ದಬೇಕು. ಬೆಪ್ಪುತಕ್ಕಡಿಗಳು ಹೆಚ್ಚಾಗಿ ಜನಿಸದ ಹಾಗೆ ನಿರೋಧಕ ಕಾರ್ಯಕ್ರಮವನ್ನು ಕೈಗೊಳ್ಳಬೇಕು ಎಂದು ಬೆವರಿಜ್ ಹೇಳಿರುವನು ಜನರ ಗುಣಶೀಲಗಳನ್ನು ತಿದ್ದುವುದು ದುಸ್ಸಾಧ್ಯವಾದ ಕಸುಬಾದ್ದರಿಂದಲೂ, ಕೂಲಿಕಾರರ ವಸತಿ ಹಾಗೂ ಕೆಲಸ ಮಾಡುವ ಜಾಗಗಳನ್ನು ಸುಸ್ಥಿತಿಯಲ್ಲಿರಿಸಿದರೆ ಸೋಮಾರಿತನದಂಥ ಕೆಡುಕುಗಳು ಮಾಯವಾಗಬಹುದಾದ್ದರಿಂದಲೂ, ಅಲ್ಲದೆ ನಿರುದ್ಯೋಗದ ಕಡೆಗೆ ಸ್ವಭಾವಜನ್ಯವಾದ ಒಲವುಳ್ಳವರು ಸಮಾಜದಲ್ಲಿ ಅಲ್ಪಸಂಖ್ಯಾಕರಾದ್ದರಿಂದಲೂ, ಇಂಥ ನಿರುದ್ಯೋಗದಿಂದ ವಿಶೇಷ ಹಾನಿಯಾಗುವುದಿಲ್ಲ, ಆದರೂ ಭಾರತದಲ್ಲಿರುವ ಸುಮಾರು ನಾಲ್ಕುಕೋಟಿ ಬೈರಾಗಿಗಳಿಗೆ ದಿನಕ್ಕೆ ನಾಲ್ಕಾರು ತಾಸು ಹತ್ತಿ ನೂಲುವುದನ್ನು ಕಡ್ಡಾಯವಾಗಿ ವಿಧಿಸಿದ ಪಕ್ಷಕ್ಕೆ ದೇಶದ ಬಟ್ಟೆಯ ಉತ್ಪಾದನೆ ಎಷ್ಟೋ ಹೆಚ್ಚಾಗುವುದರಲ್ಲಿ ಸಂದೇಹವಿಲ್ಲ.

**(೨) ತಟಸ್ಥ ನಿರುದ್ಯೋಗ:** ಯೋಗ್ಯವಾದ ಕೂಲಿ ಸಂಪಾದಿಸುವ ತ್ರಾಣವಿದ್ದರೂ ಏನೋ ಕೆಲವು ಕಾರಣಗಳಿಂದ ಕೆಲಸ ಸಿಗದಿರುವವರನ್ನು ಈ ಸಾಲಿಗೆ ಸೇರಿಸುವರು. ಬಂಡವಾಳಗಾರ ಸಮಾಜಕ್ಕೆ ತಟಸ್ಥ ನಿರುದ್ಯೋಗವು ತಪ್ಪಿದುದಲ್ಲ. ಬಂಡವಾಳಗಾರ ರಾಷ್ಟ್ರದ ಉದ್ಯಮಗಳನ್ನು ಸಮಗ್ರವಾಗಿ ನೋಡುವಾಗ ಅವು ತಟಸ್ಥವಾಗಿವೆ ಎಂದು ಕಂಡುಬಂದರೂ, ಒಂದಲ್ಲ ಒಂದು ಫರ್ಮು ದೊಡ್ಡದಾಗುವುದೂ, ಇನ್ನೊಂದು ಚಿಕ್ಕದಾಗುವುದೂ, ಮಗುದೊಂದು ದಿವಾಳಿತೆಗೆಯುವುದೂ ಸದಾಕಾಲ ಜರಗುತಿರುವುದು. ಎಲ್ಲ ಉದ್ಯಮಗಳ ಪರಿಪೂರ್ಣ ತಿಳಿವಳಿಕೆ ಇಲ್ಲದಿರುವುದರಿಂದ ಒಂದು ಉದ್ಯಮದಿಂದ ಇನ್ನೊಂದಕ್ಕೆ ಸಂಚಲಿಸುವ ನಡುಗಾಲದಲ್ಲಿ ಕೆಲ ಮಂದಿ ಕೂಲಿಕಾರರು ಅನಿವಾರ್ಯವಾಗಿ ನಿರುದ್ಯೋಗಕ್ಕೆ ತುತ್ತಾಗುವರು ಇಂಥ ನಿರುದ್ಯೋಗವನ್ನು ಸಂಪೂರ್ಣವಾಗಿ ನಾಶಮಾಡುವುದು ಬಂಡವಾಳಗಾರ ಸಮಾಜದಲ್ಲಂತೂ ಸಾಧ್ಯವಿಲ್ಲ. ಎಂಪ್ಲೊಯ್‌ಮೆಂಟ್ ಎಕ್ಸ್‌ಛೇಂಜುಗಳೂ, ಯೋಜನೆಗಳೂ ತಟಸ್ಥ ನಿರುದ್ಯೋಗವನ್ನು ಕಡಮೆ ಮಾಡಲು ಯತ್ನಿಸುವುವು.

**(೩) ಸ್ವಯಂಪ್ರೇರಿತ ನಿರುದ್ಯೋಗ:** ಕೂಲಿಕಾರರು ಹೆಚ್ಚು ಕೂಲಿ ಸಿಗುವ ಕೆಲಸಕ್ಕೆ ಸೇರುವ ಆಸೆಯಿಂದ ಈಗಿರುವ ಕೆಲಸವನ್ನು ಸ್ವಬುದ್ಧಿಯಿಂದ ಬಿಟ್ಟುಗೊಟ್ಟರೆ 'ಸ್ವಯಂಪ್ರೇರಿತ ನಿರುದ್ಯೋಗವು' ಉಂಟಾಗುವುದು.

**(೪) ಅನಿಯುತ ನಿರುದ್ಯೋಗ:** ವ್ಯಾಪಾರ ವಹಿವಾಟು ಚೆನ್ನಾಗಿ ನಡೆಯುವಾಗಲೂ ಔದ್ಯಮಿಕ ರಾಷ್ಟ್ರಗಳಲ್ಲಿ ನೂರಕ್ಕೆ ಮೂರರಷ್ಟು ಜನ ನಿರುದ್ಯೋಗಿಗಳಾಗಿರುವರಂತೆ. ಇದು ಅನಿವಾರ್ಯವಾದುದು. ಲಂಡನಿನ ಕಟ್ಟುಗಾರರನ್ನು (ಡಾಕ್ ಕೆಲಸದವರು) ತೆಗೆದುಕೊಂಡರೆ ಲಂಡನಿನ ರೇವಿಗೆ ಹೆಚ್ಚು ಹಡಗ ಬಂದಾಗ ಎಲ್ಲರಿಗೂ ಉದ್ಯೋಗ ಲಭಿಸಬಹುದು, ಕಡಮೆ ಬಂದರೆ ಕೆಲವರು ನಿರುದ್ಯೋಗಿಗಳಾಗುವರು. ರೇವಿನಲ್ಲಿ ಹೊರೆ ಹೊರುವ ಈ ಉದ್ಯೋಗದಲ್ಲಿ ಏರಿಳಿತಗಳು ಇರುವುದರಿಂದ ಬೇಕಾದುದಕ್ಕಿಂತ ಹೆಚ್ಚು ಜನ ಕಾದುಕೊಂಡಿರಬೇಕಾಗುವುದು. ಇಲ್ಲಿ ನಿರುದ್ಯೋಗವು ಅಶಿಕ್ಷಿತವಾಗಿರುವುದು.

## ಉದ್ಯೋಗದ ಪ್ರಶ್ನೆ ಬರುವುದೆಲ್ಲಿ?

ಮೇಲೆ ಹೇಳಿದ ನಾಲ್ಕು ಬಗೆಯ ನಿರುದ್ಯೋಗಗಳೂ ನಮ್ಮ ಚರ್ಚೆಗೆ ಹೊರಗಾದುವು ನಿರುದ್ಯೋಗಗಳ ಪೈಕಿ 'ಆವರ್ತಮಯ' ನಿರುದ್ಯೋಗದ ಪ್ರಶ್ನೆ ಗಂಭೀರವಾದುದು, ಜಿಡುಕಾದುದು ಇದು 'ಸ್ವಯಂ ಪ್ರೇರಿತವಲ್ಲದ ನಿರುದ್ಯೋಗ'. ಇದರ ವಿಷಯವಾಗಿ ಎರಡು ಪರಸ್ಪರ ವಿರೋಧವುಳ್ಳ ಅಭಿಪ್ರಾಯಗಳಿವೆ ಪ್ರಾಚೀನ ಪಂಥದವರ ವಾದವು ಹೀಗಿದೆ:– ರಾಷ್ಟ್ರವು ಆರ್ಥಿಕ ವ್ಯವಸ್ಥೆಯಲ್ಲಿ ಹಸ್ತಕ್ಷೇಪ ಮಾಡುವುದಿಲ್ಲವೆಂಬುದನ್ನು ಪೂರ್ವಭಾವಿಯಾಗಿ ಇಟ್ಟುಕೊಂಡರೆ, ಮಾತ್ರವಲ್ಲದೆ ಅಧಿಕಾರ ವ್ಯವಸ್ಥೆಯಲ್ಲಿ ಬೇರೆ ಬಿರುಸುತನಗಳೂ ಇಲ್ಲವೆಂದು ತಿಳಿದರೆ, ಸಮತೋಲ ಸನ್ನಿವೇಶದಲ್ಲಿ ನಿರುದ್ಯೋಗವು ಶಕ್ಯವಿಲ್ಲ. ನಿರುದ್ಯೋಗಿಗಳು ಕಡಿಮೆಕೂಲಿಯಲ್ಲಿ ಕೆಲಸ ಮಾಡಲೊಪ್ಪಿದರೆ, ಕೂಡಲೇ ಅವರು ಉದ್ಯೋಗವಂತರಾಗುವರು. ಒಬ್ಬ ಮನುಷ್ಯನನ್ನು ನಿರುದ್ಯೋಗಿ ಎಂದು ಕರೆಯಬೇಕಾದರೆ ಅವನಿಗೆ ಕೆಲಸವಿಲ್ಲದಿರುವುದು ಮಾತ್ರವಲ್ಲ, ಕಡಿಮೆ ಕೂಲಿಯಲ್ಲಿ ಕೆಲಸಮಾಡುತ್ತೇನೆ ಎಂದರೂ ಕೆಲಸ ದೊರೆಯಬಾರದು. ನಿರುದ್ಯೋಗಿಯಾಗಿದ್ದರೂ, ಕಡಿಮೆ ಕೂಲಿಯಲ್ಲಿ ಕೆಲಸಮಾಡಲು ಮೈ ಬಗ್ಗದ ಮನುಷ್ಯ ನಿರುದ್ಯೋಗಿಯಲ್ಲ; ಅವನು ಕಡಿಮೆಕೂಲಿಗಿಂತ ನಿರುದ್ಯೋಗವು ಲೇಸೆಂದು ಸ್ವಪ್ರೇರಣೆಯಿಂದ ಉದ್ಯೋಗ ಬಿಟ್ಟವನು ಇದು ನಿರುದ್ಯೋಗವಲ್ಲ. ಅವನಿಗೆ ನಿಜವಾಗಿ ಕೆಲಸಮಾಡಬೇಕೆಂದಿರುವ ಪಕ್ಷಕ್ಕೆ ಕಡಿಮೆಕೂಲಿಗೆ ಒಪ್ಪಬಾರದೇಕೆ? ಕಡಿಮೆಕೂಲಿಗೆ ಅವನು ಒಪ್ಪಿದರೆ ಸಂಚಾಲಕನಿಗೆ ಉದ್ಯಮದಲ್ಲಿ ಹೆಚ್ಚು ಲಾಭ ಬರುವುದರಿಂದ ಆತ ಇನ್ನಷ್ಟು ಜನರನ್ನು ಉದ್ಯೋಗಕ್ಕೆ ಸೇರಿಸಿಕೊಳ್ಳುವನು ಎಲ್ಲಿ ನಿರುದ್ಯೋಗವುಂಟೋ, ಅಲ್ಲಿ ಕೂಲಿಯ ಧಾರಣೆ ಇಳಿಯುತ್ತಾ ಹೋಗುವುದು ಕೂಲಿಯು ಪತನವಾದಂತೆ, ನಿರುದ್ಯೋಗವು ಮಾಯವಾಗುವ ತನಕ ಲಾಭವೂ ಉದ್ಯೋಗದ ಪ್ರಮಾಣವೂ ಏರುತ್ತ ಹೋಗುವುವು. ಆದುದರಿಂದ ಪ್ರಾಚೀನ ಪಂಥದವರ ದೃಷ್ಟಿಯಲ್ಲಿ ಸಮತೋಲ ಸನ್ನಿವೇಶದಲ್ಲಿ ನಿರುದ್ಯೋಗವು ಹೇಳಹೆಸರಿಲ್ಲದಾಗುವುದು. ಟ್ರೇಡ್ ಯೂನಿಯನ್ನೋ, ಸರಕಾರವೋ ಕೂಲಿಯವರು ಕಡಿಮೆಕೂಲಿಗೆ ಒಪ್ಪದ ಹಾಗೆ ಕೂಲಿಕಾರರನ್ನು ಪ್ರೇರಿಸಿದಾಗ ಮಾತ್ರ ನಿರುದ್ಯೋಗ ಉಂಟಾದೀತು.

ಕೂಲಿ ಕಡಿಮೆ ಮಾಡಿದರೆ, ಉದ್ಯಮಗಳ ಲಾಭವೂ ಹೆಚ್ಚಿ, ಇನ್ವೆಸ್ಟ್ಮೆಂಟು ಅಧಿಕವಾಗುವುದೆಂಬ ವಾದವನ್ನು ದಿವಂಗತ ಕೀನ್ಸ್ ಖಂಡಿಸುವನು. ಹಣಕೂಲಿ ಏರಿಸಬೇಕು. ಆಗ ಅನುಭೋಗಿ ಸರಕುಗಳಿಗೆ ಬೇಡಿಕೆ ಹೆಚ್ಚಾದಂತೆ, ಕೂಲಿಕಾರರ ವರಮಾನವು ಹೆಚ್ಚಾಗುವುದು; ಅಲ್ಲಿಂದ ಉತ್ಪಾದಕ ಸರಕುಗಳಿಗೂ ಬೇಡಿಕೆ ಹೆಚ್ಚಾಗುವುದು; ಒಟ್ಟಾರೆ ಮೇಲೆ ಇನ್ವೆಸ್ಟ್ಮೆಂಟು ಅಧಿಕವಾಗುವುದು. ಇನ್ವೆಸ್ಟ್ಮೆಂಟು ರಾಷ್ಟ್ರದ ಜನರ ಸಮಗ್ರ ಬೇಡಿಕೆಯನ್ನು ಅವಲಂಬಿಸಿದೆ ಸಮಗ್ರ ಬೇಡಿಕೆಯಲ್ಲಿ ಅನುಭೋಗಿಗಳು ಅನುಭೋಗದ ಮೇಲೆ ಖರ್ಚು ಮಾಡುವ ಮೊಬಲಗು ಮಾತ್ರವಲ್ಲದೆ ಬಂಡವಾಳಗಾರರು ಇನ್ವೆಸ್ಟ್ ಮಾಡುವ ಮೊಬಲಗು ಕೂಡ ಸೇರಿರುವುದು. ಅನುಭೋಗದ ಬೇಡಿಕೆಯು ಅನುಭೋಗಿಗಳು ವ್ಯಯಿಸುವ ಮೊಬಲಗಿನ ಮೇಲೆ ಹೊಂದಿಕೊಂಡಿದೆ ಹಾಗಾದರೆ ಇನ್ವೆಸ್ಟ್ಮೆಂಟು ಯಾವುದನ್ನು ಅವಲಂಬಿಸಿದೆ? ದೇಶದ ಬಂಡವಾಳ ಸಾಮಗ್ರಿಗಳು ಅಧಿಕವಾಗಬೇಕಾದರೆ ಜನ ತಮ್ಮ ಎಲ್ಲ ಹಣವನ್ನು ಅನುಭೋಗಕ್ಕಾಗಿ ವ್ಯಯಿಸದೆ ಸ್ವಲ್ಪಾಂಶವನ್ನು ಉಳಿಸಿಕೊಳ್ಳಬೇಕು ತಾನೆ? ಉಳಿತಾಯವು ಅಗತ್ಯವಾದ ಒಂದು ಕರ್ತವ್ಯ ಬಂಡವಾಳಗಾರ ಸಮಾಜದಲ್ಲಿ ಉಳಿತಾಯದ ನಿರ್ಣಯ ಮಾಡುವವರು ಬೇರೆ ಇನ್ವೆಸ್ಟ್ ಮಾಡುವವರು ಬೇರೆ ಅವರ ಉದ್ದೇಶಗಳೂ ಬೇರೆಬೇರೆಯೆ. ಉಳಿತಾಯದ ಪ್ರಮಾಣವು ಇನ್ವೆಸ್ಟ್ಮೆಂಟ್ ವ್ಯಯದ ಮೇಲೆ ಅವಲಂಬಿಸಿರುವುದಿಲ್ಲ. ವರಮಾನದ ಮಟ್ಟವೂ, ವಿತರಣೆಯೂ, ಉಳಿತಾಯವನ್ನು ನಿರ್ಣಯಿಸುವಂಥವು ಇನ್ವೆಸ್ಟ್ಮೆಂಟು ಲಾಭನಿರೀಕ್ಷೆ ('ಬಂಡವಾಳದ ಕಾರ್ಯಸಾಮರ್ಥ್ಯ')ಯ ಮೇಲೆ ಹೊಂದಿಕೊಂಡಿರುವುದಲ್ಲದೆ ಸಿಗುವ ಉಳಿತಾಯದ ಗಾತ್ರದ ಮೇಲಲ್ಲ ಉಳಿತಾಯವೂ, ಇನ್ವೆಸ್ಟ್ಮೆಂಟೂ ತಮ್ಮಷ್ಟಕ್ಕೆ ಯಂತ್ರವತ್ ಸಮಾನವಾಗುವುದಿಲ್ಲ. ಉಳಿತಾಯವೆಂದರೆ ಅನುಭೋಗದ ತ್ಯಾಗ ಎಂಬ ನಿಷೇಧಾತ್ಮಕ ಅರ್ಥ ಮಾತ್ರವೇ ಅಲ್ಲ, ಉಳಿತಾಯ ಇದ್ದಷ್ಟೇ ಇನ್ವೆಸ್ಟ್ಮೆಂಟೂ ನಡೆದರೆ ಮಾತ್ರ ಸಾರ್ಥಕ. ಉಳಿತಾಯವನ್ನು ಮಾಡದೆ ಇದ್ದರೆ ನಿರುದ್ಯೋಗವು ಉದ್ಭವಿಸುವುದು ನಮ್ಮ ವರಮಾನವು ಹೆಚ್ಚಿದ ದಾಮಾಶಯಕ್ಕಿಂತ ಕಡಿಮೆ ದಾಮಾಶಯದಲ್ಲಿ ನಾವು ಉಳಿಸುವುದರಿಂದ ವರ

ಮಾನದ ವಿತರಣೆಯಲ್ಲಿ ಸಮಾನತೆಯು ಹೆಚ್ಚಿದಂತೆ, ಜನರ ಉಳಿತಾಯದ ಮೊಬಲಗು ಇನ್ವೆಸ್ಟ್‌ಮೆಂಟಿಗೆ ಸಾಲದಾಗುವುದು. ಆಗ ಸರಕಾರವು ಇನ್ವೆಸ್ಟ್‌ಮೆಂಟ್ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು ಉಳಿತಾಯದ ಒಲವು ಹೆಚ್ಚಾದರೆ ಜತೆಗೆ ಇನ್ವೆಸ್ಟ್‌ಮೆಂಟಿನ ಒಲವೂ ಹೆಚ್ಚಾಗಬೇಕು. ಲಾಭ ನಿರೀಕ್ಷೆಯ ಮೇಲೆ ಇನ್ವೆಸ್ಟ್‌ಮೆಂಟಿನ ಒಲವು ಅವಲಂಬಿಸಿರುವುದರಿಂದ ಬಂಡವಾಳಕ್ಕೆ ಅತಿಶಯವಾದ ಲಾಭ ನಿರೀಕ್ಷೆಯಿರುವ ದೇಶಗಳಲ್ಲಿಯೂ, ಕಾಲಗಳಲ್ಲಿಯೂ ಇನ್ವೆಸ್ಟ್‌ಮೆಂಟ್ ಒಲವು ಅಧಿಕವಾಗಿರುವುದೆಂದು ಹೇಳಿದ ಹಾಗಾಯಿತು

**ಪೂರ್ಣೋದ್ಯೋಗ:**

ಕೆಲಸಮಾಡಲು ಶಕ್ತರಾದವರೂ, ಮನಸ್ಸುಳ್ಳವರೂ ಆದ ಸರ್ವರಿಗೂ ಪ್ರಚಲಿತ ಕೂಲಿ ಹಾಗೂ ಉದ್ಯೋಗದ ಪರಿಸ್ಥಿತಿಯಲ್ಲಿ ಕೆಲಸ ದೊರೆಯುವಂತಿದ್ದರೆ ದೇಶವು ಪೂರ್ಣೋದ್ಯೋಗದಲ್ಲಿದೆ ಎನ್ನುತ್ತಾರೆ ಪೂರ್ಣೋದ್ಯೋಗವೆಂದೊಡನೆ ನಿರುದ್ಯೋಗವು ಇಲ್ಲವೇ ಇಲ್ಲವೆಂದು ತಿಳಿಯಬಾರದು ಹೊಸ ಕಾರ್ಖಾನೆಗಳು ತೆರೆದು, ಹೊಸ ಉದ್ಯೋಗದಂಥಗಳು ಆರಂಭವಾದರೂ ನಿರುದ್ಯೋಗವು ಒಂದು ಅಂಶವಾಗಿರಲೇ ಬೇಕು ನಿರುದ್ಯೋಗವಿಲ್ಲದೆ ಪ್ರಗತಿಯಿಲ್ಲ ಇಂಗ್ಲೆಂಡಿನಲ್ಲಿ ಪೂರ್ಣೋದ್ಯೋಗದ ಸ್ಥಿತಿಯಲ್ಲಿಯೂ ೨% ನಿರುದ್ಯೋಗ ಇರುವುದಂತೆ ತಿಂಗಳುಗಟ್ಟಲೆ, ವರ್ಷಗಟ್ಟಲೆ, ನಿರುದ್ಯೋಗ ಇದ್ದರೆ ಅದನ್ನು ಸಾಮಾಜಿಕ ಪಿಡುಗೆಂದೂ, ಅತ್ಯಾವಶ್ಯಕವಾದ, ಅನಿವಾರ್ಯವಾದ ಉದ್ಯೋಗರಾಹಿತ್ಯವು ಆರ್ಥಿಕ ವ್ಯವಸ್ಥೆಯ ಆರೋಗ್ಯ ಚಿಹ್ನವೆಂದೂ, ತಿಳಿಯಬೇಕು ಬೆವರಿಜ್ ಹೇಳುವ ಹಾಗೆ, "ನಿರುದ್ಯೋಗಿಗಳಿಗಿಂತ ಖಾಲಿ ಕೆಲಸಗಳು ಹೆಚ್ಚಾಗಿದ್ದರಾಯಿತು''

ಪೂರ್ಣೋದ್ಯೋಗವು ರಾಷ್ಟ್ರದ ಸಮಗ್ರವ್ಯಯದ ಮೇಲೆ ಹೊಂದಿಕೊಂಡಿದೆ. ರಾಷ್ಟ್ರದಲ್ಲಿರುವ ಕೂಲಿಕಾರರೆಲ್ಲರಿಗೂ ಉದ್ಯೋಗವು ದೊರೆತಿರುವ ಪರಿಸ್ಥಿತಿಗೆ ಪೂರ್ಣೋದ್ಯೋಗದ ಪರಿಸ್ಥಿತಿ ಎನ್ನಬಹುದು. ಇಂಥ ಪರಿಸ್ಥಿತಿಗೆ ಕಾರಣವಾಗುವ ರಾಷ್ಟ್ರದ ಸಮಗ್ರವ್ಯಯವು ಕೆಳಗೆ ಕಂಡ ವ್ಯಯಗಳ ಮೊತ್ತವಾಗಿರುತ್ತದೆ.

(೧) ಖಾಸಗಿ ಜನರು ತಂತಮ್ಮ ಅನುಭೋಗಕ್ಕೋಸ್ಕರ ಮಾಡುವ ವ್ಯಯ ಈ ಮೊತ್ತವು ಜನರ ವರಮಾನದ ಗಾತ್ರದಮೇಲೂ, ಸಮಾಜದ ವರಮಾನ ವಿತರಣೆಯ ಪದ್ಧತಿಯ ಮೇಲೂ ಅವಲಂಬಿಸಿರುವುದು ಇದು ವರಮಾನದ ಮಟ್ಟಕ್ಕೆ ಪ್ರತಿಲೋಮವಾಗಿರುತ್ತದೆ, ಅಂದರೆ ಬಡವರು ತಮ್ಮ ವರಮಾನದ ಹೆಚ್ಚಿನಂಶವನ್ನು ಅನುಭೋಗಕ್ಕಾಗಿಯೇ ವ್ಯಯಿಸುತ್ತಾರೆ

(೨) ಪ್ರಚಲಿತ ಸರಕು ಸೇವೆಗಳನ್ನೊದಗಿಸಲು ಸರಕಾರ, ನಗರಸಭೆ ಮುಂತಾದ ಸಾರ್ವಜನಿಕ ಸಂಸ್ಥೆಗಳು ಮಾಡುವ ವ್ಯಯ ಇದು ಸಾಮಾನ್ಯವಾಗಿ ಸ್ಥಿರವಾಗಿರುತ್ತದೆ

(೩) ಖಾಸಗಿವ್ಯಕ್ತಿಗಳುಮಾಡುವ ಇನ್ವೆಸ್ಟ್‌ಮೆಂಟ್ ವ್ಯಯ. ಮುಂದುವರಿದ ರಾಷ್ಟ್ರಗಳಲ್ಲಿ ಈ ಬಾಬಿನಲ್ಲಿ ಲಾಭನಿರೀಕ್ಷೆಯನ್ನು ಹೊಂದಿಕೊಂಡು ಕಾಲ ಕಾಲಕ್ಕೆ ಏರಿಳಿತಗಳುಂಟಾಗುವುವು ಅಲ್ಲಿ ಬಹುಪಕ್ಷ ನಿರುದ್ಯೋಗಕ್ಕೆ ಖಾಸಗಿ ಇನ್ವೆಸ್ಟ್‌ಮೆಂಟ್ ವ್ಯಯವು ಕಡಿಮೆಯಾಗುವುದೇ ಕಾರಣ.

(೪) ರಾಜಮಾರ್ಗ, ನೀರಿನ ಸರಬರಾಯಿ, ರೈಲುಹಾದಿ ಮುಂತಾದ ಸಾರ್ವಜನಿಕ ಕೆಲಸಗಳ ಬಗ್ಗೆ ಸಾರ್ವಜನಿಕ ಸಂಸ್ಥೆಗಳೂ, ಸರಕಾರವೂ ಮಾಡುವ ಇನ್ವೆಸ್ಟ್‌ಮೆಂಟ್ ವ್ಯಯ. ವ್ಯಾಪಾರಾವರ್ತದ ಇಳಿತ ಭರತಗಳನ್ನು ಗಮನಿಸಿ ಸರಕಾರವು ಈ ವ್ಯಯದಲ್ಲಿ ವ್ಯತ್ಯಾಸಗಳನ್ನುಂಟುಮಾಡಲು ಅವಕಾಶವಿದೆ. ಮಂದಿಯ ಕಾಲದಲ್ಲಿ ಸರಕಾರವು ಸರ್ವಜನೋಪಯೋಗಿ ಕಾರ್ಯಗಳಿಗೆ ಹೆಚ್ಚು ಹಣವನ್ನು ಹೂಡಿದರೆ ಹಲವರಿಗೆ ಉದ್ಯೋಗಗಳು ದೊರೆಯುವುವು. ತೇಜಿಯ ಕಾಲದಲ್ಲಿ ಈ ವೆಚ್ಚವನ್ನು ಕಡಿಮೆ ಮಾಡಬೇಕು.

(೫) ನಮ್ಮ ವಿದೇಶೀಯ ವ್ಯಾಪಾರದ ಶಿಲ್ಕು. ಇದು ಅಂತರರಾಷ್ಟ್ರೀಯ ವ್ಯಾಪಾರದ ಏರಿಳಿತಗಳನ್ನನುಸರಿಸುವುದು.

**ಪೂರ್ಣೋದ್ಯೋಗದ ಬಗ್ಗೆ ರಾಷ್ಟ್ರದ ಕರ್ತವ್ಯ:**

ಮೇಲಿನ ಐದು ವಿಷಯಗಳಲ್ಲಿ ರಾಷ್ಟ್ರವು ಭಾಗವಹಿಸಲು ಶಕ್ತವಾಗಿದೆ. ರಾಷ್ಟ್ರೀಯ ಆಯವ್ಯಯದ ಧೋರಣೆಯಲ್ಲಿ ಬದಲಾವಣೆಯಾದರೆ, ದೇಶದ

ಸಮಗ್ರ ವ್ಯಯವನ್ನು ಪೂರ್ಣೋದ್ಯೋಗಕ್ಕೆ ಅನುಕೂಲವಾದ ಮಟ್ಟದಲ್ಲಿ ಡುವುದು ಕಷ್ಟದ ಕೆಲಸವಲ್ಲ. ರಾಷ್ಟ್ರವು ತನ್ನ ವ್ಯಯವನ್ನಷ್ಟೇ ಅಲ್ಲದೆ, ಖಾಸಗೀ ಹಾಗೂ ಇತರ ಸಾರ್ವಜನಿಕ ಸಂಸ್ಥೆಗಳ ಆಯವ್ಯಯದ, ಬಂಡವಾಳ ಹೂಟೆಯ (ಅಂದರೆ ಇನ್ವೆಸ್ಟ್‌ಮೆಂಟಿನ) ಸಿಲುವೆಯನ್ನೂ ಪರಿಶೀಲಿಸಬೇಕು ತನ್ನ ಆಯ-ವ್ಯಯಗಳನ್ನು ಸಮತೂಕದಲ್ಲಿರಿಸುವುದಷ್ಟೇ ಸರಕಾರದ ಕರ್ತವ್ಯವಲ್ಲ. ಮತ್ತು ರಾಷ್ಟ್ರೀಯ ವರಮಾನ ವ್ಯಯಗಳಿಗೆ ಜೋಡಿಸಿಕೊಂಡು ಸರಕಾರವು ತನ್ನ ಆಯ-ವ್ಯಯವನ್ನು ಬದಲಾಯಿಸಬೇಕು ಯುದ್ಧಕಾಲದಲ್ಲಿ ಬ್ರಿಟನಿನಲ್ಲಿ ಸರ್ವಸಾಮಾನ್ಯವಾದ ವಾರ್ಷಿಕ ಬಜೆಟು ಅಲ್ಲದೆ ಒಂದು ಆರ್ಥಿಕ ಬಜೆಟನ್ನು ನಿರ್ಮಿಸುತ್ತಿದ್ದರಂತೆ ಖಾಸಗೀ ವ್ಯಕ್ತಿಗಳು ವ್ಯಯವನ್ನು ಕಮ್ಮಿಮಾಡುವುದರಿಂದ ಎಷ್ಟು ನಿರುದ್ಯೋಗ ಉಂಟಾಗಿದೆ ಎಂಬುದನ್ನು ಸರಕಾರವು ವಿಚಾರಿಸುತ್ತ ಹೋದಂತೆ ಬಜೆಟಿನಲ್ಲಿ ಹಣದ ಪ್ರಾಧಾನ್ಯವು ಕಡಿಮೆಯಾಗಿ ಜನಶಕ್ತಿಯ ಪ್ರಾಧಾನ್ಯವು ಅಧಿಕವಾಗುವುದು ಖಾಸಗೀ ವ್ಯಕ್ತಿಗಳ ಇನ್ವೆಸ್ಟ್‌ಮೆಂಟು ಎಷ್ಟು ಪ್ರಮಾಣದಲ್ಲಿ ಕಡಿಮೆಯಾಗುವುದೋ, ಅಷ್ಟನ್ನು ರಾಷ್ಟ್ರವು ತನ್ನ ಸ್ವಂತ ಇನ್ವೆಸ್ಟ್‌ಮೆಂಟ್ ಯೋಜನೆಗಳಿಂದ ತುಂಬಿಕೊಡಬೇಕು. ಸಮತೂಕ ಬಜೆಟಿನ ಕಲ್ಪನೆಯನ್ನು ದೂರ ಒಗೆಯಬೇಕು

## ಹಿಂದುಳಿದ ದೇಶಗಳಲ್ಲಿ ಏನು?

ಹಿಂದುಳಿದ ದೇಶಗಳ ನಿರುದ್ಯೋಗದ ಪ್ರಶ್ನೆಗೆ ಬಜೆಟು ಸುಧಾರಣೆಯ ರಾಮಬಾಣವು ಪ್ರಯೋಜಕವಾಗಲಾರದು ನಮ್ಮಲ್ಲಿ ಔದ್ಯಮಿಕ ನಿರುದ್ಯೋಗವು ಕಡಿಮೆ, ಅಲ್ಪೋದ್ಯೋಗಗಳನ್ನು ಒದಗಿಸುವ ಉದ್ಯಮಗಳು ಹೆಚ್ಚು. ಇವುಗಳಲ್ಲಿ ಕೆಲವೇ ತಿಂಗಳು ಮಾತ್ರ ಕೆಲಸಕೊಡುವ ಕೃಷಿ ಉದ್ಯಮದಲ್ಲಿ ಸುಮಾರು ೬೭% (ಸಂ. ರಾ ೧೬% ಬ್ರಿಟನ್ ೭%, ಫ್ರಾನ್ಸ್ ೩೫%) ಜನರು ನಿರತವಾಗಿರುವುದರಿಂದ ನಮ್ಮಲ್ಲಿ ನಿರುದ್ಯೋಗವು ಸರ್ವಸಾಮಾನ್ಯವಾದ ಲಕ್ಷಣವಾಗಿ ಬಿಟ್ಟಿದೆ, ಹಾಗಾದುದರಿಂದ ಕಲಿತವರಿಗೂ ಉದ್ಯೋಗವಿಲ್ಲ, ಕಲಿಯದವರಿಗೂ ಇಲ್ಲ ಎಂಬಂತಾಗಿದೆ. ತಾಂತ್ರಿಕ ವಿದ್ಯೆಯಲ್ಲಿ ಪಾರಂಗತರಾದವರು ಅತಿ ವಿರಳ. ಮುಂದುವರಿದ ಯುರೋ

ಪಿನಲ್ಲಿ ತಾಂತ್ರಿಕ ವಿದ್ಯೆಪಡೆದ ಒಬ್ಬನಿಗೆ, ಸಂ. ರಾಷ್ಟ್ರದಲ್ಲಿ ೧೦ ಜನ ತೇರ್ಗಡೆಯಾಗುತ್ತಾರೆ. ಹಿಂದುಳಿದ ನಮಗೂ ಸಂಯುಕ್ತ ರಾಷ್ಟ್ರಕ್ಕೂ ಯಾವನಂಟು? ನಮ್ಮಲ್ಲಿ ಕಲಿತವರ ನಿರುದ್ಯೋಗತನಕ್ಕೆ ನಮ್ಮ ಶಾಲೆ, ಕಾಲೇಜುಗಳ ಶಿಕ್ಷಣ ಕ್ರಮವು ದೋಷಪೂರ್ಣವಾದುದೇ ಕಾರಣ ಭೂಮಿಯ ಮೇಲೆ ಕಿಕ್ಕಿರಿದು ನೆರೆದಿರುವ ಹಿಂದುಳಿದ ದೇಶಗಳ ಜನಸಮು ದಾಯಕ್ಕೆ ಬೇರೆ ಉದ್ಯೋಗಗಳನ್ನು ಕಲ್ಪಿಸಿ ಭೂಭಾರ ಕಡಿಮೆಯಾಗ ಬೇಕು ಆದರೆ ಹೇಳುವುದು ಸುಲಭ; ಮಾಡುವುದು ಕಷ್ಟ. ಸಿಕ್ಕಿದ ಅಲ್ಪ ವರಮಾನವೆಲ್ಲವೂ ಅನುಭೋಗದಲ್ಲೇ ತೇದುಹೋಗುವ ಜನ ಅದೆಷ್ಟು ಹಣ ಉಳಿಸಿಯಾರು? ಅಂಥ ದೇಶದಲ್ಲಿ ಅದೆಷ್ಟು ಬಂಡವಾಳ ಸಂಚಯನ ದೊರೆತೀತು? ವಿಲಾಯತಿ, ಅಮೇರಿಕಗಳಲ್ಲಿ ಉಳಿತಾಯವು ಅಧಿಕವಾಗಿ ಜನರ ಅನುಭೋಗವು ಕಡಿಮೆಯಾಗಿರುವುದರಿಂದ ಸಮಗ್ರ ವ್ಯಯವು ಕುಂಠಿತವಾಗುತ್ತದೆ. ನಮ್ಮಲ್ಲಿ ತದ್ವಿಪರೀತವಾದ ಸನ್ನಿವೇಶವಿದೆ. ಮುಂಬರಿದ ದೇಶಗಳಿಗೆ ಕೀನ್ಸ್ ಎರಡು ಮಾರ್ಗಗಳನ್ನು ಸೂಚಿಸಿದ್ದಾನೆ. ೧ ಉಳಿತಾಯದ ಕಡೆಗೆ ಒಲವು ಕಡಿಮೆಯಾಗುವ ಹಾಗೆ ವರಮಾ ನದ ವಿತರಣೆಯಲ್ಲಿ ಸಮಾನತ್ವವನ್ನು ತರುವುದು. ೨ ರಾಷ್ಟ್ರವು ತಾನೇ ಇನ್ವೆಸ್ಟ್‌ಮೆಂಟ್ ಕಾರ್ಯಕ್ರಮಗಳನ್ನು ಕೈಗೊಳ್ಳುವುದು. ಬಂಡವಾ ಳದ ಕೊರತೆಯಿರುವ ದೇಶಗಳಲ್ಲಿ ಕೃಷಿಯಿಂದ ಜನರನ್ನು ತೊಲಗಿಸು ವುದೂ, ಕೃಷಿಯಲ್ಲಿ ಮಿಶ್ರಕ್ರಮ, ಹಾಲು-ಹೈನ, ಹಾಲು-ಹಿಟ್ಟು ಫೇಡೆ, ಇತ್ಯಾದಿ ವೈವಿಧ್ಯಗಳನ್ನು ಸ್ಥಾಪಿಸುವುದೂ, ಕೃಷಿವಲಯಗಳಲ್ಲೇ ಕೃಷಿಗೆ ಹತ್ತಿರವಿರುವ ಕೃಷಿ–ಉದ್ಯಮಗಳನ್ನು ತೆರೆಯುವುದೂ ಉದ್ಧಾರಮಾರ್ಗ ಗಳು. ಹೀಗಿರುವುದರಿಂದ ದೇಶದ ಸರ್ವತೋಮುಖವಾದ ಆರ್ಥಿಕ ಅಭಿ ವೃದ್ಧಿಯಾಗದೆ ಹಿಂದುಳಿದ ದೇಶಗಳ ನಿರುದ್ಯೋಗದ ಪ್ರಶ್ನೆಯು ಬಗೆಹರಿ ಯುವುದಿಲ್ಲ

## ಹದಿನಾಲ್ಕನೆಯ ಅಧ್ಯಾಯ

# ಮುನಾಫೆ

### ಒಟ್ಟುಲಾಭ ಮತ್ತು ಶುದ್ಧಲಾಭ:

ನಾವು ಇದುವರೆಗೆ 'ಲಾಭ', 'ಮುನಾಫೆ' ಎಂಬ ಪದಗಳನ್ನು ಹಲವೆಡೆ ಉಪಯೋಗಿಸಿದ್ದೇವಾದರೂ ಅವುಗಳ ನಿಷ್ಕರ್ಷೆಯಾದ ಅರ್ಥವನ್ನು ತಿಳಿಯ ಪಡಿಸಲಿಲ್ಲ. ಪ್ರಗತಿಹೀನವಾದ ಸಮಾಜದಲ್ಲಿ ಮುನಾಫೆ ಹುಟ್ಟುವುದಿಲ್ಲ; ತಾಂತ್ರಿಕ ಪುರೋಗಮನವೇ ಮುನಾಫೆಯ ಜನನಕ್ಕೆ ಕಾರಣ. ಧಾರಣೆ, ವೆಚ್ಚ, ಬಡ್ಡಿ, ಗೇಣಿ ಮೊದಲಾದುವು ಇಂದು ಇರುವಂತೆ ನಾಳೆ ಇಲ್ಲದಿರುವುದರಿಂದ ಸಂಚಾಲಕನು ಮುನಾಫೆ ಹೊಡೆಯಲು ಸಾಧ್ಯವಾಗುವುದು. ಮುನಾಫೆ ಇಲ್ಲದೆ ವ್ಯಾಪಾರಿ ನೆರೆ ಈಜಲು ಹೋಗುವುದಿಲ್ಲ ಎಂಬ ಒಂದು ನುಡಿಗಟ್ಟಿದೆ. ತಟಸ್ಥವಾದ ಕೊಳದಲ್ಲಿ ಮುನಾಫೆ ಕಡಮೆ. ನೆರೆಯಲ್ಲಿ ಇಂದಲ್ಲವಾದರೆ ನಾಳೆಯಾದರೂ ಕಟ್ಟಿಗೆ, ಕಾಯಿ ಹರಿದುಕೊಂಡು ಬಂದಾವು ಎಂದು ಮುನಾಫೆಯನ್ನು ನಿರೀಕ್ಷಿಸಬಹುದು. ನೆರೆ, ಅರ್ಥಾತ್ ಪ್ರಗತಿಯು ಲಾಭಕ್ಕೆ ಯೋಗ್ಯವಾದ ಸನ್ನಿವೇಶವು.

ವ್ಯಾಪಾರ ವಹಿವಾಟಿನಲ್ಲಿ ಮುನಾಫೆಗೆ ಸಾಮಾನ್ಯವಾಗಿ ಇರುವ ಅರ್ಥದಿಂದ ನಮ್ಮ ಚರ್ಚೆಯನ್ನು ಆರಂಭಿಸುವ. ಉದ್ಯಮಕ್ಕೆ ಆರಂಭಿಸುವಾಗ ಸಂಚಾಲಕನು ಯಾವಯಾವ ಜನರಿಗೆ ಎಷ್ಟೆಷ್ಟು ಪ್ರತಿಫಲ ಕೊಡುವನೆಂದು ಒಪ್ಪಿರುವನೋ ಆ ವೆಚ್ಚಗಳು ಸಂದಾಯವಾದ ಬಳಿಕ ಉಳಿಯುವ ಮೊಬಲಗು ಸಂಚಾಲಕನ 'ಮುನಾಫೆ' ತಾನೇ? ಗಿರಣಿ ಮಾಲಿಕನು ಯಂತ್ರಕ್ಕೂ, ಕಚ್ಚಾ ಮಾಲಿಗೂ, ಜಾಹೀರಾತಿಗೂ, ಕೂಲಿಕಾರರಿಗೂ, ಮೆನೇಜರುಗಳಿಗೂ, ಕಾರ್ಖಾನೆ ನಿಂತ ನೆಲದ ಬಾಡಿಗೆಗೂ ಕೊಡಬೇಕಾದ ಹಣವನ್ನು ಸಲ್ಲಿಸಿದ ಮೇಲೆ ಉಳಿಯುವ ಶೇಷವು ಅವನ ಮುನಾಫೆ ಎಂದು ಸ್ಥೂಲವಾಗಿ ಎಣಿಸಬಹುದು. ಮುನಾಫೆಯೂ ಒಂದು ವರಮಾನ: ವೆಚ್ಚಕ್ಕೂ ಆದಾಯಕ್ಕೂ ನಡುವಿನ ವ್ಯತ್ಯಾಸವೇ ಈ ವರಮಾನ. ಒಟ್ಟು (ಗ್ರೋಸ್) ಲಾಭದಲ್ಲಿ (೧) ಸಂಚಾಲಕನು ಮಾಡಿರುವ ವ್ಯವಸ್ಥೆ, ಮೇಲ್ವಿ

ಚಾರ, ನಿಯಂತ್ರಣ, ಬುದ್ಧಿಶಕ್ತಿಯ ಉಪಯೋಗ ಮೊದಲಾದುವಕ್ಕೆ ಅವನಿಗೆ ಸಿಗಬೇಕಾದ ಸಂಬಳವೂ (೨) ಸ್ವಂತ ಬಂಡವಾಳವನ್ನುಪಯೋಗಿಸಿದ್ದರೆ ಅದರ ಬಡ್ಡಿಯೂ (೩) ಒಬ್ಬ ಸಂಚಾಲಕನು ಪರಿಸರದವನಾಗಿದ್ದು ಇನ್ನೊಬ್ಬನು ಆವನಿಗಿಂತ ಮೇಲಿನವನಾದರೆ ಆಗ ಬರುವ ಮಿಗುತೆಯ ಅಂಶವೂ (೪) ಉತ್ಪಾದನೆಯು ಸರ್ವಸಾಧಾರಣವಾಗಿ ಅಪರಿಪೂರ್ಣ ಮೇಲಾಟದ ಸನ್ನಿವೇಶದಲ್ಲಿ ನಡೆಯುವುದರಿಂದ ಮೊನೊಪಲಿ ಆದಾಯವೂ —ಸೇರುವುವು. ಒಳ್ಳೆಯ ಅಥವಾ ಕಡಮೆ ವೆಚ್ಚದ ಜಮೀನನ್ನು ಆರಿಸುವುದೂ, ಉತ್ತಮವಾದ ಯಂತ್ರ ಸಾಮುಗ್ರಿಗಳನ್ನು ತರಿಸುವುದೂ, ತನ್ನ ಸರಕನ್ನು ಇತರರ ಸರಕಿನಿಂದ ಬೇರ್ಪಡಿಸಿ ಅಪರಿಪೂರ್ಣಮೇಲಾಟದ ಲಾಭ ಪಡೆಯುವುದೂ — ಸಂಚಾಲಕನು ಸ್ವತಃ ಮಾಡುವ ಕೆಲಸಗಳು. ಇದಕ್ಕಾಗಿ ಅವನಿಗೆ 'ಮುನಾಫೆ' ಸಲ್ಲಬೇಕು.

ಮುನಾಫೆಯುಂಟಾಗುವುದು ಔದ್ಯಮಿಕ ರಂಗದಲ್ಲಿ ಮಾತ್ರವೇ ಅಲ್ಲ. ಆಸ್ತಿವಂತರೂ, ಹಣವಂತರೂ ತಮ್ಮ ಹಣವನ್ನು ವಿಮೆ ಕಂಪೆನಿ, ಕಾರ್ಖಾನೆಗಳಂಥ ಉದ್ಯಮಗಳಲ್ಲಿ ಇನ್ವೆಸ್ಟ್ ಮಾಡಿದರೆ ಈ ಸಂಸ್ಥೆಗಳಿಗೆ ದೊರಕಿದ ಮುನಾಫೆಯಲ್ಲಿ ಆಸ್ತಿವಂತರಿಗೂ ಪಾಲು ಸಿಗುವುದು. ಮುನಾಫೆಯು ಬಡ್ಡಿಯ ಹೊರತಾಗಿರಬಹುದು; ಬಡ್ಡಿಯನ್ನೊಳಗೊಂಡಿರಬಹುದು. ಹೇಗಿದ್ದರೂ ಮುನಾಫೆ ಎಂಬುದು ಬಡ್ಡಿಯ ಒಂದು ಪ್ರಭೇದ. ತನ್ನ ಗದ್ದೆಯನ್ನು ತಾನೇ ಕೃಷಿಮಾಡುವ ರೈತನಿಗೆ ಬರುವ ಮುನಾಫೆ ಅವನ ಪರಿಶ್ರಮಕ್ಕೆ ಸಲ್ಲುವುದರಿಂದ ಅದು ಕೂಲಿಯ ರೂಪವನ್ನು ತಾಳುವುದು. ಮುನಾಫೆಯು ಸಂಚಾಲಕತನಕ್ಕೆ ಮಾತ್ರವೇ ಸಲ್ಲತಕ್ಕ ಮೊಬಲಗು ಎಂದು ಅದರ ಅರ್ಥವನ್ನು ಗೂಟಕ್ಕೆ ಕಟ್ಟಿಹಾಕಲು ಸಾಧ್ಯವಿಲ್ಲವೆಂದು ಇದರಿಂದ ತಿಳಿಯಬೇಕು.

**ಪ್ರಾಚೀನಪಂಥದವರ ವಾದ:**

ಇವರು ಮುನಾಫೆ ಎಂದರೆ ಕೂಲಿ, ಗೇಣಿಗಳನ್ನು ಕೊಟ್ಟ ಬಳಿಕ ಸಂಚಾಲಕನ ಹತ್ತಿರ ಉಳಿಯುವ ಹಣವೆಂದು ತಪ್ಪಾಗಿ ತಿಳಿದಿದ್ದರು. ಆಗಿನ ಕಾಲದಲ್ಲಿ ಕೊರ್ಪೊರೇಶನ್ನುಗಳ ಪ್ರಾಬಲ್ಯವಿರಲಿಲ್ಲವಾದುದರಿಂದ

ಸಂಚಾಲಕನು ತಾನೇ ಬಂಡವಾಳವನ್ನು ಇನ್ವೆಸ್ಟ್ ಮಾಡುತ್ತಿದ್ದನು. ಮುನಾಫೆಯು ಅವನಿಗೆಯೆ ಸೇರುತಿತ್ತು. ಕೂಡುಬಂಡವಾಳದ ಸಂಸ್ಥೆಗಳು ಹುಟ್ಟಿಕೊಂಡ ಮೇಲೆ ಬಂಡವಾಳದ ಒಡೆತನವೂ, ಅದರ ವ್ಯವಸ್ಥೆಯೂ ಬೇರೆ ಬೇರೆ ವ್ಯಕ್ತಿಗಳ ಸೊತ್ತಾದುವು. ಕಾರ್ಲ ಮಾರ್ಕ್ಸ ಕೂಡ ವರಮಾನವನ್ನು ಕೂಲಿ ಎಂದೂ ಲಾಭವೆಂದೂ ಎರಡಾಗಿ ವಿಭಜಿಸಿ, ಪರಿಶ್ರಮವೇ ಎಲ್ಲಾ ವರಮಾನವನ್ನು ಹುಟ್ಟಿಸುವುದಾದರೂ ಅದಕ್ಕೆ ವರಮಾನದ ಸ್ವಲ್ಪಾಂಶ ಮಾತ್ರವೇ ಕೂಲಿಯ ರೂಪದಲ್ಲಿ ಸಿಗುವುದೆಂದೂ, ಮಿಗುತೆಯನ್ನು ಸಂಚಾಲಕನು ಕೊಳ್ಳೆ ಹೊಡೆಯುವನೆಂದೂ ವಾದಿಸಿದನು. ಮುನಾಫೆಯನ್ನು ಮಿಗುತೆ ಮೌಲ್ಯವೆಂದು ಕರೆದು ಬಂಡವಾಳಗಾರ ಸಮಾಜದ ಅನ್ಯಾಯವನ್ನು ಬಯಲಿಗೆಳೆದನು. ಫ್ರೆಂಚ ಅರ್ಥಶಾಸ್ತ್ರಿಗಳಿಗೆ ಪ್ರಾಚೀನ ಪಂಥದವರು ಲಾಭ ಬಡ್ಡಿಗಳನ್ನು ಒಟ್ಟುಗೂಡಿಸಿದುದು ಸಮಂಜಸವಾಗಿ ಕಾಣಲಿಲ್ಲ. ಫ್ರೆಂಚ ಉದ್ಯಮಗಳಲ್ಲಿ ಬಂಡವಾಳಕ್ಕಿಂತಲೂ ಸಂಚಾಲಕರ ಬುದ್ಧಿಶಕ್ತಿಯು ಪ್ರಧಾನವಾಗಿದ್ದುದರಿಂದ ಅವರಿಗೆ ಮುನಾಫೆಯು ಸಂಚಾಲಕರಿಗೆ ಮಾತ್ರವೇ ಸಲಬೇಕಾದ ಮೊಬಲಗು ಎಂದು ಗೋಚರಿಸಿತು. ವಾಕರ್, ವಾಲ್ರಾಸ್ ಮೊದಲಾದ ಅಮೇರಿಕನ್ ಅರ್ಥಶಾಸ್ತ್ರಿಗಳು ಫ್ರೆಂಚ ನಿರೂಪಣೆಯನ್ನು ತುಸು ತಿದ್ದಿ ಮುನಾಫೆಯು 'ಗೇಣಿ'ಯ ರೂಪಭೇದ ಎನ್ನತೊಡಗಿದರು ಮುನಾಫೆ ಮನುಷ್ಯನ ಕರ್ತೃತ್ವಶಕ್ತಿಗೆ ಸಲುವ 'ಗೇಣಿ' ಎಂದು ಅವರು ಹೇಳುತ್ತಾರೆ.

## ಪ್ರಗತಿಶೀಲ ವರಮಾನ:

ಸಮತೋಲದ ಕಲ್ಪನೆಯು ಅರ್ಥಶಾಸ್ತ್ರದಲ್ಲಿ ಪ್ರಚಾರಕ್ಕೆ ಬಂದ ಮೇಲೆ 'ಬದಲಾವಣೆಯ ದೆಸೆಯಿಂದ ಉಂಟಾಗುವ ಪ್ರಗತಿಶೀಲ ವರಮಾನವೇ ಮುನಾಫೆ' ಎಂಬ ವಾದವು ಜನಿಸಿತು ಇದ್ದಲ್ಲೇ ಇದ್ದಂತಿರುವ ಜಡಭರತ ಸಮಾಜದಲ್ಲಿ ಮುನಾಫೆಗೆ ಎಡೆ ಇರುವುದಿಲ್ಲ ಸಂಚಾಲಕನು ವ್ಯವಸ್ಥಾಪಕನೂ ಅಲ್ಲ, ಕೂಲಿಕಾರನೂ ಅಲ್ಲ. ಕಾಲಾನುಗುಣವಾಗಿ ಉಂಟಾಗುವ ಪರಿವರ್ತನೆಗಳನ್ನು ನದರಿನಲ್ಲಿಟ್ಟುಕೊಂಡು ಅವಯವಗಳನ್ನು ಒಂದು ಕಡೆಯಿಂದ ತೆಗೆದು ಇನ್ನೊಂದು ಕಡೆ ಬಳಸಿಕೊಂಡು ಸಮಾಜದ

ಆರ್ಥಿಕ ರಚನೆಯನ್ನು ನಿಯಂತ್ರಿಸುವವನೇ ಆತ. ಮುನಾಫೆಯು ಅವನು ಮಾಡುವ ಹೊಸ ಹೊಸ ನಿರ್ಧಾರಗಳಿಗೆ ಬರುವ ವರಮಾನವಾದುದರಿಂದ ಕೇವಲ ಪ್ರಗತಿಶೀಲ ಸಮಾಜದಲ್ಲಿ ಮಾತ್ರವೇ ಮುನಾಫೆ ಹುಟ್ಟುವುದು

## ನೈಟ್ ಮೀಮಾಂಸೆ:

ಮುನಾಫೆಯು ಕುರಿತಾದ ಅರ್ವಾಚೀನ ಮೀಮಾಂಸೆಗಳಲ್ಲಿ ಅಮೇರಿಕದ ಫ್ರಾಂಕ್. ಎಚ್. ನೈಟ್ ಎಂಬವನ ವಾದವು ಬಹುಶ್ರುತವಾದುದು. ವೆಚ್ಚಕ್ಕೂ ಧಾರಣೆಗೂ ಇರುವ ವ್ಯತ್ಯಾಸವು ಮುನಾಫೆಗೆ ಕಾರಣ ಎಂಬುದನ್ನು ಒಪ್ಪಿಕೊಂಡು ಅಲ್ಲಿಂದ ಎರಡು ಹೆಜ್ಜೆ ಮುಂದೆ ಹೋಗಿ, ಶುದ್ಧ ಮುನಾಫೆಯು ಬರಿಯ ಬದಲಾವಣೆಯಿಂದಲೇ ಬರಲಾರದೆಂದೂ, ಬದಲಾವಣೆಯು ಹೇಗೆ, ಅದೆಷ್ಟು ಪ್ರಮಾಣದಲ್ಲಿ ಜರಗುವುದೆಂಬುದರ ಅರಿವು ಮೊದಲೇ ಇರುವ ಪಕ್ಷಕ್ಕೆ ವೆಚ್ಚಕ್ಕೂ ಧಾರಣೆಗೂ ತಾರತಮ್ಯವು ಉಂಟಾಗದ ಹಾಗೆ ಏರ್ಪಾಡು ಮಾಡಲು ಸಾಧ್ಯ ಇರುವುದೆಂದೂ, ನೈಟ್ ವಾದಿಸುವನು. ಉತ್ಪಾದಕ ಅವಯುವಗಳ ಸೇವೆಗೆ ಸ್ಥಿರವಾದ ಧಾರಣೆಯನ್ನಿತ್ತು ಸಂಚಾಲಕನು ಸರಕು ತಯಾರಿಸುವನು. ಆ ಮೇಲೆ ಆ ಸರಕನ್ನು ಪೇಟೆಯಲ್ಲಿ ಮಾರಿ ಹಣವನ್ನು ಪಡೆಯುವನು. ಭವಿಷ್ಯದಲ್ಲಿ ಮಾರ್ಕೆಟು ಧಾರಣೆ ಎಷ್ಟಿದ್ದೀತು ಎಂಬ ನಿರೀಕ್ಷೆಯಿಂದ ಸಂಚಾಲಕನು ಉತ್ಪಾದನೆಗಿಳಿಯುವನೋ ಆ ನಿರೀಕ್ಷೆಯು ಫಲಿಸದೆ ಹೋಗಬಹುದು. ಧಾರಣೆಯಲ್ಲಿ ಏರುಪೇರಾಗಬಹುದು ಇಂಥ ಏರುಪೇರಿನ ಗತಿಯನ್ನು ಯಾವುದಾದರೂ ನಿಯಮಾನುಸಾರವಾಗಿ ನಿಷ್ಕರ್ಷಿಸಲು ಬರುವಂತಿದ್ದರೆ ಅದಕ್ಕೆ ಬೇಕಾದ ಅವಕಾಶವನ್ನು ಉತ್ಪಾದನೆಗಿಳಿಯುವ ಮೊದಲೇ ಕಲ್ಪಿಸಿಕೊಳ್ಳಲು ಸಾಧ್ಯವುಂಟು. ಸೋಡಾ ಬಾಟ್ಲಿಗೆ ಗ್ಯಾಸು ತುಂಬಿಸುವಾಗ ತಿಂಗಳೊಂದಕ್ಕೆ ಇಂತಿಷ್ಟು ಬಾಟ್ಲಿ ಒಡೆಯುವುದೆಂಬ ಸಂಭಾವನೆಯು ನಮಗೆ ಗೊತ್ತಿದ್ದರೆ ಸೋಡಾ ಉತ್ಪಾದನೆಯ ವೆಚ್ಚದಲ್ಲಿ ಈ ನಷ್ಟವೆಚ್ಚವನ್ನೂ ಸೇರಿಸಿಕೊಳ್ಳಲು ಬರುವುದು. ಬದಲಾವಣೆಯು ಮುಖ್ಯವಲ್ಲ, ಭವಿಷ್ಯದ ಬಗ್ಗೆ ನಮಗಿರುವ ಅಪರಿಪೂರ್ಣ ತಿಳಿವಳಿಕೆಯು ಮುಖ್ಯವಾದುದು, ಅನಿಶ್ಚಿತತ್ವ ಮುಖ್ಯವಾದುದು ಎಂಬುದು ನೈಟ್ ಮೀಮಾಂಸೆಯ ತಿರುಳು. ಅನಿಶ್ಚಿತತ್ವಕ್ಕೆ

ಸಿಗುವ ಬಹುಮಾನವು 'ಮುನಾಫೆ' ಎನಿಸುವುದು. ಪಿಗೂ ಇದನ್ನೇ 'ನಷ್ಟಸಂಭವಕ್ಕೆ ದೊರೆಯುವ ಪ್ರತಿಫಲ'ವೆಂದು ಕರೆದಿರುವನು. ನಷ್ಟ ಸಂಭವವೂ, ಅನಿಶ್ಚಿತತ್ವವೂ ಆಳತೆಗೆ ಮೀರಿರುವುದರಿಂದ ಮುನಾಫೆ ಹುಟ್ಟು ತ್ತದೆ. ಪರಿಸ್ಥಿತಿಯು ಯಾವ ರೀತಿ ಬದಲಾಗುವುದೆಂದು ಮುಂಚಿತವಾಗಿ ತಿಳಿಯದೆ ಇದ್ದು, ಒಪ್ಪಿಕೊಂಡ ಮೊಬಲಗನ್ನು ತೆತ್ತ ಮೇಲೆ, ಮಾರಿ ಬಂದ ಮೊಬಲಗಿನಲ್ಲಿ ಏನಾದರೂ ಶೇಷ ಉಳಿದಿದ್ದರೆ ಅದನ್ನು ಮುನಾಫೆ ಎಂದು ನಿರ್ದಾಕ್ಷಿಣ್ಯವಾಗಿ ಹೇಳೋಣ. ಅನಿಶ್ಚಿತತ್ವದ ಭಾರವನ್ನು ಆಸ್ತಿ ವಂತರೂ ಹಣವಂತರೂ ತಮ್ಮ ಹೆಗಲ ಮೇಲೆ ಹೊತ್ತಿರುವುದರಿಂದ ಮುನಾಫೆಯು ಅವರಿಗೇ ಸಲ್ಲಬೇಕು ಎಂಬುದನ್ನೂ ಒಪ್ಪೋಣ.

**ಮುನಾಫೆ ಇರಲೇ ಬೇಕೆ?**

ಸರಕುಗಳನ್ನಿಟ್ಟುಕೊಂಡಿರುವ ಮಾಲಕನಿಗೆ ಅವನ ಬರಿಯ ಒಡೆ ತನದ ಸಲುವಾಗಿ 'ಮುನಾಫೆ' ಏತಕ್ಕೆ ಕೊಡಬೇಕು? ಉತ್ಪತ್ತಿಯ ಧಾರ ಣೆಗೂ ಒಳಸೇರಿಕೆಗಳ ಧಾರಣೆಗೂ ವ್ಯತ್ಯಾಸ ಉಂಟಾಗುವುದೇಕೆ? ಮೇಲಾ ಟದ ಸನ್ನಿವೇಶ ಇರುವುದರಿಂದ ಉತ್ಪತ್ತಿಯ ಧಾರಣೆಯು ಇಳಿದು, ಒಳ ಸೇರಿಕೆಗಳ ಧಾರಣೆಯು ಏರಿ, ತಾರತಮ್ಯವು ಅಳಿಯುವುದಿಲ್ಲವೇಕೆ? ಅಂತು ಮುನಾಫೆಯು ನಾಶವಾಗುವುದಿಲ್ಲವೇಕೆ? ಎಂಬ ಪ್ರಶ್ನೆಗಳನ್ನು ಈಗ ವಿಚಾರಿಸೋಣ.

ಹಣಕ್ಕೂ ಸರಕಿಗೂ ಇರುವ ಒಂದು ಮುಖ್ಯ ಭೇದವನ್ನು ಇಲ್ಲಿ ಗಮನಿಸಬೇಕು ಹಣವು ತುಂಬಾ 'ದ್ರವ್ಯ'ವಾಗಿರುವ ಸರಕು. ಸರಕು ಗಳು 'ದ್ರವ್ಯ'ವಾಗಬೇಕಾದರೆ ಅವನ್ನು ಹಣದ ರೂಪಕ್ಕೆ ತರಬೇಕು. ಈ ಕಾರ್ಯಕ್ಕೆ ಸಮಯ ತಗಲುವುದರಿಂದ ಸಂಚಾಲಕರೂ ಮಾರಾಟಗಾರರೂ ಸರಕನ್ನಿಟ್ಟುಕೊಂಡುದಕ್ಕೆ ನಾವು ಅವರಿಗೆ ಪ್ರತಿಫಲವನ್ನು ಕೊಡದೆ ಹೋ ದಲ್ಲಿ ಅವರು ತಮ್ಮ ಹತ್ತಿರ ಇರುವ ಸರಕುಗಳನ್ನು ಏಕಪ್ರಕಾರವಾಗಿ ಮಾರಿ ಹಣಪಡೆಯಲು ಯತ್ನಿಸುವರು. ಹಲವಾರು ಸರಕುಗಳು ಈ ರೀತಿಯಾಗಿ ಹಣವಾಗುವುದಕ್ಕೆ ಯತ್ನಿಸಿದರೆ ಆರ್ಥಿಕ ವ್ಯವಸ್ಥೆಯಲ್ಲಿ ಭಯಂಕರವಾದ ಏರಿಳಿತಗಳಾಗುವುವು. ಅವಯವಗಳ ಧಾರಣೆಗೂ(ಸಂಚಾಲಕರ ವೆಚ್ಚಕ್ಕೂ)

ಸರಕಿನ ಧಾರಣೆಗೂ ತಾರತಮ್ಯವು ಇಲ್ಲದಿದ್ದರೆ ಸರಕುಗಳನ್ನೇತಕ್ಕೋಸ್ಕರ ಇರಿಸಿಕೊಳ್ಳೋಣ? ನಷ್ಟಸಂಭವ ಹಾಗೂ ಅನಿಶ್ಚಿತತ್ವದ ಜವಾಬುದಾರಿ ನಿರ್ವಹಿಸಿದುದಕ್ಕೆ ಪ್ರತಿಫಲವು ಇಲ್ಲದಿದ್ದರೆ ಅಂಥ ಕೆಲಸವನ್ನು ಯಾಕೆ ಮಾಡೋಣ? ಎಂದು ಸಂಚಾಲಕರು ಅವಯುವಗಳನ್ನು ಕೊಳ್ಳುವುದು ತೊರೆದು, ಇದ್ದ ಸರಕುಗಳನ್ನು ಹಣದ ರೂಪದಲ್ಲಿಡಲು ಯತ್ನಿಸುವರು. ಇತ್ತ ಅವಯುವಗಳಿಗೂ ಬೇಡಿಕೆ ಕುಗ್ಗಿ ಧಾರಣೆ ತಗ್ಗುವುದು; ಅತ್ತ ಸರಕುಗಳ ಧಾರಣೆಯೂ ಕುಸಿಯುವುದು. ಸರಕುಗಳ ಧಾರಣೆ ಕಡಮೆಯಾಗುತ್ತ ಬಂದ ಹಾಗೆ ಸರಕುಗಳನ್ನಿಟ್ಟುಕೊಳ್ಳುವುದು ಮತ್ತಷ್ಟು ನಷ್ಟದಾಯಕವಾಗುವುದರಿಂದ ಉತ್ಪತ್ತಿಯ ಪೂರೈಕೆಯು ಇನ್ನಷ್ಟು ಹೆಚ್ಚಿ, ಧಾರಣೆಯು ಮತ್ತಷ್ಟು ಕುಸಿಯುವುದು. ತಮ್ಮಲ್ಲಿರುವ ಸರಕುಗಳನ್ನು ಹಣವಾಗಿ ಮಾರ್ಪಡಿಸುವ ಹವ್ಯಾಸವು ಬೆಳೆಯದ ಹಾಗೆ ಸಂಚಾಲಕರಿಗೆ 'ಮುನಾಫೆ'ಯನ್ನು ತೆರಬೇಕಾಗುವುದು. ಸರ್ವತಂತ್ರಸ್ವತಂತ್ರವಾದ ಸಮಾಜದಲ್ಲಿ ಸಂಚಾಲಕರು ತಮ್ಮ ಕರ್ತವ್ಯವನ್ನು ನಿರ್ವಹಿಸಬೇಕಾದರೆ ಮುನಾಫೆಯು ಇದ್ದೇ ತೀರಬೇಕು.

# ಹದಿನೈದನೆಯ ಅಧ್ಯಾಯ

# ಹಣಪ್ರಪಂಚ

**ಹಣವು ಇಲ್ಲದಿದ್ದರೆ:**

ಹಣವಿಲ್ಲದಿದ್ದರೆ ವಿನಿಮಯವು ಅದಲಾಬದಲಿಯಿಂದ ಸಾಗಬೇಕು. ಹತ್ತು ಖಂಡಿ ಅಡಿಕೆಗೆ ಮೂವತ್ತು ಖಂಡಿ ಭತ್ತ ಸಿಗುವುದಾದರೆ, ಅಡಿಕೆಯ ಧಾರಣೆ ಖಂಡಿಗೆ ಮೂರು ಖಂಡಿ ಭತ್ತ ಎಂದು ಲೆಕ್ಕ. ಅದಲಾಬದಲಿಯನ್ನೇ ನಂಬಿಕೊಂಡಿರುವ ಸಮಾಜದಲ್ಲಿ ಒಬ್ಬನ ಕೈಯಲ್ಲಿ ಎರಡು ಸೇರು ಅಕ್ಕಿ ಇದ್ದು ಅವನು ಅದನ್ನು ಮಾರಬೇಕಾದರೆ ಅಕ್ಕಿಬೇಕಾದವನು ಒಬ್ಬಾತ ಬೇರೆ ಇರಲೇ ಬೇಕು. ಅಕ್ಕಿ ಮಾರುವವನಿಗೆ ಅಕ್ಕಿ ಕೊಳ್ಳುವವನು ಕೊಡುವ ಎಣ್ಣೆಯ ಮೇಲೋ, ಕಲ್ಲಿನ ಮೇಲೋ ಕಾಯಸ ಇರಬೇಕಾದೀತು. ಅದಲಾಬದಲಿ ನಡೆಯುವಾಗ ಎರಡು ಸರಕುಗಳ ಮೌಲ್ಯವನ್ನು ಅಳೆಯುವ ಸಮಾನಮಾನದಂಡವು ಇರುವುದಿಲ್ಲ. ಮನುಷ್ಯನ ಆರ್ಥಿಕಸಮಾಜದಲ್ಲಿ ಸುಧಾರಣೆಯುಂಟಾದ ಹಾಗೆ ವಿನಿಮಯವಾಗುವ ಸರಕುಗಳಲ್ಲದೆ ಮೂರನೆಯ ಒಂದು ಸರಕನ್ನು–ಆರ್ಯಾವರ್ತದಲ್ಲಿ ಗೋವುಗಳನ್ನು–ಅಳತೆಗೋಲಾಗಿ ಇರಿಸಿಕೊಳ್ಳುವುದು ರೂಢಿಯಾಗುವುದು. ಚಿಕ್ಕ ಚಿಕ್ಕ ಅಂಶಗಳನ್ನು ವಿನಿಮಯ ಮಾಡಿಕೊಳ್ಳುವಾಗ ಗೋವಿನಷ್ಟು ದೊಡ್ಡ ಮಾನದಂಡದಿಂದ ಉಪಯೋಗವಿಲ್ಲ. ಮಾನದಂಡವು ಚಿಕ್ಕದಾಗಿ ವಿಭಜಿಸಲು ಬರಬೇಕೆಂದಿದ್ದರೆ ಹಣವೇ ಅದಕ್ಕೆ ಸರಿ ಎನಿಸಿದ ವಸ್ತು.

**ಹಣವು ಮಾಡುವ ಕೆಲಸ:**

(೧) ವಿನಿಮಯದ ಮಾಧ್ಯಮ: ಅದಲಾಬದಲಿಯ ಕಷ್ಟವನ್ನು ನಿವಾರಿಸುವುದು ಹಣದ ಕೆಲಸ. ನಾವು ಇನ್ನೊಬ್ಬನಿಗೆ ಕೊಡುವ ಮೊಬಲಗನ್ನು ಹಣದ ರೂಪದಲ್ಲಿ ಸಲ್ಲಿಸುವೆವು. ತಾವು ಕೊಟ್ಟ ಸರಕಿಗೂ, ಮಾಡಿದ ಸೇವೆಗಳಿಗೂ ಪ್ರತಿಯಾಗಿ ಜನರು ಹಣವನ್ನು ಸ್ವೀಕರಿಸುವರು. ತಮಗೆ ಬೇಕಾದಾಗ ಹಣವನ್ನು ಕೊಟ್ಟು ಇಷ್ಟಬಂದ ಸರಕು ಸೇವೆಗಳನ್ನು

ಪಡೆಯಬಹುದೆಂದು ಅವರಿಗೆ ಗೊತ್ತಿದೆ. ಹಣವು ಸಾಮಾನ್ಯವಾಗಿ ಸರ್ವರೂ ಸ್ವೀಕರಿಸುವ 'ಗ್ರಾಹಕಶಕ್ತಿ' ಎಂದೂ, ಅದು ಕೈಯಿಂದ ಕೈಗೆ ತಿರುಗುವುದರಿಂದ 'ಚಲಾವಣೆಯ ಹಣ'ವೆಂದೂ ಎನಿಸಿಕೊಳ್ಳುವುದು.

(೨) ಮೌಲ್ಯದ ಮಾನದಂಡ: ಒಂದು ವಸ್ತುವನ್ನು ಹಣವೆಂದು ಸ್ವೀಕರಿಸಲು ಎಲ್ಲರೂ ಒಪ್ಪಿದ ಮೇಲೆ ನಮ್ಮಲ್ಲಿರುವ ಸರಕು ಸೇವೆಗಳನ್ನು ನಾವು ಈ ಮಾಧ್ಯಮದ ಮೂಲಕವಾಗಿಯೇ ಹೇಳಲಿಚ್ಛಿಸುತ್ತೇವೆ ರಾಮ ನಿಗೆ ನೂರುಮುಡಿ ಅಕ್ಕಿಯ ಹುಟ್ಟುವಳಿ ಇದೆ ಎನ್ನುವ ಬದಲು ಅವನ ವರಮಾನವು ೧೬೦೦ ರುಪಾಯಿ ಎಂದು ಹೇಳಬಹುದು ಟೈಪು ಹೊಡೆದು ತಿಂಗಳಿಗೆ ೬೦ ರುಪಾಯಿ ಸಂಪಾದಿಸುವ ಭೀಮನು ಸರಕುಗಳ ಧಾರಣೆ ಯನ್ನು ನೋಡಿಕೊಂಡು ತನ್ನ ಹಣವನ್ನು ವಿನಿಯೋಗಿಸಲು ಅನುಕೂಲ ವಾಗುವುದು. ಪ್ರತಿ ಅವಯವಕ್ಕೂ ಇಂತಿಷ್ಟು ಕೂಲಿ ಎಂಬುದು ಹಣವಿ ದ್ದರೆ ನಿಖರವಾಗಿ ತಿಳಿಯುವುದು ದರ್ಜಿಯ ಸೇವೆಯ ಬೆಲೆ ಇಷ್ಟು, ಬಡಗಿಯ ಮೌಲ್ಯ ಇಷ್ಟು, ಕಬ್ಬಿನ ತೋಟಕ್ಕಿಷ್ಟು ಎಂಬುದು ಖಚಿ ತವಾಗಿ ತಿಳಿಯಬೇಕಾದರೆ ಹಣವು ಇರಲೇ ಬೇಕು. ಅದಲಾಬದಲಿಯ ಸಮಾಜದಲ್ಲಿ ಸರಕಿನ ಧಾರಣೆಗೆ ಅನುಸಾರವಾಗಿ ತಮ್ಮ ಉತ್ಪಾದನೆಯ ವೆಚ್ಚದ ಪರಿಮಾಣವನ್ನು ಹೆಚ್ಚು ಕಡಮೆ ಮಾಡಿಕೊಳ್ಳುವುದು ಉತ್ಪಾದ ಕರಿಗೆ ಕಷ್ಟಸಾಧ್ಯವಾಗುವುದು. ಇಲ್ಲಿ ಹಣವು 'ಲೆಕ್ಕಾಚಾರದ ಏಕಾಂಶ' ವಾಗಿ ಕೆಲಸಮಾಡುವುದು.

(೩) ಮುಂದೂಡಿದ ಸಂದಾಯವನ್ನು ಸಾಗಿಸುವ ಸಾಧನ: ಈಗ ಕೊಡದೆ ಇನ್ನುಮುಂದೆ ಕೊಡುವೆವೆಂದು ನಾವು ವಾಗ್ದಾನ ಮಾಡಿರುವ ಹಣವನ್ನು ಭವಿಷ್ಯದಲ್ಲಿ ಸಂದಾಯಮಾಡುವ ಅನುಕೂಲತೆಯನ್ನು ಹಣವೇ ಒದಗಿಸುವುದು. ಇದರಿಂದ ಸಾಲ ತೆಗೆದುಕೊಳ್ಳುವುದೂ ಕೊಡುವುದೂ ಸಾಧ್ಯವಾಗುತ್ತವೆ. ಸಾಲಿಗನಿಂದ ಇಂದು ಪಡೆದ ನೂರು ರುಪಾಯಿ ಯನ್ನು ಇನ್ನೊಂದು ವರ್ಷದ ಮೇಲೆ ವಾವತಿ ಮಾಡುವಾಗ ಅದಕ್ಕೆ ಹೆಚ್ಚು ಕಡಮೆ ಈಗಿರುವಷ್ಟೇ ಬೆಲೆ ಇರುವುದರಿಂದ ಸಾಲಿಗನು ಹಣವನ್ನು ಆದರ ದಿಂದ ಬರಮಾಡಿಕೊಳ್ಳುವನು.

(೪) ಮೌಲ್ಯವನ್ನು ಸಂಗ್ರಹಿಸಿಡುವ ಸಾಧನ: ಈಗಿರುವ ಸಂಪತ್ತನ್ನು ಇನ್ನು ಮುಂದಕ್ಕೆ ವಿನಿಯೋಗಿಸಲು ಅನುಕೂಲವಾಗುವಂತೆ ಸಂಪತ್ತನ್ನು ಹಣದ ರೂಪದಲ್ಲಿ ಶೇಖರಿಸಿಡುವುದು ಸೂಕ್ತವಾಗಿದೆ. ಧಾನ್ಯ, ತರಕಾರಿ, ಬಟ್ಟೆಗಳು ಕಾಲಕ್ರಮೇಣ ಹಾಳಾಗುವುವು; ಹಣವು ಹಾಳಾಗುವುದಿಲ್ಲ.

**ಹಣದ ಬಗೆಗಳು:**

ಈ ನಾಲ್ಕು ಕೆಲಸಗಳನ್ನು ಮಾಡಬಲ್ಲ ಯಾವ ವಸ್ತುವಿಗೂ ಹಣವೆಂದು ಕರೆಯುತ್ತಾರೆ ಪೂರ್ವಕಾಲದಲ್ಲಿ ಗೋವುಗಳೂ, ಕವಡೆಗಳೂ ಈ ಕೆಲಸ ಮಾಡುತ್ತಿದ್ದುವಂತೆ. ಆಗ ಅವು ಹಣವಾಗಿದ್ದುವು (೧) ಒಂದು ರುಪಾಯಿಯ ನಾಣ್ಯದಲ್ಲಿ ಹದಿನಾರಾಣೆಯ ಬೆಳ್ಳಿಯ ತೂಕವಿರಬೇಕು. ಆದರೆ ಇತ್ತೀಚೆಗೆ ನಾಣ್ಯದಲ್ಲಿ ಬೆಳ್ಳಿಯ ಅಂಶವು ಕಡಿಮೆಯಾಗಿದೆ ರಾಣೀ ರುಪಾಯಿ, ಎಡ್ವರ್ಡ್ ರುಪಾಯಿ, ಜಾರ್ಜ್ ರುಪಾಯಿಗಳನ್ನು ಹೋಲಿಸಿದರೆ ಈಚೀಚೆಗೆ ರುಪಾಯಿಯಲ್ಲಿರುವ ಲೋಹದ ಬೆಲೆಯು ರುಪಾಯಿಯ ಅಚ್ಚಿನ ಬೆಲೆಯಷ್ಟು ಇಲ್ಲವೆಂಬುದು ನಮಗೆ ತಿಳಿಯುವುದು. ಈಗ ಎಲ್ಲ ದೇಶಗಳಲ್ಲಿಯೂ ನಾಣ್ಯಗಳು ಸಂಜ್ಞಾನಾಣ್ಯಗಳಾಗಿವೆ. (೨) ಈಗ ಅತ್ಯಂತ ಪ್ರಚಾರದಲ್ಲಿರುವ ಹಣವೆಂದರೆ ನೋಟುಗಳು. ಇವನ್ನು ಸರಕಾರವು ಹೊರಡಿಸುವುದು ಬ್ಯಾಂಕುಗಳೂ (ಕೇಂದ್ರಬ್ಯಾಂಕು) ಹೊರಡಿಸುವುದುಂಟು. (೩) ಸಾಲದ ಉಪಕರಣಗಳು: ಚೆಕ್ಕು, ಹುಂಡಿ, ಹೊರದೇಶದ ಹುಂಡಿಗಳು ಅತಿ ಹೆಚ್ಚು ಪ್ರಚಾರದಲ್ಲಿರುವಂಥವುಗಳು. ದೇಶದಲ್ಲಿ ಬ್ಯಾಂಕಿಂಗ್ ಪದ್ಧತಿಯು ಸರ್ವತ್ರ ವ್ಯಾಪಿಸಿದಹಾಗೆ ನಾಣ್ಯ ನೋಟುಗಳನ್ನು ಬರೇ ಚಿಲ್ಲರೆ ವ್ಯಾಪಾರಕ್ಕಾಗಿಯೂ, ರಕಮಿನ ಎಲ್ಲ ವ್ಯವಹಾರಗಳಲ್ಲಿ ಇಂಥ ಸಾಲದ ಪತ್ರಗಳನ್ನೂ ಬಳಸುವರು.

ರೂಪ್ಯಾ ಆಣೆ ಪೈಗಳಿಗೆ ಅವುಗಳಲ್ಲಿ ಬರೆದಿರುವಷ್ಟು ಬೆಲೆ ಇಲ್ಲವೆಂದು ನಮಗೆ ತಿಳಿದಿರುವುದಾದರೂ ಸರಕಾರವು ಅವಕ್ಕೆ ಅಷ್ಟು ಬೆಲೆ ಎಂದು ನಿರ್ಣಯಿಸಿ, ನಮ್ಮನ್ನು ಕಾನೂನುಪ್ರಕಾರ ಒತ್ತಾಯಿಸುವುದರಿಂದ ನಾವು ಆ ಬೆಲೆಗಳನ್ನು ವಿರೋಧಿಸುವ ಹಾಗಿಲ್ಲ. ಬರೆಯುಲಿಕ್ಕೂ ಆಗದ ಕಾಗದದ ಚೂರನ್ನು ಹಣವೆಂದು ಕರೆಯುವ ನಮ್ಮನ್ನು ಮೌರ್ಯಕಾಲೀನರು ಹುಚ್ಚರೆಂದು ಕರೆಯುತಿದ್ದರೇನೋ. ಸರಕಾರದ ವಿಧಿಯನ್ನು ಮೀರುವವರಾರು?

## ನಮ್ಮ ಹಣಪ್ರಪಂಚ:




## ಬ್ಯಾಂಕ್ ನೋಟು:

ಹತ್ತು ರುಪಾಯಿಯ ಒಂದು ರಿಸರ್ವ ಬ್ಯಾಂಕ್ ನೋಟನ್ನು ತೆಗೆದು ನೋಡಿದರೆ ಅದರಲ್ಲಿ 'ಇದನ್ನು ಹಿಡಿದುಕೊಂಡವನಿಗೆ ಹತ್ತು ರುಪಾಯಿಯನ್ನು ಕೊಡುತ್ತೇನೆಂದು ನಾನು ವಾಗ್ದಾನ ಮಾಡುವೆ' ಎಂದು ಬರೆದಿದ್ದು ಕೆಳಗಡೆ ಬ್ಯಾಂಕಿನ ಗವರ್ನರರ ಸಹಿ ಇರುತ್ತದೆ ಅದರ ಮೇಲೆ ಬರೆದಿರುವ ನಿಶ್ಚಿತ ಮೊಬಲಗನ್ನು ಕೇಳಿದಾಗ ಕೊಡುವ ವಾಗ್ದಾನವು ಬ್ಯಾಂಕು ನೋಟು ಎನಿಸುವುದು. ಅಮೇರಿಕದ ಸಂಯುಕ್ತ ರಾಷ್ಟ್ರದ ಖಜಾನೆಯವರು ಇದೇ ರೀತಿ ತಾವು ತೆಗೆದುಕೊಂಡ ಚಿನ್ನಕ್ಕೆ ಕೊಡುವ ಸರ್ಟಿಫಿಕೇಟು ಕೂಡ ಒಂದು ಬಗೆಯ ವಾಗ್ದಾನ ರಿಸರ್ವ ಬ್ಯಾಂಕಿನ ಹತ್ತಿರ ಇರುವ ಚಿನ್ನ ಬೆಳ್ಳಿಗಿಂತ ಎಷ್ಟೋ ಹೆಚ್ಚು ಬೆಲೆಯ ನಾಣ್ಯಗಳನ್ನು ಅದು ಹೊರಗೆ ಹಾಕುವುದು ಹೇಗೆ ಸಾಧ್ಯ? ಎಂಬುದನ್ನು ಪರಿಶೀಲಿಸುವ. ರಿಸರ್ವ ಬ್ಯಾಂಕಿಗೆ ಪ್ರತಿದಿನವೂ ನೋಟು ತಂದುಕೊಟ್ಟು ನಾಣ್ಯ ಕೇಳುವವರೆಷ್ಟೋ ಜನ, ನಾಣ್ಯ ಕೊಟ್ಟು ನೋಟು ಕೇಳುವವರೆಷ್ಟೋ ಜನ

ಇರುತ್ತಾರೆ ನನ್ನ ಕೈಯಲ್ಲಿರುವ ಒಂದು ರುಪಾಯಿ ನೋಟನ್ನು ನಾನು ಇಟ್ಟುಕೊಂಡರೆ ಆಗ ನಾನು ಒಂದು ರುಪಾಯಿ ನಾಣ್ಯವನ್ನು ರಿಸರ್ವ ಬ್ಯಾಂಕಿಗೆ ಸಾಲಕೊಟ್ಟ ಹಾಗಾಯಿತು ನೋಟು ಇದ್ದವರೆಲ್ಲ ರಿಸರ್ವ ಬ್ಯಾಂಕಿನ ಹತ್ತಿರ ನಾಣ್ಯಕೇಳಲು ಹೋಗುವುದಿಲ್ಲವಾದುದರಿಂದ ಬ್ಯಾಂಕು ನೋಟು ಹೊರಡಿಸಿದಷ್ಟೇ ಮೊಬಲಗಿನ ಚಿನ್ನ ಬೆಳ್ಳಿಯ ನಾಣ್ಯಗಳನ್ನು ಇಟ್ಟುಕೊಳ್ಳಬೇಕಾಗಿಲ್ಲ ಸಾಧಾರಣವಾಗಿ ಒಂದು ದಿನಕ್ಕೆಷ್ಟು ನಾಣ್ಯ ಗಳು ಬೇಕಾದಾವು ಎಂಬುದು ಬ್ಯಾಂಕಿಗೆ ತಿಳಿದಿರುತ್ತದೆ. ಅಷ್ಟು ನಾಣ್ಯ ವಿದ್ದರಾಯಿತು ಆ ಮೇಲೆ ಎಷ್ಟು ನೋಟು ಹೊರಡಿಸಿದರೂ ಚಿಂತಿಲ್ಲ. ಆ ನೋಟುಗಳನ್ನು ಸಾಲಕೊಟ್ಟರೂ ಚಿಂತಿಲ್ಲ ಬ್ಯಾಂಕುಗಳು ಕ್ರೆಡಿಟ್ ಸೃಷ್ಟಿಸಿ ಚಲಾವಣೆಯನ್ನು ಹೆಚ್ಚಿಸುವುದು ಹೀಗೆಯೇ. ಮುಂಬರಿದ ದೇಶ ಗಳಲ್ಲಿ ಈಗೀಗ ನೋಟುಗಳ ಪ್ರಾಬಲ್ಯವು ಕುಗ್ಗಿ ಚೆಕ್ಕುಗಳು ಅತಿ ಹೆಚ್ಚು ಪ್ರಚಾರದಲ್ಲಿವೆ. ಸಂಯುಕ್ತ ರಾಷ್ಟ್ರ, ಇಂಗ್ಲೆಂಡುಗಳಲ್ಲಿ ೯೦%ನಷ್ಟು ವ್ಯವ ಹಾರಗಳು ಚೆಕ್ಕಿನ ಮೂಲಕವೇ ನಡೆಯುವುವು.

**ಲೇಣೆ, ದೇಣೆ: ಕೇಳಿಕೆ:**

ಬ್ಯಾಂಕಿಂಗ್ ಪದ್ಧತಿಯ ಅರಿವಾಗಬೇಕಾದರೆ ಲೇಣೆ ದೇಣೆಗಳ ಹೊಲಬು ಚೆನ್ನಾಗಿ ತಿಳಿದಿರಬೇಕು. ಪ್ರತಿಯೊಂದು ವ್ಯಕ್ತಿಯ ಮನೆ ಮಾರು, ಆಸ್ತಿಪಾಸ್ತಿ, ಸಂಬಳ ಉಂಬಳ ಅವನ ಲೇಣೆ ಎನಿಸುತ್ತವೆ. ಅವನು ಹೊರಗೆ ಕೊಡಬೇಕಾದ ಸಾಲಮೂಲಗಳು ದೇಣೆ ಎನಿಸುತ್ತವೆ. ಪ್ರಪಂಚ ದಲ್ಲಿರುವುದು ಒಂದೇ ಒಂದು ಸಮಾಜ ಎಂದು ಎಣಿಸಿದರೆ ಆ ಸಮಾಜದ ಲೇಣೆಯೂ, ದೇಣೆಯೂ ಒಂದಿಷ್ಟೂ ಹೆಚ್ಚು ಕಡಿಮೆಯಿಲ್ಲದೆ ಸರಿಸಮಾನ ವಾಗಬೇಕು. ಒಂದು ಕೂಡು ಬಂಡವಾಳದ ಸಂಸ್ಥೆಯು ಬಾಂಡುಗಳನ್ನು ಹೊರಡಿಸಿದಾಗಲೂ, ಕಟ್ಟಡ ನಿರ್ಮಾಣದ ಸಂಘವು ಆಸ್ತಿಯನ್ನು ಅಡವು ಹಾಕಿದಾಗಲೂ, ವ್ಯಕ್ತಿಯು ಸೇವಿಂಗ್ಸ್ ಬ್ಯಾಂಕಿನಲ್ಲಿ ಡಿಪಾಸಿಟು ಇರಿಸಿ ದಾಗಲೂ, ವ್ಯಾವಹಾರಿಕ ಬ್ಯಾಂಕುಗಳು ಸಾಲ ಕೊಡುವಾಗಲೂ, 'ಕೇಳಿಕೆ' ಗಳು ಸೃಷ್ಟಿ ಆಗುವುವು. ಒಂದು ಬ್ಯಾಲೆನ್ಸ್‌ಶೀಟಿನಲ್ಲಿ ಇದು ಲೇಣೆ ಎಂದೂ ಇನ್ನೊಂದರಲ್ಲಿ ದೇಣೆ ಎಂದೂ ಕಂಡುಬರುವುದು. ಎಲ್ಲ ಲೇಣೆಗಳ

ಮೊತ್ತವು ಹೀಗೆ ಹೆಚ್ಚಾದರೂ ಒಟ್ಟು ಸಮಾಜದ ಬಂಡವಾಳವು ಹೆಚ್ಚ ಬೇಕಾಗಿಲ್ಲ. ಬಾಂಡು, ಷೆಯರು ಮಾರಿದ ಹಣದಿಂದ ಯಾವುದಾದರೂ ಉದ್ಯಮವನ್ನು ತೆರೆದು ಸರಕುಗಳು ಹೆಚ್ಚಿದರೆ ಮಾತ್ರ ಬಂಡವಾಳವು ಅತಿ ಶಯವಾದೀತೇ ಹೊರತು ಬರೇ ಕೇಳಿಕೆಗಳ ಸೃಷ್ಟಿಯಿಂದ ವೈಶೇಷಿಕ ಬಂಡವಾಳವು ಹೆಚ್ಚುವುದಿಲ್ಲ. ಹಾಗಾದರೆ ಕೇಳಿಕೆಯಿಂದ ಪ್ರಯೋಜನ ವೇನು? ಒಂದನೆಯದಾಗಿ, ಕೇಳಿಕೆಗಳಿರುವುದರಿಂದ ಬಂಡವಾಳದ ಒಡೆ ತನವೂ, ಬಂಡವಾಳದ ನಿಯಂತ್ರಣವೂ ಬೇರೆಬೇರೆ ಜನರ ಕೈಯಲ್ಲಿ ಬರು ವುದು ಸಾಧ್ಯವಾಯಿತು. ಎರಡನೆಯದಾಗಿ, ದ್ರವ್ಯವಾದ ಲೇಣೆಗಳನ್ನು ಪಡೆಯುವ ಸೌಲಭ್ಯ ಉಂಟಾಯಿತು. ಒಂದು ಸರಕು ಕೊಳ್ಳುವುದಕ್ಕೂ, ಸಾಲ ತೀರಿಸುವುದಕ್ಕೂ ಇಂತಹ ದ್ರವ್ಯಲೇಣೆಗಳು ಸಹಾಯವಾಗುವುವು. ಈ ಬಗೆಯ ದ್ರವ್ಯಲೇಣೆಯನ್ನು ವ್ಯಾವಹಾರಿಕ ಬ್ಯಾಂಕುಗಳು ಸೃಷ್ಟಿಸ ಬಲ್ಲವು. ಸೇವಿಂಗ್ಸ್ ಬ್ಯಾಂಕುಗಳಲ್ಲಿ ಇಟ್ಟ ಹಣವನ್ನು ಇಟ್ಟವನು ಕೈ ಬದ ಲಾಯಿಸುವುದಿಲ್ಲ ನನ್ನ ಸ್ವಂತ ಉಪಯೋಗಕ್ಕಾಗಿ ಇರಿಸಿದ ನೂರು ರುಪಾಯಿ ಹಣವು ಸೇವಿಂಗ್ಸ್ ಬ್ಯಾಂಕಿಗೆ ದೇಣೆಯಾಯಿತು. ನನಗೆ ಲೇಣೆ ಯಾಯಿತು. ಆದರೂ ಈ ಡಿಪಾಸಿಟು ತಿರುಗಾಟಕ್ಕೆ ಹೊರಡದಿರುವುದ ರಿಂದ ಇದು 'ಹಣ'ವಲ್ಲ, ಇನ್ವೆಸ್ಟ್‌ಮೆಂಟು ಬ್ಯಾಂಕಿನಲ್ಲಿರಿಸಿದ ಹಣವೂ 'ದ್ರವ್ಯ'ವಲ್ಲವಾದುದರಿಂದ ಅದೂ 'ಹಣ'ವಲ್ಲ.

**ವ್ಯಾವಹಾರಿಕ ಬ್ಯಾಂಕಿನ ಕಾರ್ಯಕಲಾಪ:**

ಮೊತ್ತಮೊದಲಿನ ಬ್ಯಾಂಕರುಗಳು ಅಕ್ಕಸಾಲಿಗರಾದರೂ, ಬ್ಯಾಂಕು ನಮ್ಮ ನಿಧಿಯನ್ನು ಬರೇ ಸಂಗ್ರಹವಾಗಿ–ರಕ್ಷಣೆಗಾಗಿ–ಇಟ್ಟುಕೊಳ್ಳುವ ಸಂಸ್ಥೆಯಲ್ಲ. ಈ ರೀತಿ ರಕ್ಷಣೆಗಾಗಿ ಬ್ಯಾಂಕಿಗೆ ಬರುವ ನಿಧಿಯು ಅತ್ಯಲ್ಪ. ಬ್ಯಾಂಕು ಡಿಪಾಸಿಟೆಂದರೆ ಸರ್ಪಕಾವಲಿರುವ ಕೊಪ್ಪರಿಗೆಯಲ್ಲ. ಇನ್ನು ಕೆಲವರಿಗೆ ಒಬ್ಬನ ಹಣವನ್ನು ತೆಗೆದುಕೊಂಡು ಇನ್ನೊಬ್ಬನಿಗೆ ಸಾಲಕೊ ಡುವ ದಲಾಲಿ ಕೆಲಸ ಬ್ಯಾಂಕಿನದು ಎಂಬ ತಪ್ಪೆಣಿಕೆಯುಂಟು. ಬ್ಯಾಂಕು ದಲಾಲಿಯಷ್ಟೇ ಅಲ್ಲ. ಜನರ ಉಳಿತಾಯವನ್ನೋ, ಡಿಪಾಸಿಟನ್ನೋ ಕಾದು ಸಂಗ್ರಹವಾಗಿಡುವ ರಕ್ಷಣಾ ಸಂಘವಷ್ಟೇ ಅಲ್ಲ ಹಾಗಾದರೆ ಬ್ಯಾಂಕು ಮಾಡುವ ಮಹತ್ವಾದ ಕಾರ್ಯವೇನು? ಎಂಬುದನ್ನು ತಿಳಿಯು

ಬೇಕು. ಬ್ಯಾಂಕು ಡಿಪಾಸಿಟಿನ ಅರ್ಥಮಾಡಿಕೊಳ್ಳಬೇಕು. 'ಡಿಪಾಸಿಟು' ಜನರು ಬ್ಯಾಂಕಿಗೆ ಬರೀ ಸುರಕ್ಷಿತವಾಗಿ ಒಳಗಿಡಲು ಕೊಟ್ಟ ಹಣವಲ್ಲ. ಅದು ಅವರು ಬ್ಯಾಂಕಿಗೆ ಕೆಲವು ಶರ್ತಗಳ ಮೇಲಿಂದ ಕೊಟ್ಟ ಸಾಲ. ಸಾಲವನ್ನು ಕೇಳಿದಾಗ ಕೊಟ್ಟೇನೆಂದು ಬ್ಯಾಂಕು ಒಪ್ಪಿಕೊಳ್ಳಬೇಕಾದ್ದು ಮೊದಲ ಹಾಗೂ ಪ್ರಾಮುಖ್ಯ ಶರ್ತ ಈ ದೃಷ್ಟಿಯಿಂದ ಬ್ಯಾಂಕ ಡಿಪಾಸಿಟು ಒಂದು ಬಗೆಯ ಸೆಕ್ಯೂರಿಟಿ; ಹೆಚ್ಚು ದ್ರವ್ಯಗುಣವುಳ್ಳ ಸೆಕ್ಯೂರಿಟಿ. ಎರಡು ಬಗೆಯ ಡಿಪಾಸಿಟುಗಳಿವೆ. (೧) ಡಿಮಾಂಡ್ ಡಿಪಾಸಿಟು ಅಥವಾ ಕರೆಂಟ್ ಡಿಪಾಸಿಟು ಇದರಲ್ಲಿ ಬ್ಯಾಂಕು ನಾವು ಕೇಳಿದ ತಕ್ಷಣ ಹಿಂದೆ ಕೊಡುವ ವಾಗ್ದಾನವನ್ನು ಮಾಡುವುದು (೨) ಸೇವಿಂಗ್ಸ ಡಿಪಾಸಿಟು ಅಥವಾ ಫಿಕ್ಸೆಡ್ ಡಿಪಾಸಿಟು ಇದನ್ನು ಡಿಪಾಸಿಟು ಇಟ್ಟಾತನು ಹಿಂತೆಗೆಯಬೇಕಾದರೆ ಕೆಲವು ಕಾಲ ಮುಂಚಿತವಾಗಿ ಬ್ಯಾಂಕಿಗೆ ತಿಳಿಸಬೇಕು.

ಡಿಪಾಸಿಟು ಎಂದರೆ ಜನರು ಬ್ಯಾಂಕಿಗೆ ಕೊಡುವ ಸಾಲ ಎಂಬುದು ಈಗ ತಿಳಿಯಿತು. ಬ್ಯಾಂಕು ತಾನೇ ಸಾಲಕೊಡುವ ಕ್ರಮವೂ ಉಂಟು. ವ್ಯತ್ಯಾಸ ಇಷ್ಟೇ. ಬ್ಯಾಂಕಿನ ಸಾಲದಲ್ಲಿ ಕೇಳಿದಾಗ ತಕ್ಷಣ ಕೊಟ್ಟೇನೆಂಬ ಡಿಮಾಂಡ್ ಡಿಪಾಸಿಟಿನಲ್ಲಿರುವಂಥ ಕಠಿಣ ಶರ್ತವು ಇಲ್ಲ ಇದ್ದರೆ ಸಾಲ ಕೊಳ್ಳುವವರಿಗೆ ಅಂಜಿಕೆಯೇ, ಸರಿ ನಿಶ್ಚಿತವಾದ ಒಂದು ಕಾಲಾವಧಿಯನ್ನು ಹಾಕಿಯೋ, ತಾರೀಕನ್ನು ನಿರ್ಣಯಿಸಿಯೋ ಬ್ಯಾಂಕು ಸಾಲ ನೀಡುವುದು. ಬ್ಯಾಂಕು ಜನರಿಂದ ಸಾಲ ಪಡೆಯುವಾಗ ಅವರಿಗೆ ಅತಿ ಹಿತವಾದ, ಅತ್ಯಂತ ಅನುಕೂಲವಾದ ಶರ್ತಗಳ ಮೇಲಿಂದ ಸಾಲವನ್ನು ಸ್ವೀಕರಿಸುವುದರಿಂದ ಜನರು ಬ್ಯಾಂಕಿನಲ್ಲಿ ಡಿಪಾಸಿಟು ಇಡುವುದಕ್ಕೆ ಅಥವಾ ಸಾಲಕೊಡುವುದಕ್ಕೆ ವೆಚ್ಚವನ್ನು ಬೇಡುವುದಿಲ್ಲ. ಆದುದರಿಂದ ಡಿಮಾಂಡ್ ಡಿಪಾಸಿಟುಗಳಿಗೆ ಈಗೀಗ ಬಡ್ಡಿಯು ಸೊನ್ನೆಯಾಗಿರುವುದು ಮಾತ್ರವಲ್ಲ, ಪ್ರತಿಯಾಗಿ ಇಂಥ ಸೌಲಭ್ಯವನ್ನು ಕಲ್ಪಿಸಿದುದಕ್ಕಾಗಿ ಕೃತಜ್ಞತೆಯಿಂದ ಜನರೇ ತಮ್ಮ ಸಾಲಕ್ಕೆ, ಬ್ಯಾಂಕು ತಮ್ಮ ಡಿಪಾಸಿಟು ಇರಿಸಿಕೊಂಡುದಕ್ಕೆ 'ಬ್ಯಾಂಕು ಛಾರ್ಜ್' ಕೊಡಲೂ ತಯಾರಾಗಿದ್ದಾರೆ. ಇಂತು ಬಹಳ ಕಡಮೆ ಬಡ್ಡಿಯಲ್ಲಿ ಸಾಲಪಡೆಯುವುದು ಬ್ಯಾಂಕಿಗೆ ಸಾಧ್ಯವಾಗಿದೆ. ಬ್ಯಾಂಕು ಹೊರಗೆ ಸಾಲಕೊಡುವಾಗಲೂ ಸಾಲಗಾರರಿಗೆ ಅನೇಕ ಸೌಲಭ್ಯ

ಗಳನ್ನು ದೊರಕಿಸಿಕೊಡುವುದು ಸಹಜವಾದರೂ, ಬಡ್ಡಿಯ ದರವು ಡಿಪಾಸಿಟಿನ ಬಡ್ಡಿಗಿಂತ ಹೆಚ್ಚಾಗಿರುತ್ತದೆ ಈ ಎರಡು ಧಾರಣೆಗಳ ತಾರತಮ್ಯವೇ ಬ್ಯಾಂಕಿನ ವರಮಾನ, ಲಾಭ.

ಬ್ಯಾಂಕಿನ ಕೆಲಸವೇನು? ಎಂಬುದು ಮುಂದಿನ ಪ್ರಶ್ನೆ ನೂರು ರುಪಾಯಿಯ ನಾಣ್ಯವನ್ನು ನಾವು ಬ್ಯಾಂಕಿನಲ್ಲಿಟ್ಟಾಗ ಬ್ಯಾಂಕು ನಮ್ಮ ಪರವಾಗಿ ನೂರು ರುಪಾಯಿಯ ಒಂದು ಡಿಪಾಸಿಟನ್ನೇ ಸೃಷ್ಟಿಸುವುದು. ಈಗ ನೂರು ರುಪಾಯಿ ನಾಣ್ಯದ ಬದಲಿಗೆ, ನಮ್ಮ ಹತ್ತಿರ ನೂರು ರುಪಾಯಿ ಬೆಲೆಯ ಬ್ಯಾಂಕುವಾಗ್ದಾನ–ಡಿಪಾಸಿಟು–ಇದೆ. ಬ್ಯಾಂಕಿನಿಂದ ನೂರು ರುಪಾಯಿ ನಾಣ್ಯವನ್ನು ನಾವು ತೆಗೆದರೆ ಆಗ ಡಿಪಾಸಿಟು ನಿರ್ನಾಮವಾಗುವುದು. ಬ್ಯಾಂಕುಗಳು ನೋಟು ಹೊರಡಿಸುವ ಪದ್ಧತಿ ಈಗ ನಿಂತು ಹೋಗಿದೆಯಾದರೂ ೧೯ನೆಯ ಶತಮಾನದಲ್ಲಿ ಇದೂ ಪ್ರಚಾರದಲ್ಲಿತ್ತು ನೋಟು ಕೂಡ ಡಿಪಾಸಿಟಿನಂತೆ ಒಂದು ಬಗೆಯ ವಾಗ್ದಾನ. ಡಿಪಾಸಿಟು ಆಯಾ ವ್ಯಕ್ತಿಗೆ ಬ್ಯಾಂಕು ಕೊಡುವ ವಾಗ್ದಾನ; ಇದನ್ನು ಬೇರೊಬ್ಬರು ಹೋಗಿ ಕೇಳುವುದಕ್ಕಿಲ್ಲ. ಆದರೆ ನೋಟು ಹಿಡಿದು ಕೊಂಡವನು ಯಾರೂ ಕೇಂದ್ರ ಬ್ಯಾಂಕಿಗೆ ಹೋಗಿ ಆ ನೋಟನ್ನು ಕೊಟ್ಟು ರುಪಾಯಿ ನಾಣ್ಯವನ್ನು ಪಡೆಯಬಲ್ಲನು.

## ಬ್ಯಾಂಕಿನಲ್ಲಿ ಕ್ರೆಡಿಟಿನ ಸೃಷ್ಟಿ:

ಕೇಳಿದ ಕೂಡಲೇ ಹಣಕೊಡುವುದಷ್ಟೇ ಬ್ಯಾಂಕಿನ ಕೆಲಸವಲ್ಲ. ಸಾಲ ಕೊಡುವುದು, ಸೆಕ್ಯೂರಿಟಿ ಕೊಳ್ಳುವುದು, ಅಡವು ಹಾಕಿಸುವುದು, ಆಸ್ತಿ ಪಡೆಯುವುದು—ಮುಂತಾದ ಕೆಲಸಗಳನ್ನೂ ಬ್ಯಾಂಕು ಮಾಡುತ್ತದೆ. ಅಡವನ್ನು ಕೊಳ್ಳಲಿ, ಸಾಲ ಕೊಡಲಿ, ಸೆಕ್ಯೂರಿಟಿ ಕೊಳ್ಳಲಿ—ಬ್ಯಾಂಕು ಈ ರೀತಿ ಏನನ್ನಾದರೂ ಕೊಂಡುಕೊಂಡಾಗ ಏನಾಗುವುದೆಂಬುದನ್ನು ವಿಮರ್ಶಿಸಬೇಕು. ಸಾಲವು ಒಂದು ಬಗೆಯ ಸೆಕ್ಯೂರಿಟಿಯೇ. ಬ್ಯಾಂಕು ಸರಕಾರದ ಸೆಕ್ಯೂರಿಟಿಯನ್ನು ಕೊಂಡಾಗ ಭವಿಷ್ಯದ ಒಂದು ನಿಶ್ಚಿತ ತಾರೀಕಿಗೆ ಸರಕಾರವು ಕೊಡುವ ಹಣವನ್ನು ಸ್ವೀಕರಿಸುವಂತೆಯೇ, ಮೂರು ತಿಂಗಳ ಸಾಲ ಕೊಟ್ಟಾಗಲೂ ಮೂರು ತಿಂಗಳ ಮೇಲೆ ವಾಪಾಸುಕೊಡುವೆನೆಂಬ ಕುಳದ 'ಸೆಕ್ಯೂರಿಟಿ'ಯನ್ನು, ವಾಗ್ದಾನವನ್ನು, ಪಡೆಯಿತು ಎಂದರ್ಥ.

ಬ್ಯಾಂಕು ರಾಮುನಿಂದ ಐದುಲಕ್ಷ ರುಪಾಯಿಯ ಬಾಂಡನ್ನು ಪಡೆದಾಗ ಅವನಿಗೆ ಅಷ್ಟೇ ಮೊಬಲಗಿನ ಒಂದು ಡಿಪಾಸಿಟನ್ನು ಕೊಡುವುದು. ಬಾಂಡೂ ಒಂದು ಸೆಕ್ಯೂರಿಟಿ; ಡಿಪಾಸಿಟೂ ಒಂದು ಸೆಕ್ಯೂರಿಟಿ—ಎರಡೂ ವಾಗ್ದಾನಗಳು ರಾಮುನು ಬ್ಯಾಂಕಿಗೆ ನಾನು "ಐದುಲಕ್ಷ ರುಪಾಯಿ ಕೊಡುತ್ತೇನೆ. ನೀವು ಐದುಲಕ್ಷ ನನಗೆ ಕೊಡಿ" ಎಂದರೆ ಹೇಗಾದೀತೋ ಹಾಗೆ. ಬ್ಯಾಂಕು ಯಾವುದಾದರೂ 'ಎಸ್ಸೆಟ'ನ್ನು ಕೊಳ್ಳುವಾಗ ನಡೆಯುವ ಕಾರ್ಯವೇನೋ ಇಂಥದೇ ಎಂಬುದರಲ್ಲಿ ಸಂದೇಹವಿಲ್ಲ ಆದರೆ ಈ ನಡುವೆ ದೇಶದಲ್ಲಿರುವ ಸೆಕ್ಯೂರಿಟಿಗಳು ಇಮ್ಮಡಿಸುವುವು ಹತ್ತುಲಕ್ಷ ರುಪಾಯಿಯ ಸೆಕ್ಯೂರಿಟಿ ಸೃಷ್ಟಿಯಾಗುವುದು, ಬ್ಯಾಂಕು ತೋಮುನಿಗೆ ಮೂರು ತಿಂಗಳ ಮುಟ್ಟಿಗೆ ೫೦೦೦ ರುಪಾಯಿ ಸಾಲಕೊಟ್ಟಾಗ ಬ್ಯಾಂಕಿಗೆ ೫೦೦೦ದ ಒಂದು ಸೆಕ್ಯೂರಿಟಿ ಸಿಕ್ಕಿತು. ತೋಮುನು ಬಡ್ಡಿ ಸೇರಿಸಿ ಈ ಸೆಕ್ಯೂರಿಟಿ ಹಿಂದೆ ಕೊಡಲೊಪ್ಪಿದ್ದಾನೆ ತಾನೇ. ಅವನ ಪಾಲಿಗೆ ಬ್ಯಾಂಕಿನ ೫೦೦೦ದ ಡಿಪಾಸಿಟು ಇದೆ ಆದುದರಿಂದ ಅವನಿಗೂ ೫೦೦೦ದ ಸೆಕ್ಯೂರಿಟಿ ಸಿಕ್ಕಿದ ಹಾಗಾಯಿತು.

ತೋಮುನಿಗೆ ಬ್ಯಾಂಕು ೫೦೦೦ದ ಸಾಲಕೊಟ್ಟಾಗ ೫೦೦೦ದ ಸಾಲದ ಸೆಕ್ಯೂರಿಟಿಯೂ, ೫೦೦೦ದ ಡಿಪಾಸಿಟಿನ ಸೆಕ್ಯೂರಿಟಿಯೂ ಸೃಷ್ಟಿಯಾಗುವುವು. ಬ್ಯಾಂಕು ಕೂಡಲೇ ತೋಮುನಿಗೆ ತನ್ನ ೫೦೦೦ ರುಪಾಯಿ ಕೊಟ್ಟು ತನ್ನ ವಾಗ್ದಾನವನ್ನು ಪೂರೈಸಿಬಿಟ್ಟರೆ ಡಿಪಾಸಿಟು ನಾಶವಾಗುವುದು. ಆದರೆ ತೋಮುನು ೫೦೦೦ದ ಸಾಲಪಡೆದು, ಬ್ಯಾಂಕು ೫೦೦೦ದ ಡಿಪಾಸಿಟನ್ನು ಅವನ ಸಲುವಾಗಿ ಸೃಷ್ಟಿಸಿದಾಗ, ತೋಮುನು ಸಾಮಾನ್ಯವಾಗಿ ತನ್ನ ಎಲ್ಲಾ ಡಿಪಾಸಿಟನ್ನು ಆಗಲೇ ಬಳಸಿಕೊಳ್ಳುವುದಿಲ್ಲ. ಸ್ವಲ್ಪಾಂಶ ನಗದಾಗಿ ಪಡೆದುಕೊಂಡರೂ ಉಳಿದುವನ್ನು ಹಾಗೆಯೇ ಬ್ಯಾಂಕಿನಲ್ಲಿ ಇಟ್ಟಿರುತ್ತಾನೆ. ಬೇರೆಯವರಿಗೆ ಅವನು ಸಲ್ಲಿಸಬೇಕಾದ 'ದೇಣೆ'ಗಳನ್ನು 'ಚೆಕ್ಕು'ಮುಖಾಂತರವಾಗಿ ಸಂದಾಯ ಮಾಡುತ್ತಾನೆ ಅಂದರೆ ತೋಮುನು ಸೋಮುನಿಗೆ ೨೦೦ ರುಪಾಯಿ ಕೊಡಬೇಕಾಗಿದೆ ಎಂದು ಭಾವಿಸುವ. ಆಗ ಅವನು ಬ್ಯಾಂಕಿನ ತನ್ನ ಡಿಪಾಸಿಟನಲ್ಲಿ ೨೦೦ ರುಪಾಯಿಯನ್ನು ಸೋಮುನ ಹೆಸರಿಗೆ ವರ್ಗಾಯಿಸಬಹುದು. ಆಗ ಬ್ಯಾಂಕು ತೋಮುನಿಗೆ ಕೊಟ್ಟ

೨೦೦ ರುಪಾಯಿಯ ಡಿಪಾಸಿಟು ನಾಶವಾಯಿತು. ಬದಲಿಗೆ ಹೊಸ ಗಿರಾಕಿ ಸೋಮನಿಗೆ ೨೦೦ ರುಪಾಯಿಯ ಡಿಪಾಸಿಟನ್ನು ಕೊಟ್ಟಂತಾಯಿತು ಬ್ಯಾಂಕು ಡಿಪಾಸಿಟು ಎಂದರೆ ಸಾಲಿಗನಾದ ಡಿಪಾಸಿಟರನು ಕೇಳಿದಾಗ ಕೊಡುವೆನೆಂಬ ವಾಗ್ದಾನದ ಮೇಲೆ ಬ್ಯಾಂಕು ತೆಗೆದುಕೊಂಡ ಸಾಲವಷ್ಟೆ. ಆದುದರಿಂದ ಸಾಲಿಗ ತೋಮನು ಬ್ಯಾಂಕಿನ ಹತ್ತಿರ 'ನನ್ನ ಸಾಲದಲ್ಲಿ ೨೦೦ ರುಪಾಯಿಯನ್ನು ಸೋಮನಿಗೆ ಕೊಡಿರಿ' ಎಂದು ಚೆಕ್ಕು ಬರೆದು ಕೊಟ್ಟರೆ ಬ್ಯಾಂಕು ಅವನ ಮಾತನ್ನು ಪಾಲಿಸುತ್ತದೆ. ಸೋಮನು ತೋಮನ ಚೆಕ್ಕನ್ನು ಹಿಡಿದುಕೊಂಡು ಅವನ (ತೋಮನ) ಬ್ಯಾಂಕಿಗೆ ಹೋಗಿ ೨೦೦ ರುಪಾಯಿ ನಗದು ಪಡೆದುಕೊಳ್ಳಬಹುದು, ಅಥವಾ ಬ್ಯಾಂಕಿನಲ್ಲಿರುವ ತನ್ನ ಡಿಪಾಸಿಟಿಗೆ ೨೦೦ ರುಪಾಯಿ ಸೇರಿಸಿಕೊಳ್ಳಿರೆಂದು ಅನುಮತಿ ಕೊಡಬಹುದು. ಈಗಿನ ಕಾಲದಲ್ಲಿ 'ಚೆಕ್ಕಿ'ನ ಮುಖಾಂತರವಾಗಿ ಸಾಲತೀರಿಸುವುದು ಬಹಳ ಸಾಮಾನ್ಯವಾಗಿದೆ.

ಬ್ಯಾಂಕ್ ಡಿಪಾಸಿಟುಗಳನ್ನು ಸುಲಭವಾಗಿ ವರ್ಗಾಯಿಸಲು ಬರುವುದರಿಂದಲೇ ಅವುಗಳು ಇಷ್ಟು ಪ್ರಚಾರಕ್ಕೆ ಬಂದಿರುವುವು ಕೇಳಿದಾಗ ನಗದು ಕೊಟ್ಟೇನೆಂಬ ವಾಗ್ದಾನವೇ ಬ್ಯಾಂಕ್ ಡಿಪಾಸಿಟು. ಸರಕುಗಳಿಗೆ ಕೊಡಲಿಕ್ಕೂ, ಬೀಲುಗಳನ್ನು ತೀರಿಸಲಿಕ್ಕೂ, ನಗದು ಬೇಕಾಗುತ್ತದೆ. ನನ್ನ ಮಾವನಿಗೆ ನಾನು ನೂರು ರೂಪಾಯಿ ಕೊಡಬೇಕಾಗಿದ್ದ ಪಕ್ಷಕ್ಕೆ, ನಗದು ಕೊಡುವುದರ ಬದಲು ನನ್ನ ಬ್ಯಾಂಕಿಗೆ ಒಂದು ಚೆಕ್ಕು ಬರೆದು ಕೊಡಬಹುದು. ಚೆಕ್ಕು ನಗದಿನ ಹಾಗೆ ಕಳೆದುಹೋಗುವುದಿಲ್ಲ. ಮಾವನ ಹೆಸರಿನಲ್ಲೇ ಚೆಕ್ಕು ಇರುವುದರಿಂದ, ಕದ್ದ ಕಳ್ಳನಿಗೆ ಅದರಿಂದ ಉಪಯೋಗವಿಲ್ಲ. ಗುರುತು ಪರಿಚಯವಿಲ್ಲದವರ ಹತ್ತಿರ ಅಥವಾ ಸಣ್ಣ ಚಿಕ್ಕ ಮೊತ್ತಗಳನ್ನು ಸಲ್ಲಿಸುವಾಗ ಮಾತ್ರ ನಗದನ್ನು ಬಳಸುತ್ತಾರೆ. ಹಣ ಸಂದಾಯ ಮಾಡಲಿಚ್ಛಿಸುವವರೆಲ್ಲರೂ ತಮ್ಮ ಸಂಪತ್ತಿನ ಕೆಲವು ಭಾಗವನ್ನು ಡಿಪಾಸಿಟಾಗಿಯೂ, ಕೆಲವು ಭಾಗವನ್ನು ನಗದಾಗಿಯೂ ಇಟ್ಟಿರುತ್ತಾರೆ. ಬ್ಯಾಂಕು ಡಿಪಾಸಿಟುಗಳು ನಗದಿನಂತೆ ಬಹಳ ದ್ರವ್ಯವಾದ ಸಂದಾಯದ ಸಾಧನಗಳು. ನನ್ನ ಹತ್ತಿರ ೧೦೦೦ ರುಪಾಯಿ ಇದ್ದರೆ ಸಾವಿರ ರುಪಾಯಿಯ ಸರಕು ಸೇವೆಗಳನ್ನು ಕೇಳುವ ಹಕ್ಕು ನನಗುಂಟು ಎಂದರ್ಥ.

೧೦೦೦ ರುಪಾಯಿ ಡಿಪಾಸಿಟಿದ್ದರೆ ಆಗಲೂ ಸಾವಿರ ರುಪಾಯಿ ನಗದನ್ನು ನಾನು ಕೇಳಿದಾಗ ಕೊಡಲು ಬ್ಯಾಂಕು ಸಿದ್ಧವಿದೆ. ಅಂದರೆ ನನಗೆ ಬೇಕಾದಾಗ ನಾನು ೧೦೦೦ ರುಪಾಯಿಯ ಸರಕು ಸೇವೆಗಳನ್ನು ಪಡೆಯಬಹುದು. ಅರ್ಥಾತ್, ನಗದೂ ಡಿಪಾಸಿಟೂ ಒಂದಕ್ಕೊಂದು ಹತ್ತಿರದ ಸಂಬಂಧವುಳ್ಳ ಪ್ರತಿನಿಧಾನಗಳು

## ಏಕಮಾತ್ರ ಬ್ಯಾಂಕಿನ ಬ್ಯಾಲೆನ್ಸ್ ಶೀಟು:

ಜಗತ್ತಿನಲ್ಲಿ 'ಹೆಬ್ಬುಲಿ ಬ್ಯಾಂಕ್' ಎಂಬ ಒಂದೇ ಒಂದು ಬ್ಯಾಂಕಿದೆ ಎಂದು ಭಾವಿಸೋಣ. ಬ್ಯಾಂಕಿಗೆ ಸ್ಥಿರಚರಬಂಡವಾಳಗಳಿಲ್ಲವೆಂದೂ, ಹೊರಗಿನವರಿಂದ ಹಣ ಸ್ವೀಕರಿಸುವುದು, ಅವರಿಗೆ ಕೊಡುವುದು—ಇಷ್ಟೇ ಬ್ಯಾಂಕಿನ ಕರ್ತವ್ಯವೆಂದೂ ಊಹಿಸೋಣ. ಆಗ ನಾವು ಈ ಬ್ಯಾಂಕಿನಲ್ಲಿ ಹತ್ತು ಸಾವಿರ ರುಪಾಯಿ ನಗದು ಹಣವನ್ನು ಕೊಂಡು ಹೋಗಿಟ್ಟರೆ ಬ್ಯಾಲೆನ್ಸ್ ಶೀಟು ಹೀಗೆ ಕಾಣಿಸುವುದು

| ಲೇಣೆ. | ದೇಣೆ. |
| --- | --- |
| ನಗದು ೧೦,೦೦೦ ರುಪಾಯಿ | ಡಿಪಾಸಿಟು ೧೦,೦೦೦ ರುಪಾಯಿ. |

ಈಗ ಬ್ಯಾಂಕು ತೋಮನಿಗೆ ೫,೦೦೦ ರುಪಾಯಿ ಸಾಲಕೊಟ್ಟರೆ ಲೇಣೆಗೂ ದೇಣೆಗೂ ಐದ್ಮೈದು ಸಾವಿರ ರುಪಾಯಿ ಕೂಡಿಸಿದಂತಾಗುವುದು.

| ಲೇಣೆ: | ದೇಣೆ. |
| --- | --- |
| ನಗದು ೧೦,೦೦೦ | ಡಿಪಾಸಿಟು ೧೫,೦೦೦ |
| ಸಾಲ ೫,೦೦೦ | |

ತೋಮನು ತನ್ನ ಡಿಪಾಸಿಟಿನ ಪೈಕಿ ೫,೦೦೦ವನ್ನು ಹಿಂದೆ ಕೊಟ್ಟು ನಗದು ೫,೦೦೦ವನ್ನು ಪಡೆದುಕೊಂಡಾಗ ಬ್ಯಾಲೆನ್ಸು ಶೀಟು ಕೆಳಗೆ ಕಂಡಂತೆ ಬದಲಾಗುವುದು.

| ಲೇಣೆ. | ದೇಣೆ. |
| --- | --- |
| ನಗದು ೫೦೦೦ | ಡಿಪಾಸಿಟು ೧೦,೦೦೦ |
| ಸಾಲ ೫೦೦೦ | |

ಐದು ಸಾವಿರ ರುಪಾಯಿಯನ್ನು ನಗದಾಗಿ ಪಡೆದುಕೊಳ್ಳುವುದರ ಬದಲು ತೋಮನು ಸೋಮನ ಹೆಸರಿನಲ್ಲಿ ಅಷ್ಟೇ ಮೊಬಲಗಿನ ಚೆಕ್ಕು ಬರೆದು ಕೊಟ್ಟರೆ ಬ್ಯಾಲೆನ್ಸ್ ಶೀಟು ಹೀಗೆ ಕಾಣುವುದು.

| ಲೇಣೆ: | ದೇಣೆ. |
| --- | --- |
| ನಗದು ೧೦,೦೦೦ | ಡಿಪಾಸಿಟು ೧೫,೦೦೦ |
| ಸಾಲ ೫,೦೦೦ | |

ಇಲ್ಲಿ ಡಿಪಾಸಿಟಿನ ಮೊತ್ತದಲ್ಲಿ ವ್ಯತ್ಯಾಸ ಬಂದಿಲ್ಲ ತೋಮನ ಡಿಪಾಸಿಟು ಹೋಗಿ ಸೋಮನದಾಯಿತು, ಅಷ್ಟೆ. ಡಿಪಾಸಿಟು ಹೆಚ್ಚಿದ್ದರಿಂದ ಜನರು ಸ್ವಲ್ಪ ಹೆಚ್ಚು — ಉದಾ:- ೨೦% = ೩೦೦೦ ರುಪಾಯಿಯಷ್ಟು —ನಗದು ಇಟ್ಟುಕೊಳ್ಳಲು ಬಯಸಿದರೆ ಆಗ ಬ್ಯಾಲೆನ್ಸ್ ಶೀಟು ಹೀಗೆ ತೋರುವುದು:

| ಲೇಣೆ: | ದೇಣೆ. |
| --- | --- |
| ನಗದು ೭,೦೦೦ | ಡಿಪಾಸಿಟು ೧೨,೦೦೦ |
| ಸಾಲ ೫,೦೦೦ | |

ಸಾಲ ಕೊಟ್ಟುದರ ಅಂತಿಮ ಪರಿಣಾಮವು ಇಲ್ಲಿ ವ್ಯಕ್ತವಾಗಿದೆ. ಡಿಪಾಸಿಟು ಸಾಲಕೊಟ್ಟ ಮೊಬಲಗಿನಷ್ಟು ಏರಲಿಲ್ಲ. ಸಾಲದ ಮೊಬಲಗಿಗೂ ಡಿಪಾಸಿಟು ಏರಿಕೆಯ ಮೊಬಲಗಿಗೂ ಇರುವ ಅಂತರವು ಹೆಚ್ಚಿಗೆ ಹೊರಗೆ ಹೋದ ನಗದು. ಬ್ಯಾಂಕು ೫,೦೦೦ ರುಪಾಯಿ ಸಾಲ ಕೊಟ್ಟಾಗ ಅದರ ಡಿಪಾಸಿಟು ೨೦೦೦ ರುಪಾಯಿಯಷ್ಟು ಹೆಚ್ಚಿತೆಂದೂ, ಬ್ಯಾಂಕಿನಲ್ಲಿರುವ ನಗದು ೩,೦೦೦ದಷ್ಟು ಕಡಮೆಯಾಯಿತೆಂದೂ ನಮಗಿಲ್ಲಿ ಕಾಣುವುದು.

ಬ್ಯಾಂಕು ಹೆಚ್ಚು ಹೆಚ್ಚು ಸಾಲಕೊಡುತ್ತ ಬಂದಂತೆ ಡಿಪಾಸಿಟು ಅದೇ ದಾಮಾಶಯದಲ್ಲಿ ಏರುವುದಿಲ್ಲವೆಂಬುದು ಇಲ್ಲಿ ಚೆನ್ನಾಗಿ ವಿದಿತವಾಗುವುದು. ಸಾಲಕ್ಕೂ ಡಿಪಾಸಿಟಿಗೂ ನಡುವೆ ತಾರತಮ್ಯ ಉಂಟಾಗಲು ಬ್ಯಾಂಕಿನಲ್ಲಿರುವ ನಗದಿನ ಪರಿಮಾಣವು ಕುಗ್ಗುವುದು ಕಾರಣ. ನಗದು ಸೊನ್ನೆಯಾದರೆ ಬ್ಯಾಂಕು ಇನ್ನು ಮುಂದೆ ಸಾಲಕೊಡಲಾರದು ಎಂದರ್ಥ. ನಗದಿನ ಶೂನ್ಯಬಿಂದು ಬರುವುದಕ್ಕೆ ಎಷ್ಟೋ ಮೊದಲು ಬ್ಯಾಂಕುಗಳು ಸಾಲಕೊಡುವುದನ್ನು ನಿಲ್ಲಿಸುವುವು. ಸಮಗ್ರ ಡಿಪಾಸಿಟಿಗೂ ದ್ರವ್ಯವಾಗಿ

ರುವ 'ಲೇಣೆ' (ಇಲ್ಲಿನ ನಗದು)ಗಳಿಗೂ ನಿಶ್ಚಿತವಾದ ಒಂದು ದಾಮಾಶಯ ವನ್ನಿರಿಸಿಕೊಂಡು ಅದನ್ನು ಕಾಪಾಡಲು ಬ್ಯಾಂಕುಗಳು ತುಂಬಾ ಪ್ರಯತ್ನಿಸುವುವು ಇದಕ್ಕೆ 'ನಗದಿನ ನಿಷ್ಪತ್ತಿ' ಅಥವಾ 'ರಿಸರ್ವ ನಿಷ್ಪತ್ತಿ' ಎನ್ನುವರು

**ಒಂದಕ್ಕಿಂತ ಹೆಚ್ಚು ಬ್ಯಾಂಕುಗಳಿರುವಾಗ:**

ನಮ್ಮ ಏಕಮಾತ್ರ 'ಹೆಬ್ಬುಲಿ ಬ್ಯಾಂಕಿ'ನ ಬದಲಿಗೆ ಪ್ರಪಂಚದಲ್ಲಿ ಇನ್ನೂ ಹಲವು ಬ್ಯಾಂಕುಗಳಿವೆ ಎಂದು ಭಾವಿಸೋಣ. ಮೊತ್ತ ಮೊದಲು ನಮ್ಮ ದೇಶದಲ್ಲಿ ಹೆಬ್ಬುಲಿಬ್ಯಾಂಕಿನ ಜತೆಗೆ ಬಬ್ಬುಲಿ ಬ್ಯಾಂಕೂ ಒಂದು ಇದ್ದರೆ ಏನಾಗುವುದು ಎಂಬುದನ್ನು ಪರಿಶೀಲಿಸುವ. ಹೆಬ್ಬುಲಿ ಬ್ಯಾಂಕು ಸಾಲಕೊಟ್ಟಾಗ ಅದರ ಡಿಪಾಸಿಟು ಹೆಚ್ಚುವುದೆಂದೂ, ನಗದು ಕೊಂಚ ಕಡಮೆಯಾಗುವುದೆಂದೂ ನಾವು ಕಂಡೆವು ಎರಡು ಬ್ಯಾಂಕುಗಳಿರುವಾಗ ಹೆಬ್ಬುಲಿ ಬ್ಯಾಂಕಿನಲ್ಲಿ ನಗದು ಕಡಮೆಯಾಗಲು ಎರಡು ಕಾರಣಗಳು ತೋರುವುವು. (೧) ಅದೇ ಬ್ಯಾಂಕಿನ ಕುಳವಾರುಗಳು ತಮ್ಮ ಡಿಪಾಸಿಟಿನ ಒಂದಂಶವನ್ನು ನಗದಾಗಿ ಕೊಳ್ಳುವುದು (೨) ಅವರು ತಮ್ಮ ಡಿಪಾಸಿಟಿನ ಇನ್ನೊಂದಂಶವನ್ನು ಬಬ್ಬುಲಿ ಬ್ಯಾಂಕಿನ ಕುಳವಾರುಗಳಿಗೆ ಚೆಕ್ಕು ಮೂಲಕ ವರ್ಗಾಯಿಸುವುದು. ತೋಮನು ಹೆಬ್ಬುಲಿ ಬ್ಯಾಂಕಿನ ಕುಳವಾರೆಂದೂ ಸೋಮನು ಬಬ್ಬುಲಿ ಬ್ಯಾಂಕಿನ ಕುಳವಾರೆಂದೂ ಭಾವಿಸೋಣ. ತನ್ನ ಡಿಪಾಸಿಟಿನಲ್ಲಿ ೫೦೦ ರುಪಾಯಿಯನ್ನು ತೋಮನು ಸೋಮನಿಗೆ ಚೆಕ್ಕುಮೂಲಕ ಕೊಟ್ಟಾಗ ಸೋಮನು ಆ ಹಣವನ್ನು ತನ್ನ ಬ್ಯಾಂಕಿನ ಡಿಪಾಸಿಟಾಗಿ ಮಾರ್ಪಡಿಸಲು ಯತ್ನಿಸುವನೆಂದು ಭಾವಿಸೋಣ. 'ದಯವಿಟ್ಟು ೫೦೦ ರುಪಾಯಿಯನ್ನು ಬಬ್ಬುಲಿ ಬ್ಯಾಂಕಿಗೆ ಕೊಡಿ' ಎಂದು ಅವನು ತನ್ನ ಸಹಿಹಾಕಿ ಚೆಕ್ಕನ್ನು ಬಬ್ಬುಲಿ ಬ್ಯಾಂಕಿಗೆ ಕೊಟ್ಟರೆ, ಆ ಬ್ಯಾಂಕು ಚೆಕ್ಕನ್ನು ಹಬ್ಬುಲಿ ಬ್ಯಾಂಕಿಗೆ ಕಳಿಸಿ ನಗದನ್ನು ಪಡೆದುಕೊಂಡು ಸೋಮನ ಹೆಸರಿನಲ್ಲಿ ಹೆಬ್ಬುಲಿ ಬ್ಯಾಂಕಿನಲ್ಲಿರುವ ಡಿಪಾಸಿಟನ್ನು ನಾಶಮಾಡುವುದು. ಹೆಬ್ಬುಲಿ ಬ್ಯಾಂಕು ಯಾರಿಗಾದರೂ ೫,೦೦೦ ರುಪಾಯಿ ಸಾಲ ಕೊಟ್ಟರೆ ಡಿಪಾಸಿಟು ೨,೦೦೦ದಷ್ಟು ಹೆಚ್ಚಿದರೂ ನಗದಿನಲ್ಲಿ ೩,೦೦೦

ರುಪಾಯಿ ಕಳೆದುಕೊಳ್ಳುವುದು. ಆದುದರಿಂದ ಹೆಬ್ಬುಲಿ ಬ್ಯಾಂಕು ತನ್ನಿಷ್ಟಬಂದ ಹಾಗೆ ಸಾಲ ಕೊಡಲು ಸಾಧ್ಯವಿಲ್ಲ. ಬ್ಯಾಂಕುಗಳ ಸಂಖ್ಯೆಯು ಅಧಿಕವಾದ ಹಾಗೆ ಒಂದೇ ಒಂದು ಬ್ಯಾಂಕಿಗೆ ತನ್ನ ಸಾಲದ ಚಟುವಟಿಕೆಯನ್ನು ವಿಸ್ತರಿಸಲು ಸಾಧ್ಯವಿಲ್ಲ. ಹಾಗಿದ್ದರೆ ಎಲ್ಲ ಬ್ಯಾಂಕುಗಳೂ ಸಮಾನಸ್ಕಂಧವಾಗಿ ನಡೆದು ಸಾಲದ ಚಟುವಟಿಕೆಯನ್ನು (ಕ್ರೆಡಿಟನ್ನು) ವಿಸ್ತರಿಸಲು ಸಾಧ್ಯವಿಲ್ಲವೆ? ಎಂದು ಕೇಳಬಹುದು. ನಿಜ. ಅನೇಕ ಬ್ಯಾಂಕುಗಳಿರುವಾಗ ಅವುಗಳಲ್ಲಿ ಯಾವುದಾದರೂ ಒಂದು ಬ್ಯಾಂಕು ಕ್ರೆಡಿಟ್ ವಿಸ್ತರಣವನ್ನು ಕೈಗೊಳ್ಳುವುದು ಅಸಾಧ್ಯವಾದರೂ, ಎಲ್ಲ ಬ್ಯಾಂಕುಗಳೂ ಜತೆಗೂಡಿ ಇಡಿ ಬ್ಯಾಂಕಿಂಗ್ ಮಂಡಲವೇ ವಿಸ್ತರಿಸಲು ಅವಕಾಶವು ಇದೆ. ಎಷ್ಟು ದೂರ ವಿಸ್ತರಿಸಬಹುದು ಎಂಬುದನ್ನು ನಗದಿನ ನಿಷ್ಪತ್ತಿಯು ನಿರ್ಣಯಿಸುವುದು.

ಸಾಲ ಕೊಡುವುದನ್ನು ಕಡಮೆ ಮಾಡಿದಾಗಲೂ ಇದೇ ತೆರನಾದ ವರ್ತನೆ ಕಂಡು ಬರುವುದು. ಹೆಬ್ಬುಲಿ ಬ್ಯಾಂಕು ತಾನು ಕೊಡುವ ಕ್ರೆಡಿಟನ್ನು ೫೦೦೦ ರುಪಾಯಿಗಳಷ್ಟು ಇಳಿಸಿದರೆ ಅದರ ಡಿಪಾಸಿಟು ಕಡಮೆಯಾಗುವುದೊಂದೇ ಅಲ್ಲ, ಅನೇಕ ಬ್ಯಾಂಕುಗಳಿರುವಲ್ಲಿ ಇತರ ಬ್ಯಾಂಕುಗಳ ಡಿಪಾಸಿಟುಗಳೂ ಕಡಮೆಯಾಗುವುವು. ಸಾರ್ವಜನಿಕರೂ ಇತರ ಬ್ಯಾಂಕುಗಳೂ ಹೆಬ್ಬುಲಿ ಬ್ಯಾಂಕಿಗೆ ತರುವ ನಗದಿನ ದೆಸೆಯಿಂದ ಹೆಬ್ಬುಲಿ ಬ್ಯಾಂಕಿನ ನಗದು ಹೆಚ್ಚುವುದು. 'ನಗದಿನ ನಿಷ್ಪತ್ತಿ'ಯು ಹೆಚ್ಚಾಯಿತೆಂದು ಕಂಡುಬಂದರೆ ಬ್ಯಾಂಕು ಸೆಕ್ಯೂರಿಟಿ, ಆಸ್ತಿ ಮುಂತಾದ ಇನ್ವೆಸ್ಟ್‌ಮೆಂಟುಗಳನ್ನು ಹೆಚ್ಚಿಸಿಕೊಳ್ಳುವುದು 'ನಗದಿನ ನಿಷ್ಪತ್ತಿ'ಯು ಮಿತಿಗಿಂತ ಕೆಳಗಿಳಿದರೆ ಸೆಕ್ಯೂರಿಟಿಗಳನ್ನು ಮಾರಿ ಇನ್ವೆಸ್ಟ್‌ಮೆಂಟು ಗಾತ್ರವನ್ನು ಕುಗ್ಗಿಸಿ ನಗದನ್ನು ತುಂಬಿಕೊಳ್ಳುವುದು.

**ಕೇಂದ್ರ ಬ್ಯಾಂಕು:**

ಪ್ರತಿಯೊಂದು ಬ್ಯಾಂಕೂ ತನ್ನ ಕೋಶವನ್ನು ನಗದಾಗಿ ಇರಿಸಿಕೊಳ್ಳುವುದೆಂದು ನಾವು ಈ ತನಕ ಅಂಗೀಕರಿಸಿರುವೆವು. ವಸ್ತುತಃ ಬ್ಯಾಂಕುಗಳು ತಮ್ಮ ಕೋಶದಲ್ಲಿ ನಗದು ಮಾತ್ರವಲ್ಲದೆ ದೇಶದ ಸೆಂಟ್ರಲ್

ಅಥವಾ ಕೇಂದ್ರ ಬ್ಯಾಂಕಿನ ಡಿಪಾಸಿಟನ್ನೂ ಸೇರಿಸಿಕೊಳ್ಳುವುವು. ಅಮೇರಿಕದ ಫೆಡರಲ್ ರಿಸರ್ವ ಮಂಡಲ, ಇಂಗ್ಲೆಂಡಿನ ಬ್ಯಾಂಕ್ ಒಫ್ ಇಂಗ್ಲೆಂಡ್, ಭಾರತದ ರಿಸರ್ವ ಬ್ಯಾಂಕ್ ಒಫ್ ಇಂಡಿಯಾ ಮೊದಲಾದ ಕೇಂದ್ರ ಬ್ಯಾಂಕುಗಳು ಹಲವಾರು ಕೆಲಸಗಳನ್ನು ಮಾಡುವುವು. ಕೇಂದ್ರ ಬ್ಯಾಂಕು ಬ್ಯಾಂಕಿನವರ ಬ್ಯಾಂಕು. ಬ್ಯಾಂಕುಗಳಿಗೆ ಹಣಕೊಡುವ ವಾಗ್ದಾನ ಮಾಡುವುದೂ (ಡಿಪಾಸಿಟು ಸೃಷ್ಟಿಸುವುದೂ) ಸದಸ್ಯ ಬ್ಯಾಂಕುಗಳ ವಾಗ್ದಾನವನ್ನು ಒಪ್ಪಿಕೊಳ್ಳುವುದೂ ಕೇಂದ್ರ ಬ್ಯಾಂಕಿನ ಒಂದನೆಯ ಕೆಲಸ ಕೇಂದ್ರ ಬ್ಯಾಂಕು ಸರಕಾರದ ಬ್ಯಾಂಕು ಸರಕಾರಿ ಡಿಪಾಸಿಟುಗಳನ್ನು ತನ್ನಲ್ಲಿರಿಸಿಕೊಂಡು ಸರಕಾರಕ್ಕೆ ಬೇಕಾದಾಗ ಸಾಲ ಕೊಡುವುದು ಅದರ ಎರಡನೆಯ ಕೆಲಸ. ಸರಕಾರದ ಅನುಜ್ಞೆಯ ಮೇರೆಗೆ ದೇಶದ ಹಣಕಾಸಿನ ವ್ಯವಸ್ಥೆಯನ್ನೂ ಬ್ಯಾಂಕಿಂಗ ಪದ್ಧತಿಯನ್ನೂ ಕ್ರಮವಾಗಿ ನಡೆಯಿಸುವುದು ಕೇಂದ್ರ ಬ್ಯಾಂಕಿನ ಮೂರನೆಯ ಕೆಲಸ. ದೇಶದೊಳಗಿನ ಚಿನ್ನದ ಸಂಗ್ರಹವನ್ನು ಜೋಪಾಸನೆಯಲ್ಲಿಟ್ಟುಕೊಳ್ಳುವುದೂ, ನೋಟು ಹೊರಡಿಸುವುದೂ ಅದರ ನಾಲ್ಕನೆಯ ಕೆಲಸ

ವ್ಯಾವಹಾರಿಕ ಬ್ಯಾಂಕುಗಳು ತಂತಮ್ಮೊಳಗಿನ ಲೇವಾದೇವಿಯನ್ನು ಬಗೆಹರಿಸಲು ನಗದಿಯೊಂದನ್ನೇ ಅಂತಿಮ ಸಾಧನವಾಗಿ ಉಪಯೋಗಿಸುವುದರ ಬದಲು ಕೇಂದ್ರ ಬ್ಯಾಂಕಿನ ಡಿಪಾಸಿಟನ್ನು ಬಳಸಿಕೊಳ್ಳಬಹುದು. ಸಾಮಾನ್ಯವಾಗಿ ಬ್ಯಾಂಕುಗಳು ತಮ್ಮ ಕುಳಗಳಿಗೆ ಸಾಲಕೊಟ್ಟು ಡಿಪಾಸಿಟು ಸೃಷ್ಟಿಸುವಂತೆ ಕೇಂದ್ರ ಬ್ಯಾಂಕುಗಳು ಸದಸ್ಯ ಬ್ಯಾಂಕುಗಳಿಗೆ ಸಾಲ ಕೊಟ್ಟಾಗ 'ಬ್ಯಾಂಕ ರಿಸರ್ವ'ಗಳುಂಟಾಗುವುವು ನ್ಯೂಯಾರ್ಕಿನ ಒಬ್ಬ ವ್ಯಾಪಾರಿಯು ವಿಲಾಯತಿಗೆ ಹತ್ತಿಯನ್ನು ಮಾರಿ ಎರಡು ತಿಂಗಳ ಮೇಲೆ ಅಲ್ಲಿಂದ ಹಣ ವಸೂಲು ಪಡೆಯುವನೆಂದು ಭಾವಿಸುವ. ಈ ವಹಿವಾಟು ನಿರ್ವಂಚನೆಯ ವ್ಯಾಪಾರವಾದುದರಿಂದ ನ್ಯೂಯಾರ್ಕ ವರ್ತಕನಿಗೆ ಹಣ ಬೇಕಾಗಿದ್ದರೆ ಅವನು ತನ್ನ ವ್ಯಾಪಾರ ಪತ್ರವನ್ನು ತೆಗೆದುಕೊಂಡು ಹೋಗಿ ಫೆಡರಲ್ ರಿಸರ್ವ ಬ್ಯಾಂಕಿಗೆ ತೋರಿಸಿ ಅಲ್ಲಿಂದ ಡಿಪಾಸಿಟು ಪಡೆದುಕೊಳ್ಳುವನು. ಇಂಗ್ಲೆಂಡಿನಲ್ಲಿಯಾದರೆ ಇಂಥ ಮಾರುವೆ ಪತ್ರಗಳು ಡಿಸ್ಕೌಂಟು ಹೌಸುಗಳ ಮುಖಾಂತರವಾಗಿ ಬ್ಯಾಂಕ್ ಒಫ್ ಇಂಗ್ಲೆಂಡಿಗೆ

ತಲಪುವುವು; ಇಂಗ್ಲೆಂಡಿನಲ್ಲಿ ವರ್ತಕರು ನೇರವಾಗಿ ತಮ್ಮ ಕೇಂದ್ರ ಬ್ಯಾಂಕಿನ ಕೂಡೆ ವ್ಯವಹರಿಸುವುದು ಕಡಮೆ ಫೆಡರಲ್ ರಿಸರ್ವ ಬ್ಯಾಂಕಿನ ಡಿಪಾಸಿಟೂ ಬ್ಯಾಂಕ್ ಒಫ್ ಇಂಗ್ಲೆಂಡಿನ ಡಿಪಾಸಿಟೂ ನಗದಿಗೆ ತೀರ ಸಮೀಪದ ಪ್ರತಿನಿಧಾನಗಳಾದುದರಿಂದ ಅವನ್ನು 'ನಗದಿನ ಕೋಶ' ವಾಗಿಯೇ ಪರಿಗಣಿಸಬಹುದು ಫೆಡರಲ್ ರಿಸರ್ವ ಬ್ಯಾಂಕು ವ್ಯಾಪಾರ ಪತ್ರ (ಮಾರುವೆ ಹುಂಡಿ)ದ ಮುಖಬೆಲೆಯನ್ನು ಕೊಡದೆ ವಟಾಯಿಸುವ ಛಾರ್ಜು ತೆಗೆದುಕೊಳ್ಳುವುದು ೧೦,೦೦೦ ರುಪಾಯಿಯ ಮಾರುವೆ ಹುಂಡಿಗೆ ೨೦೦ ರುಪಾಯಿ ವಟ್ಟ ತೆಗೆದುಕೊಂಡಲ್ಲಿ ಮಾರುವೆ ಹುಂಡಿಯು ೨%ನಲ್ಲಿ ರಿ–ಡಿಸ್ಕೌಂಟ-ವಟಾಯಿಸಿ-ಆಯಿತೆಂದು ಭಾವಿಸಬೇಕು. ಅಂತೂ ಮಾರುವೆ ಹುಂಡಿಯು ಸ್ಥಾನದಲ್ಲಿ ಉದ್ಭವಿಸುವ ಬ್ಯಾಂಕ ಡಿಪಾಸಿಟನಿಂದಾಗಿ ಸದಸ್ಯ ಬ್ಯಾಂಕುಗಳ 'ನಗದಿನ ಕೋಶ'ವು ಹೆಚ್ಚಲು ಸಹಾಯವಾಯಿತು. 'ನಗದಿನ ಕೋಶ'ವು ಹೆಚ್ಚಾಗಲು ಇನ್ನೊಂದು ಮಾರ್ಗವಿದೆ. ಫೆಡರಲ್ ರಿಸರ್ವ ಬ್ಯಾಂಕು ಹುಂಡಿ ವಟಾಯಿಸುವುದರ ಬದಲು ಸದಸ್ಯ ಬ್ಯಾಂಕುಗಳಿಗೆ ಡಿಪಾಸಿಟನ್ನು ಮುಂಗಡವಾಗಿ ಕೊಡಬಹುದು. ಅಂದರೆ ಸದಸ್ಯ ಬ್ಯಾಂಕು ಮುಂದಕ್ಕೆ ಕೊಡುವೆನೆಂದು ಒಪ್ಪಿದ ಹಣದ ನಿರೀಕ್ಷೆಯನ್ನಿರಿಸಿಕೊಂಡು ಈಗ ಡಿಪಾಸಿಟು ಸೃಷ್ಟಿಸಬಹುದು.

**ಕೇಂದ್ರ ಬ್ಯಾಂಕಿನ ಕ್ರೆಡಿಟ್ ನಿಯಂತ್ರಣ ಕಾರ್ಯ:**

ಕೇಂದ್ರ ಬ್ಯಾಂಕು ದೇಶದ ಆರ್ಥಿಕ ವ್ಯವಸ್ಥೆಯ ಮೇಲೆ—ಧಾರಣೆ, ವರಮಾನ, ಬಡ್ಡಿಗಳ ಮೇಲೆ—ತುಂಬಾ ಪರಿಣಾಮ ಮಾಡಬಲ್ಲುದು ನಿಯಂತ್ರಣ ಕಾರ್ಯಕ್ಕೋಸ್ಕರ ಅದು ಮೊದಲನೆಯದಾಗಿ ರಿ–ಡಿಸ್ಕೌಂಟ ದರ ಅಥವಾ ಬ್ಯಾಂಕ್‌ರೇಟನ್ನುಪಯೋಗಿಸುವುದು. ಇಂಗ್ಲೆಂಡಿನಲ್ಲಿ ಬ್ಯಾಂಕ್‌ರೇಟಿಗೆ ಅಮೇರಿಕದಲ್ಲಿರುವುದಕ್ಕಿಂತ ಹೆಚ್ಚು ಪ್ರಾಶಸ್ತ್ಯವಿದೆ. ಬ್ಯಾಂಕ್ ಒಫ್ ಇಂಗ್ಲೆಂಡು ಒಂದಾನೊಂದು ಕಾಲದಲ್ಲಿ ಖಾಸಗೀ ಬ್ಯಾಂಕಿನ ಕರ್ತವ್ಯಗಳನ್ನೂ ನಿರ್ವಹಿಸುತ್ತಿದ್ದುದರಿಂದ ಅದರ ಹುಂಡಿ ವಟಾಯಿಸುವ ಬ್ಯಾಂಕ್‌ರೇಟನ್ನನುಸರಿಸಿ ಇತರ ವ್ಯಾವಹಾರಿಕ ಬ್ಯಾಂಕುಗಳೂ ಹೆಜ್ಜೆ ಇಡುತ್ತಿದ್ದುವು. ಈಗ ಬ್ಯಾಂಕ್ ಒಫ್ ಇಂಗ್ಲೆಂಡು ಖಾಸಗೀ

ಬ್ಯಾಂಕಿನ ಕೆಲಸವನ್ನು ತೊರೆದಿದ್ದರೂ ಅದರ ಬ್ಯಾಂಕ್‌ರೇಟು ಬರಿಯ ಅಭ್ಯಾಸಬಲದಿಂದ ಇತರ ಬ್ಯಾಂಕುಗಳ ವಟಾಯಿಸುವ ದರವನ್ನು ಮೂಗುದಾರ ಹಿಡಿದು ಎಳೆಯುತ್ತಿದೆ ಬ್ಯಾಂಕ್ ಒಫ್ ಇಂಗ್ಲೆಂಡು ಬ್ಯಾಂಕ್ ರೇಟನ್ನು ಏರಿಸಿದರೆ ಎಲ್ಲ ಬ್ಯಾಂಕುಗಳ ದರವೂ ಏರಿ, ಸಾಲ ಕೊಡುವ ಪ್ರವೃತ್ತಿಯು ಇಡಿ ಆರ್ಥಿಕ ಮಂಡಲದಲ್ಲಿ ತನ್ನಿಂದ ತಾನೇ ಕುಂಠಿತವಾಗುವುದು ಭಾರತದಲ್ಲಿಯೂ ಹಾಗೆಯೇ- ೧೯೫೧ರ ನವಂಬರದಲ್ಲಿ ರಿಸರ್ವ ಬ್ಯಾಂಕಿನ ದರವನ್ನು ೩%ನಿಂದ ೩½%ಗೆ ಏರಿಸಿದುದು ಈ ಉದ್ದೇಶದಿಂದಲೇ. ಬ್ಯಾಂಕ್ ಒಫ್ ಇಂಗ್ಲೆಂಡು ಬ್ಯಾಂಕ್ ರೇಟನ್ನು ತಗ್ಗಿಸಿದರೆ ಸಾಲದ ಗಾತ್ರವು ಹೆಚ್ಚುವುದು, ಕ್ರೆಡಿಟ್ ರಚನೆಯು ವಿಸ್ತೃತವಾಗುವುದು. ಸಂಯುಕ್ತ ರಾಷ್ಟ್ರದಲ್ಲಿ ಬ್ಯಾಂಕ್ ರೇಟು ಇಂಗ್ಲೆಂಡಿನಲ್ಲಿರುವಷ್ಟು ಶಕ್ತಿಶಾಲಿಯಾಗಿರುವುದಿಲ್ಲ.

ಇತ್ತೀಚೆಗೆ ಬಹಳವಾಗಿ ಬಳಕೆಯಲ್ಲಿ ಬಂದಿರುವ ಕ್ರೆಡಿಟ್ ನಿಯಂತ್ರಣದ ಸಶಕ್ತವಾದ ಆಯುಧಕ್ಕೆ 'ಓಪನ್ ಮಾರ್ಕೆಟ್ ಧೋರಣೆ' ಎಂದು ಹೆಸರು. ಸಕ್ಯುರಿಟಿಗಳ ಧಾರಣೆಯನ್ನು ಹೆಚ್ಚು ಕಡಮೆ ಮಾಡಬೇಕೆಂಬ ನಿಶ್ಚಿತ ಉದ್ದೇಶವನ್ನಿಟ್ಟುಕೊಂಡು ಕೇಂದ್ರ ಬ್ಯಾಂಕು ಸೆಕ್ಯೂರಿಟಿಗಳ ಮಾರ್ಕೆಟಿಗೆ ಇಳಿದು ಬಂದು, ಸೆಕ್ಯೂರಿಟಿಗಳನ್ನು ಕೊಳ್ಳುವ-ಮಾರುವ ಕಾರ್ಯಕ್ರಮವೇ 'ಓಪನ್ ಮಾರ್ಕೆಟ್ ಒಪರೇಶನ್' ಎನಿಸುತ್ತದೆ. ಬ್ಯಾಂಕು ಸೆಕ್ಯೂರಿಟಿಗಳನ್ನು ಕೊಳ್ಳುವಾಗ ದ್ರವ್ಯವಾಗಿರತಕ್ಕ ಡಿಪಾಸಿಟುಗಳನ್ನು ಹೊರಗೆ ಹಾಕಿ ಸೆಕ್ಯೂರಿಟಿಗಳನ್ನು ಒಳಗೆ ಸೇರಿಸಿಕೊಳ್ಳುವುದರಿಂದ ಸೆಕ್ಯೂರಿಟಿಗಳ ಧಾರಣೆಯು ಏರುವುದು. ಅಥವಾ ಬಡ್ಡಿಯ ದರವು ಇಳಿಯುವುದು. ಕೇಂದ್ರ ಬ್ಯಾಂಕು ಸೆಕ್ಯೂರಿಟಿಗಳನ್ನು ಮಾರಿದರೆ ಡಿಪಾಸಿಟುಗಳನ್ನು ಒಳಸೆಳೆದುಕೊಂಡು ಸೆಕ್ಯೂರಿಟಿಗಳನ್ನು ಹೊರಗೆ ಹಾಕುವುದು ಎಂದರ್ಥ. ಆಗ ಸೆಕ್ಯೂರಿಟಿಗಳ ಬೆಲೆ ಇಳಿಯುವುದು ಬಡ್ಡಿಯ ದರವು ಏರುವುದು

ಸದಸ್ಯ ಬ್ಯಾಂಕುಗಳ ರಿಸರ್ವ ದಾಮಾಶಯವನ್ನು—ನಗದಿನ ಸಿಪ್ಪತ್ತಿಯನ್ನು – ನಿಯಂತ್ರಣದಲ್ಲಿಟ್ಟುಕೊಳ್ಳುವುದು ಮೂರನೆಯ ಆಯುಧ.

ನಗದಿನ ನಿಷ್ಪತ್ತಿಯನ್ನು ಶಾಸನ ರೀತ್ಯಾ ಹೆಚ್ಚಿಸಿದರೆ ಬ್ಯಾಂಕುಗಳ ಸಾಲ ಕೊಡುವ ಶಕ್ತಿಯೂ ತನ್ನಷ್ಟಕ್ಕೆ ಕಡಮೆಯಾಗುವುದು ನಗದಿನ ನಿಷ್ಪತ್ತಿಯನ್ನು ಕಡಮೆ ಮಾಡಿದರೆ ಕ್ರೆಡಿಟ್ ವಿಸ್ತಾರದ ಶಕ್ತಿ ತನ್ನಷ್ಟಕ್ಕೆ ವರ್ಧಿಸುವುದು.

**ರಿಸರ್ವ ಬ್ಯಾಂಕ್ ಒಫ್ ಇಂಡಿಯಾ:**

ನಮ್ಮ ದೇಶಕ್ಕೊಂದು ಕೇಂದ್ರ ಬ್ಯಾಂಕಿನ ಆವಶ್ಯಕತೆ ಎಂದಿನಿಂದಲೋ ಇದ್ದುದು ೧೯೩೫ರಲ್ಲಿ ರಿಸರ್ವ ಬ್ಯಾಂಕು ಸ್ಥಾಪನೆಗೊಂಡಾಗ ಪೂರ್ಣವಾಯಿತು. ನೋಟು ಹೊರಡಿಸುವುದೂ, ಬ್ಯಾಂಕಿನವರ ಬ್ಯಾಂಕಾಗಿ ಕೆಲಸ ಮಾಡುವುದೂ, ನರಕಾರದ ಬಗ್ಗೆ ವ್ಯವಹಾರ ಮಾಡುವುದೂ — ರಿಸರ್ವ ಬ್ಯಾಂಕಿನ ಕರ್ತವ್ಯದ ಮೂರು ಮುಖಗಳು ರಿಸರ್ವ ಬ್ಯಾಂಕು ಮುನಾಫೆಯನ್ನು ಹೆಚ್ಚಾಗಿ ದೃಷ್ಟಿಯಲ್ಲಿರಿಸಿಕೊಳ್ಳದೆ ರಾಷ್ಟ್ರದ ಸಾಮೂಹಿಕ ಒಳ್ಳಿತಿಗೆ ಅನುಕೂಲವಾಗುವಂಥ ಕಾರ್ಯಕ್ರಮಗಳಲ್ಲಿ ನೆರವಾಗಬೇಕೆಂಬುದು ಅದರ ಧೋರಣೆಯಾಗಿದೆ ಮುಂಬಯಿ, ಕಲ್ಕತ್ತೆ, ದಿಲ್ಲಿ, ಮದರಾಸು, ರಂಗೂನುಗಳಲ್ಲಿಯೂ, ಲಂಡನ್ನಿನಲ್ಲಿಯೂ ಶಾಖೆಗಳು ತೆರೆಯಲ್ಪಟ್ಟುವು. ಇಂಪೀರಿಯಲ್ ಬ್ಯಾಂಕಿನ ಶಾಖೆಗಳಿರುವ ಕಡೆಗಳಲ್ಲಿ ರಿಸರ್ವ ಬ್ಯಾಂಕಿನ ಪರವಾಗಿ ಇಂಪೀರಿಯಲ್ ಬ್ಯಾಂಕೇ ಕೆಲಸ ನಡೆಸುವುದು. ರಿಸರ್ವ ಬ್ಯಾಂಕಿಗೆ ಒಂದು ಕೇಂದ್ರ ಸಲಹಾ ಮಂಡಳಿಯೂ, ಸ್ಥಾನಿಕ ಸಲಹಾ ಮಂಡಳಿಗಳೂ ಇವೆ. ಕೇಂದ್ರ ಕಚೇರಿಯೂ, ಕೇಂದ್ರ ಮಂಡಳಿಯೂ ಮುಂಬಯಿಯಲ್ಲಿವೆ. ಕೇಂದ್ರ ಹಾಗೂ ಸ್ಥಾನಿಕ ಮಂಡಳಿಗಳಲ್ಲಿ ಷೆಯರುದಾರರಿಗೆ ಪ್ರಾತಿನಿಧ್ಯವುಂಟು. ರಿಸರ್ವ ಬ್ಯಾಂಕು ಮಾಡುವ ಕೆಲಸಗಳು ಅನೇಕವಾಗಿವೆ; (೧) ಬಡ್ಡಿ ವಿರಹಿತವಾಗಿ ಠೇವಣಾತಿಯನ್ನು ಸ್ವೀಕರಿಸುವುದು. (೨) ಇಂಡಿಯದೊಳಗಿನ ಮಾರುವೆ ಹುಂಡಿಗಳನ್ನು ಮಾರುವುದು, ಕೊಳ್ಳುವುದು, ವಟಾಯಿಸುವುದು. (೩) ಇಂಗ್ಲೆಂಡಿನ ಹತ್ತಿರ ವ್ಯಾಪಾರ ಮಾಡುವಾಗ ಉಂಟಾಗುವ ಮೂರು ತಿಂಗಳ ಮಾರುವೆ ಹುಂಡಿಗಳನ್ನು ಶೆಡ್ಯೂಲ್ಡ್ ಬ್ಯಾಂಕಿನ ಮಧ್ಯಸ್ಥಿಕೆಯ ಮೂಲಕ ವಟಾಯಿಸುವುದು. (೪) ಶೆಡ್ಯೂಲ್ಡ್ ಬ್ಯಾಂಕುಗಳಿಗೆ ಸ್ಟರ್ಲಿಂಗು ಹಣವನ್ನು

ಮಾರುವುದು, ಅವುಗಳ ಕೈಯಿಂದ ಕೊಂಡುಕೊಳ್ಳುವುದು (೫) ಸ್ಥಾನಿಕ ಸ್ವರಾಜ್ಯ ಸಂಸ್ಥೆಗಳಿಗೂ, ಶೆಡ್ಯೂಲ್ಡ್ ಬ್ಯಾಂಕುಗಳಿಗೂ, ಪ್ರಾಂತಿಕ ಸಹಕಾರಿ ಸಂಘಗಳಿಗೂ ಕಿರುವಾಯಿದೆಯ ಸಾಲವನ್ನೂ, ಮುಂಗಡವನ್ನೂ ಒದಗಿಸುವುದು- (೬) ಬ್ರಿಟಿಷ ಸರಕಾರದ ಹತ್ತು ವರ್ಷಗಳ ಸೆಕ್ಯೂರಿಟಿಯನ್ನೂ, ಭಾರತೀಯ ಸರಕಾರದ ಸೆಕ್ಯೂರಿಟಿಗಳನ್ನೂ ಕೊಳ್ಳುವುದು. (೭) ಹಣವನ್ನು ಸಾಲ ಪಡೆಯುವುದು.

ಭಾರತೀಯ ಕೃಷಿಮಂಡಲಕ್ಕೆ ಸಾಲಕೊಡಲು ಎಗ್ರಿಕಲ್ಚರಲ್ ಕ್ರೆಡಿಟ್ ಡಿಪಾರ್ಟಮೆಂಟು ಸ್ಥಾಪನೆಯಾಗಿರುವುದೂ, ಖಾಸಗೀ ಬ್ಯಾಂಕಾಗಿರುವ ಇಂಪೀರಿಯಲ್ ಬ್ಯಾಂಕಿನೊಡನೆ ಒಡಂಬಡಿಕೆಯಲ್ಲಿರುವುದೂ, ಶೆಡ್ಯೂಲ್ಡ್ ಬ್ಯಾಂಕುಗಳು ತಮ್ಮ 'ನಗದಿನ ಕೋಶ'ದ ಒಂದಂಶವನ್ನು ರಿಸರ್ವ ಬ್ಯಾಂಕಿನಲ್ಲಿಡಬೇಕೆಂದು ವಿಧಿಸಿರುವುದೂ, ಬ್ಯಾಂಕನ್ನು ಇಶ್ಯೂ ಡಿಪಾರ್ಟಮೆಂಟ ಹಾಗೂ ಬ್ಯಾಂಕಿಂಗ್ ಡಿಪಾರ್ಟಮೆಂಟ ಎಂದು ಇಬ್ಭಾಗವಾಗಿ ಮಾಡಿರುವುದೂ ರಿಸರ್ವ ಬ್ಯಾಂಕಿನ ಕೆಲವು ವೈಶಿಷ್ಟ್ಯಗಳು.

**ರಿಸರ್ವ ಬ್ಯಾಂಕ ಸ್ಟೇಟ್‌ಮೆಂಟು:**

ವಾರವಾರವೂ ರಿಸರ್ವ ಬ್ಯಾಂಕು ತನ್ನ ವ್ಯವಹಾರದ ಸ್ಟೇಟಮೆಂಟನ್ನು ಡಿಪಾರ್ಟಮೆಂಟ-ವಾರಾಗಿ ಕೊಡುವುದು. ದೆಶಂಬರ ೨೮, ೧೯೫೧ರ 'ವೀಕ್ಲೀ ರಿಟರ್ನ'ನ್ನು ಜಾಗ್ರತೆಯಿಂದ ಪರಿಶೀಲಿಸಿದರೆ ಬ್ಯಾಂಕಿನ ವ್ಯವಹಾರದ ಸ್ಥೂಲವಾದ ಅರಿವಾಗುವುದರಿಂದ ಅದನ್ನು ಕೆಳಗೆ ಕೊಡಲಾಗಿದೆ:—

# ಇಶ್ಯೂ ಡಿಪಾರ್ಟಮೆಂಟ

( ,೦೦೦ )

## ದೇಣೆ.

| | |
|---|---|
| ಬ್ಯಾಂಕಿಂಗ್ ಡಿಪಾರ್ಟಮೆಂಟನಲ್ಲಿರುವ ನೋಟುಗಳು | ೧೯,೨೧,೫೨ |
| ಚಲಾವಣೆಯಲ್ಲಿರುವ ನೋಟುಗಳು .. . | ೧೧೪೧,೦೯,೨೨ |
| ಸಮಗ್ರ ದೇಣೆ ... .. | ೧೧೬೦,೩೦,೭೪ |
| ಜುಮಲಾ ದೇಣೆ | ೧೧೬೦,೩೦,೭೪ |

## ಲೇಣೆ:

| | |
|---|---|
| A. ಚಿನ್ನದ ನಾಣ್ಯ ಮತ್ತು ಗಟ್ಟಿ: | |
| (a) ಭಾರತದೊಳಗಿರುವಂಥಾದ್ದು: . | ೪೦,೦೧,೭೧ |
| (b) ಭಾರತದ ಹೊರಗಿರುವಂಥಾದ್ದು | |
| ವಿದೇಶೀಯ ಸೆಕ್ಯೂರಿಟಿ . | ೫೮೩,೧೫,೧೧ |
| 'A'ಯ ಜುಮಲಾ | ೬೨೩,೧೬,೮೨ |
| B. ರುಪಾಯಿ ನಾಣ್ಯ . . | ೬೯,೦೦,೮೬ |
| ಇಂಡಿಯಾ ಸರಕಾರದ ರುಪಾಯಿ ಸೆಕ್ಯೂರಿಟಿ . | ೪೬೮,೧೩,೦೬ |
| ಜುಮಲಾ ಲೇಣೆ | ೧೧೬೦,೩೦,೭೪ |

ಜುಮಲಾ A ಗೂ ದೇಣೆಗೂ ಇರುವ ನಿಷ್ಪತ್ತಿ ೫೩·೭೦೭%

# ಬ್ಯಾಂಕಿಂಗ ಡಿಪಾರ್ಟಮೆಂಟ
( ,೦೦೦ )

| ದೇಣೆ: | |
|---|---|
| ತೆತ್ತ ಬಂಡವಾಳ | ೫,೦೦,೦೦ |
| ರಿಸರ್ವ ಫಂಡು | ೫,೦೦,೦೦ |
| ಡಿಪಾಸಿಟು (a) ಸರಕಾರಿ: | |
| (೧) ಕೇಂದ್ರ ಸರಕಾರ | ೨೧೦,೪೯,೦೧ |
| (೨) ಇತರ ಸರಕಾರಗಳು | ೧೦,೧೮,೭೬ |
| (b) ಬ್ಯಾಂಕುಗಳದು | ೫೦,೭೧,೬೧ |
| (c) ಇತರರದು. | ೬೬,೨೬,೦೩ |
| ಕೊಡಲಿಕ್ಕಿರುವ ಹುಂಡಿಗಳು | ೬,೬೪,೪೧ |
| ಇತರ ದೇಣೆಗಳು | ೧೪,೮೦,೪೯ |
| ಜುಮಲಾ | ೩೬೯,೧೦,೩೦ |

| ಲೇಣೆ | |
|---|---|
| ನೋಟು | ೧೯,೨೧,೫೨ |
| ರುಪಾಯಿ ನಾಣ್ಯ | ೧೪,೭೪ |
| ಇತರ ನಾಣ್ಯ | ೧,೬೪ |
| ಕೊಂಡ + ವಟಾಯಿಸಿದ ಹುಂಡಿಗಳು: | |
| (a) ಒಳನಾಡಿನದು | ೧,೩೬,೫೦ |
| (b) ಹೊರದೇಶದ್ದು | ... |
| (c) ಖಜಾನೆ ಹುಂಡಿ | ೫,೩೬,೩೯ |
| ಪರದೇಶದಲ್ಲಿರುವ ಬ್ಯಾಲೆನ್ಸ್) ನಗದು ಹಾಗೂ ಕಿರುವಾಯಿದೆಯ ಸೆಕ್ಯೂರಿಟಿಗಳು) | ೧೯೭,೮೩,೮೪ |
| ಸರಕಾರಗಳಿಗೆ ಕೊಟ್ಟ ಸಾಲ, ಮುಂಗಡ | ೭,೯೬,೦೦ |
| ಇತರ ಸಾಲ ಮುಂಗಡಗಳು | ೧೭,೧೧,೦೭ |
| ಇನ್ವೆಸ್ಟ್ಮೆಂಟು | ೧೦೧,೧೭,೯೨ |
| ಇತರ ಲೇಣೆಗಳು | ೧೮,೮೦,೬೮ |
| ಜುಮಲಾ | ೩೬೯,೧೦,೩೦ |

ಬ್ಯಾಂಕ ರೇಟು. ೩॥%

**ಹಣದ ಮೌಲ್ಯ:**

ಹಣದ ಗ್ರಾಹಕ ಶಕ್ತಿಯೇ ಅದರ ಮೌಲ್ಯ. ಧಾರಣೆವಾಸಿಯು ಮಟ್ಟವು ಏರಿದರೆ ಹಣದ ಮೌಲ್ಯವು ಕುಗ್ಗುವುದು; ಧಾರಣೆವಾಸಿಯು ಇಳಿದರೆ ಹಣದ ಮೌಲ್ಯವು ಹಿಗ್ಗುವುದು. ಹಣದ ಮೌಲ್ಯವೆಂದರೂ ಧಾರಣೆವಾಸಿ ಎಂದರೂ ಎರಡೂ ಒಂದೇ. ಧಾರಣೆವಾಸಿಯು ಬದಲಾವಣೆಗಳಿಂದ ಹಣದ ಮೌಲ್ಯವು ಬದಲಾವಣೆಯಾಗುವುದು. ಧಾರಣೆವಾಸಿಯು ಏರಿದ ಕೂಡಲೇ ಎಲ್ಲಾ ಸರಕುಗಳ ಧಾರಣೆಯೂ ಏರಬೇಕೆಂಬ ನಿಯಮವಿಲ್ಲ; ಕೆಲವೊಂದು ಸರಕುಗಳ ಧಾರಣೆ ಇಳಿಯುತ್ತಿರುವಾಗಲೂ ಧಾರಣೆವಾಸಿಯು ಹೆಚ್ಚಬಹುದು ಅಷ್ಟು ಮಾತ್ರವೇ ಅಲ್ಲದೆ, ಸಾಪೇಕ್ಷ ಧಾರಣೆಗಳೂ ಒಂದೇ ತೆರನಾಗಿ ಇಳಿಯಬೇಕಾಗಿಲ್ಲ.

(೧) ಹಣದ ಪರಿಮಾಣವು ಹೆಚ್ಚಿದಾಗ ಸರಕುಗಳ ಪರಿಮಾಣವೂ ಅದರಂತೆಯೇ ಹೆಚ್ಚದಿದ್ದಲ್ಲಿ ಹಣದ ಮೌಲ್ಯವು ಇಳಿಯುವುದು — ಧಾರಣೆ ಏರುವುದು

(೨) ಹಣದ ಪರಿಮಾಣವು ಕಡಮೆಯಾಗುವಾಗ ಸರಕುಗಳ ಪರಿಮಾಣವೂ ಅಷ್ಟೇ ಕಡಮೆಯಾಗದಿದ್ದರೆ ಹಣದ ಮೌಲ್ಯವು ಏರುವುದು —ಧಾರಣೆ ಇಳಿಯುವುದು

(೩) ಸರಕುಗಳ ಪರಿಮಾಣವು ಹೆಚ್ಚುವುದರ ಜತೆಗೆನೆ ಹಣದ ಪರಿಮಾಣವೂ ಹೆಚ್ಚಾಗದಿದ್ದರೆ ಹಣದ ಮೌಲ್ಯವು ಏರುವುದು — ಧಾರಣೆ ಇಳಿಯುವುದು.

(೪) ಸರಕುಗಳ ಪರಿಮಾಣವು ಕಡಮೆಯಾಗುವಾಗ ಅಷ್ಟೇ ಪ್ರಮಾಣದಲ್ಲಿ ಹಣದ ಪರಿಮಾಣವೂ ಕಡಮೆಯಾಗದಿದ್ದಲ್ಲಿ ಹಣದ ಮೌಲ್ಯವು ಇಳಿಯುವುದು — ಧಾರಣೆ ಏರುವುದು

ಧಾರಣೆಯ ಬದಲಾವಣೆಯನ್ನನುಸರಿಸಿ ಹಣದ ಮೌಲ್ಯವು ಈ ಪರಿಯಾಗಿ ಬದಲಾವಣೆ ಹೊಂದುವ ಒಲವಿಗೆ 'ಹಣದ ಪರಿಮಾಣಮೀಮಾಂಸೆ', 'ಕ್ವಾಂಟಿಟಿ ಥಿಯರಿ' ಎನ್ನುವರು. ಎಷ್ಟು ಹಣವು ಚಲಾವಣೆಯಲ್ಲಿರುವುದೋ, ಅದಕ್ಕೆ ಅನುಲೋಮ ಅನುಪಾತದಲ್ಲಿ ಧಾರಣೆ ಏರುವುದು.

ಹಣದ ಚಲಾವಣೆಯು ನೂರಕ್ಕೆ ನೂರರಷ್ಟು ಏರಿದರೆ, ಧಾರಣೆಯೂ ನೂರರಷ್ಟು ಏರಬೇಕೆನ್ನುವುದು 'ಪರಿಮಾಣ ಮೀಮಾಂಸಕರ' ವಾದ. ಮೊದಲು ಒಂದು ಸರಕಿಗೆ ಒಂದು ನಾಣ್ಯವಿದ್ದರೆ ಈಗ ಎರಡು ನಾಣ್ಯವಿದೆ ಎಂದಾಯಿತು ಆಗ ಧಾರಣೆಯು ಎರಡು ಪಾಲಾಗಲೇ ಬೇಕು. ಇದು ಬಹಳ ಆದರ್ಶಾತ್ಮಕವಾದ ಮೀಮಾಂಸೆಯೇ ಸರಿ ಇದನ್ನು ಮುಗಿಲಿಸಿಂದ ನೆಲಕ್ಕಿಳಿಸಿ ಯಥಾರ್ಥಕ್ಕೆ ಅನ್ವಯಿಸಬೇಕಾದರೆ ಕಲವೊಂದು ಪರಿಷ್ಕರಣಗಳನ್ನು ಕೈಗೊಳ್ಳಬೇಕು. ಒಂದನೆಯದಾಗಿ ಪ್ರಪಂಚದಲ್ಲಿ ನೋಟುಗಳು ಮಾತ್ರವಲ್ಲದೆ ಬಾಂಡು, ಷೆಯರು, ಹುಂಡಿ ಮುಂತಾದ ಸಾಲಪತ್ರಗಳು ಅನೇಕ ಇರುವುದರಿಂದ ಇವುಗಳಲ್ಲಿ ಉಂಟಾಗುವ ಬದಲಾವಣೆಗಳು ಧಾರಣೆವಾಸಿಯ ಮೇಲೆ ಪರಿಣಾಮ ಮಾಡದಿರಲಾರವು. ಎರಡನೆಯದಾಗಿ, ಹಣದ ಪರಿಮಾಣವನ್ನು ಕುಗ್ಗಿಸಿದಾಗ ಏನಾಗುವುದೋ ಅದೇ ಕಾರ್ಯವು ಹಣವನ್ನು ವೆಚ್ಚಮಾಡದೆ ರಾಶಿ ಹಾಕುವುದರಿಂದಲೂ ಆಗುವುದು. ಒಂದೇ ಹಣವನ್ನು ಆರು ಸಲ ಉಪಯೋಗಿಸಿದಾಗ ತಾನೇ ಅದು ಅಷ್ಟು ಹೆಚ್ಚು ಸಲ ಚಲಾವಣೆಗೆ ಬಂದಂತಾಗುವುದು? ಆದುದರಿಂದ ಈ ವಿಧವಾಗಿಯೂ ಹಣದ ಪರಿಮಾಣ ಬದಲಾಗಬಹುದು. ಮೂರನೆಯದಾಗಿ, ವಾಣಿಜ್ಯದ ಗಾತ್ರವು ಹೆಚ್ಚಿದರೆ ಒಂದೇ ನೋಟು ಹೆಚ್ಚು ಸಲ ಕೆಲಸಮಾಡಬೇಕಾಗಿ ಬಂದು ಧಾರಣೆಯು ಕುಗ್ಗುವುದು. ಹೀಗೆ ಎಲ್ಲ ಬಗೆಯ ಹಣದ ಪರಿಮಾಣ ಹಾಗೂ ಚಲಾವಣೆಯ ವೇಗಕ್ಕೆ ಅನುಲೋಮ ಅನುಪಾತದಲ್ಲಿಯೂ, ವಾಣಿಜ್ಯದ ಗಾತ್ರಕ್ಕೆ ಪ್ರತಿಲೋಮ ಅನುಪಾತದಲ್ಲಿಯೂ, ಧಾರಣೆವಾಸಿಯು ಬದಲಾವಣೆ ಹೊಂದುವುದು.

ಹೀಗೆಂದ ಮಾತ್ರಕ್ಕೆ ಹಣದಲ್ಲಿ ಬದಲಾವಣೆಗಳನ್ನು ತಂದೊಡನೆ ಧಾರಣೆವಾಸಿಯಲ್ಲಿ ಸುಧಾರಣೆಯಾಗುವುದು ಸುಲಭವೆಂದು ಯಾರೂ ಎಣಿಸುವಂತಿಲ್ಲ. ಅರ್ವಾಚೀನ ವಿನಿಮಯ ಪದ್ಧತಿಯು ಜಟಿಲತೆಯಿಂದಾಗಿ ಸರಳವಾದ ತತ್ತ್ವಗಳಿಗೆ ಈಗ ಎಡೆಯೇ ಇಲ್ಲ ನಿಯಮಗಳನ್ನು ಮಾಡಿದಷ್ಟೂ ಅಪವಾದಗಳು ಹುಟ್ಟಿಕೊಳ್ಳುತ್ತವೆ. ಬ್ಯಾಂಕುಗಳು ಸಾಲದ ಸೌಕರ್ಯವನ್ನು ಒಮ್ಮಿಂದೊಮ್ಮೆ ನಿಲ್ಲಿಸಿದರೆ, ಅರ್ಥಾತ್ ಹಣದ ಚಲಾವಣೆಯು ಕಡಿಮೆಯಾದರೆ, ಜನರು ಬೆದರಿ ತಮ್ಮ ಸಂಗ್ರಹವನ್ನೆಲ್ಲ

ಕೂಡಲೇ ಮಾರಲು ಯತ್ನಿಸುವುದರಿಂದ ಧಾರಣೆಯು ಅತಿರೇಕವಾಗಿ ಕುಗ್ಗ ಬಹುದು. ಅದರೆ ಇದು ಕ್ರೆಡಿಟ್ ಸೌಕರ್ಯವು ಕುಗ್ಗಿದ ದಾಮಾಶಯು ದಲ್ಲೇ ಕುಗ್ಗಬೇಕೆಂದಿಲ್ಲ.

**ಧಾರಣೆವಾಸಿ, ಇಂಡೆಕ್ಸ್ ನಂಬರು:**

ಧಾರಣೆವಾಸಿ ಏನೆಂಬುದನ್ನು ತಿಳಿಯುವ ಮೊದಲು ಧಾರಣೆ ಎಂದರೆ ಏನು ಎಂಬುದನ್ನು ನೋಡೋಣ. ತೆಂಗಿನಕಾಯಿಯೊಂದಕ್ಕೆ ನಾಲ್ಕಾಣೆ ದರದಲ್ಲಿ ೧೨ ಲಕ್ಷ ತೆಂಗಿನಕಾಯಿ ಖರ್ಚಾದರೆ ಅದನ್ನು ಕೊಳ್ಳಲು ಜನರು ೩ ಲಕ್ಷ ರುಪಾಯಿ ತೆತ್ತರೆಂದು ಅರ್ಥ.

ತೆಂಗಿನಕಾಯಿಯ ಧಾರಣೆ $= \dfrac{\text{ತೆಂಗಿನಕಾಯಿಗಳಿಗೆ ಕೊಟ್ಟ ಹಣದ ಪರಿಮಾಣ}}{\text{ತೆಗೆದುಕೊಂಡ ಕಾಯಿಯ ಪರಿಮಾಣ}}$

ಧಾರಣೆವಾಸಿ ಎಂದರೆ ಎಲ್ಲಾ ಸಾಮಗ್ರಿಗಳ ಧಾರಣೆಯಾದುದರಿಂದ

ಧಾರಣೆವಾಸಿ $= \dfrac{\text{ಎಲ್ಲ ಸಾಮಗ್ರಿಗಳಿಗೂ ಕೊಟ್ಟ ಹಣದ ಪರಿಮಾಣ.}}{\text{ಕೊಂಡ ಸಾಮಗ್ರಿಗಳ ಪರಿಮಾಣ.}}$

ಹಣದ ಪರಿಮಾಣವನ್ನು ಅಳೆಯುವುದು ಸುಲಭವಾದರೂ, ಕೊಂಡ ಸಾಮಗ್ರಿಗಳ ಪರಿಮಾಣಗಳನ್ನು ಅಳೆಯುವುದು ಕಷ್ಟಸಾಧ್ಯವೇ ಸರಿ. ಬೂಟುಗಳು, ಮೋಟರುಗಳು, ಹತ್ತಿಯಕಾಳು, ಹಾರ್ಮೊನಿಯಮ್, ಗೋಧಿ, ಹೇರ್ಪಿನ್ನು ಮೊದಲಾದ ವಿಧವಿಧವಾದ ಪದಾರ್ಥಗಳನ್ನು ಒಟ್ಟು ಕೂಡಿಸುವ ಉಪಾಯವೇನು? "ಕೊಂಡುಕೊಂಡ ಸರಕುಗಳಿಗೆ ಒಂದು ಸಿನೆಮಾ ಪ್ರೊಜೆಕ್ಟರನ್ನು ಸೇರಿಸಿ ಎರಡು ದನಗಳನ್ನು ಕಳೆಯಿರಿ" ಎಂದಾಗ ಸಾಮಗ್ರಿಗಳ ಪರಿಮಾಣ ಹೆಚ್ಚಿತೋ, ಕಡಿಮೆಯಾಯಿತೊ? ಸಾಮಗ್ರಿಗಳ ಧಾರಣೆಗಳ 'ಇಂಡೆಕ್ಸ್ ನಂಬರನ್ನೊ', 'ಪರಿಮಾಣದ ಇಂಡೆಕ್ಸ್ ನಂಬರನ್ನೊ' ಉಪಯೋಗಿಸಿ ಈ ಸಮಸ್ಯೆಯನ್ನು ಸ್ವಲ್ಪಮಟ್ಟಿಗೆ ನೀಗಿಸಿಕೊಳ್ಳ ಬಹುದು. ಇಂಥ ಇಂಡೆಕ್ಸ್ ನಂಬರನ್ನು ರಚಿಸುವ ಹಲವು ವಿಧಾನಗಳಲ್ಲಿ ಒಂದು ಸುಲಭ ಉಪಾಯವನ್ನು ಇಲ್ಲಿ ಸೂಚಿಸಬಹುದು, ೧೯೩೯ರ ಧಾರಣೆವಾಸಿಗೂ, ೧೯೪೪ರ ಧಾರಣೆವಾಸಿಗೂ ಇರುವ ವ್ಯತ್ಯಾಸವನ್ನು ಗಮನಿಸಬೇಕಾದರೆ, ೧೯೩೯ರಲ್ಲಿದ್ದ ಕೆಲವು ಪ್ರಾತಿನಿಧಿಕ ಸರಕುಗಳನ್ನು —ಬೂಟು, ಮೋಟರು, ಸೈಕಲು, ಹತ್ತಿ ಬಟ್ಟೆ — ಒಂದು ಗೋದಾಮಿನಲ್ಲಿ

ಜಮೆಮಾಡಿದೆವೆಂದು ಭಾವಿಸೋಣ. ೧೯೩೯ರಲ್ಲಿ ತಯಾರಾದ ಈ ಪ್ರಾತಿನಿಧಿಕ ಸರಕುಗಳ ಪರಿಮಾಣಕ್ಕೆ —ಇದಿ ಗೋದಾಮಿಗೆ — ಹತ್ತು ಕೋಟಿ ರುಪಾಯಿ ಎಂದು ಬೆಲೆಕಟ್ಟುವ. ೧೯೪೯ರಲ್ಲಿ ಅದೇ ಗೋದಾಮನ್ನು ಕೊಳ್ಳಬೇಕಾದರೆ ೩೫ ಕೋಟಿ ರುಪಾಯಿಗಳನ್ನು ಕೊಡಬೇಕೆಂದು ಭಾವಿಸುವ. ೧೯೪೯ರ ಧಾರಣೆವಾಸಿಯು ೧೯೩೯ರ ಧಾರಣೆವಾಸಿಗಿಂತ ಮೂರೂವರೆಯಷ್ಟಿದೆ ಎಂದಾಯಿತು ೧೯೩೯ರ ಧಾರಣೆವಾಸಿಯನ್ನು ೧೦೦ ಎಂದು ಭಾವಿಸಿದರೆ ೧೯೪೯ರದು ೩೫೦ ಎಂದು ಆಯಿತು.

ಇಷ್ಟು ಮಾಡಿಯೂ ಇಂಡೆಕ್ಸ್ ನಂಬರು ಪರಿಪೂರ್ಣವಾಗುವುದಿಲ್ಲ. ಮುಖ್ಯವಾಗಿ ಪ್ರಾತಿನಿಧಿಕ ಸರಕುಗಳಲ್ಲಿ ವರ್ಷಗಳು ಕಳೆದಂತೆ ಹೊಸಹೊಸ ಸರಕುಗಳು ಸೇರುವುವು ೧೯೦೦ರಲ್ಲಿ ವಿಮಾನ ನೇರಿಸುವುದೇ ಬೇಡವಿತ್ತು; ಈಗ ಇಂಗ್ಲೆಂಡಿನ ಧಾರಣೆವಾಸಿಯಲ್ಲಿ ವಿಮಾನವನ್ನು ಸೇರಿಸದಿದ್ದರೆ, ಅರ್ಥವಿಲ್ಲದೆ ಹೋದೀತು. ೧೯೩೯ರಲ್ಲಿ ಪೆನ್‌ಸಿಲಿನ್, ಜೀಪು, ಪ್ಲ್ಯಾಸ್ಟಿಕ್‌ಗಳಿದ್ದಿರಲಿಲ್ಲ. ೧೯೪೯ರ 'ಪ್ರಾತಿನಿಧಿಕ ಸರಕು'ಗಳಲ್ಲಿ ಅವನ್ನು ಸೇರಿಸಬೇಡವೆ? ಆಗಲಿ, ೧೯೩೯ರಲ್ಲೂ ೧೯೪೯ರಲ್ಲೂ ಸಮಾನವಾಗಿರುವ ಸರಕುಗಳನ್ನೇ ಗೋದಾಮಿನಲ್ಲಿ ತುಂಬಿಸಿದರೂ, ಯಾವುದೇ ಸರಕಿನ ಸಾಪೇಕ್ಷ ಪರಿಮಾಣವು ಎರಡೂ ವರ್ಷಗಳಲ್ಲಿ ಸಮಾನವಾಗಿರುವುದಿಲ್ಲ. ಅಂತಿರುವಾಗ ೧೯೩೯ರಲ್ಲಿ ಕೊಂಡ ಸರಕುಗಳ ಸಾಪೇಕ್ಷ ಪರಿಮಾಣವನ್ನು ಒಪ್ಪಿಕೊಳ್ಳೋಣವೊ? ೧೯೪೯ರದನ್ನು ಒಪ್ಪಿಕೊಳ್ಳೋಣವೊ? ಈ ಕಷ್ಟವನ್ನು ನಿರೀಕ್ಷಿಸುವಾಗ ಇಂಡೆಕ್ಸ್ ನಂಬರು ರಕಮು ಧಾರಣೆಗೆಯೆ ಏಕೆ ಹೆಚ್ಚಾಗಿ ಅನ್ವಯಿಸುವುದೆಂಬುದು ತಿಳಿಯುವುದು. ಗೋಧಿ, ಹತ್ತಿ, ತವರ, ರಬ್ಬರು, ಸಣಬು ಮೊದಲಾದುವುಗಳು ಎಲ್ಲ ಕಾಲಕ್ಕೂ ಇರುವುದರಿಂದ ಅವನ್ನು ನಾವು ಹೋಲಿಸುವ ಎರಡೂ ಕಾಲಗಳಲ್ಲಿಯೂ ಇಟ್ಟುಕೊಳ್ಳಬಹುದು. ಕಾರ್ಖಾನೆಯಲ್ಲಿ ತಯಾರಿಸುವ ಸರಕುಗಳು ಕಾಲಕಾಲಕ್ಕೆ ಬದಲಾಗುವುದರಿಂದ ಅವುಗಳ ಧಾರಣೆವಾಸಿಯನ್ನು ಹೋಲಿಸುವುದು ಕಠಿನವಾಗಿದೆ.

**ಧಾರಣೆಗಳು ಬದಲಾದರೆ:**

ಧಾರಣೆವಾಸಿಯು ಇಳಿದರೆ ಕೆಳಗೆಕಂಡ ಪರಿಣಾಮಗಳಾಗುವುವು:—

(೧) ಪೆನ್ಶನರುಗಳು, ಡಿಬೆಂಚರುದಾರರು ಮುಂತಾದ ಸ್ಥಿರ ವರಮಾನವುಳ್ಳ ವ್ಯಕ್ತಿಗಳಿಗೆ ಧಾರಣೆಯು ಇಳಿದಾಗ ವಾಸ್ತವಿಕ ವರಮಾನವು ಏರುವುದು. ರಾಷ್ಟ್ರದ ಸಮಗ್ರ ವಾಸ್ತವಿಕ ವರಮಾನವು ಸ್ಥಿರವಾದ ಪರಿಮಾಣವೆಂದು ನಾವು ಇಟ್ಟುಕೊಂಡರೆ, ಧಾರಣೆಯು ಇಳಿದಾಗ ಸ್ಥಿರ ವರಮಾನವುಳ್ಳವರಿಗೆ ರಾಷ್ಟ್ರಾದಾಯದಲ್ಲಿ ಹೆಚ್ಚು ಪಾಲು ದೊರೆಯುವುದು. ಸಾಹಸೋದ್ಯಮಗಳಿಗೆ ದೊರೆಯುವ ಪ್ರತಿಫಲ(ಲಾಭ)ವು ಕಡಿಮೆಯಾಗಿ, ಅವಕ್ಕೆ ಪ್ರೋತ್ಸಾಹವು ಕಡಿಮೆಯಾಗುವುದು.

(೨) ಉದ್ದಿಮೆದಾರರು ಕೂಲಿಕಾರರಿಗೆ ಕೊಡುವ ಕೂಲಿಯೂ, ಸ್ಥಳಬಾಡಿಗೆ ಮುಂತಾದ ಸ್ಥಿರವೆಚ್ಚಗಳೂ, ಅವರ ಸರಕಿನ ಧಾರಣೆಯು ಇಳಿದಷ್ಟು ಪ್ರಮಾಣದಲ್ಲಿ ಇಳಿಯದೆ ಇರುವುದರಿಂದ ಅವರು ಸರಕಿನ ಉತ್ಪಾದನೆಯ ಪರಿಮಾಣವನ್ನು ಕುಗ್ಗಿಸಬಹುದು. ಅಲ್ಲದೆ, ಧಾರಣೆ ಇನ್ನೂ ಇಳಿದೀತೆಂದು ಅಂಜಿ ತಮ್ಮ ಹತ್ತಿರ ಇರುವ ಸಂಗ್ರಹವನ್ನೆಲ್ಲಾ ಮಾರ್ಕೆಟಿಗೆ ಇಳಿಸಿದರೆ ಮೊದಲೇ ಇಳಿದ ಧಾರಣೆಗೆ ಹಿಂದಿನಿಂದ ಲಾತು ಕೊಟ್ಟಂತಾಗಿ, ಅದು ಮತ್ತಷ್ಟು ಇಳಿಯುವ ಸಂದರ್ಭವು ಬರುವುದು

(೩) ಕಚ್ಚಾಮಾಲಿನ ಮಾರ್ಕೆಟು ಧಾರಣೆಯ ಬದಲಾವಣೆಗಳನ್ನು ಒಡನೆ ಪ್ರತಿಬಿಂಬಿಸುವ ಲಕ್ಷಣ ಉಳ್ಳುದಾದುದರಿಂದ ಚಿಲ್ಲರೆ ಉತ್ಪತ್ತಿಗಳಿಗಿಂತ ಗೋಧಿ, ರಬ್ಬರು ಮುಂತಾದ ರಕಮು ಉತ್ಪತ್ತಿಗಳ ಧಾರಣೆಯು ಬೇಗನೇ ಬೀಳುವುದು.

(೪) ಇಳಿಯುತ್ತಿರುವ ಧಾರಣೆಯೂ, ಲಾಭವೂ, ಹೊಸ ಇನ್ವೆಸ್ಟ್‌ಮೆಂಟಿಗೆ ಅಂಜಿಕೆ ಹಾಕಿ ತಡೆದು ಹಿಡಿಯುವುವು ಅನುಭೋಗ ಸಾಮಗ್ರಿಗಳಿಗೆ ಬೇಡಿಕೆಯು ಇಳಿದುವಕ್ಕಿಂತಲೂ ಹೆಚ್ಚು ವೇಗದಲ್ಲಿ ಉತ್ಪಾದಕ ಸಾಮಗ್ರಿಗಳ ಬೇಡಿಕೆಯು ಇಳಿಯುವುದು. ದೇಶದ ಆರ್ಥಿಕ ಬೆಳವಣಿಗೆಯ ಪ್ರಗತಿಯು ಮಂದವಾಗುವುದು

(೫) ವರಮಾನದ ತೆರಿಗೆ ವೊದಲಾದುವು ಬಿದ್ದು, ರಾಷ್ಟ್ರದ ಆದಾಯವು ಕಡಿಮೆಯಾಗುವುದು.

ಧಾರಣೆವಾಸಿಯು ಹೆಚ್ಚಿದರೆ ಇದಕ್ಕೆ ವಿಪರೀತವಾದ ಪರಿಣಾಮ ಉಂಟಾಗುವುದು. ಉದ್ದಿಮೆದಾರರಿಗೆ ಲಾಭವು ಹೆಚ್ಚು ಬರುವುದು. ಉತ್ಪಾದಕ ಸರಕುಗಳಿಗೆ ಬೇಡಿಕೆಯು ವರ್ಧಿಸುವುದು ಹೆಚ್ಚು ಹೆಚ್ಚು ಬಂಡವಾಳವು ಉಪಯೋಗಕ್ಕೆ ಬರುವುದು. ಏರುವ ಧಾರಣೆಯಿಂದಾಗಿ ಲಾಭನಿರೀಕ್ಷೆಯು ಹೆಚ್ಚಾಗುವುದರಿಂದ ಹೊಸ ಹೊಸ ಇನ್ವೆಸ್ಟ್‌ಮೆಂಟ್ ಯೋಜನೆಗಳು ಕಾರ್ಯಗತವಾಗಲು ಸಹಾಯವಾಗುವುದು ಆದರೆ ಸ್ಥಿರ ವರಮಾನವುಳ್ಳವರಿಗೆ, ಧಾರಣೆಯ ಏರಿಕೆಯಿಂದ ಹಾನಿಯಾಗುವುದು. ಅವರ ವಾಸ್ತವಿಕ ವರಮಾನವು ಕಡಿಮೆಯಾಗುವುದು ಇದಕ್ಕೆ ಕಾರಣ.

# ಹದಿನಾರನೆಯ ಅಧ್ಯಾಯ

# ಅಂತರರಾಷ್ಟ್ರೀಯ ವ್ಯಾಪಾರ

## ಅಂತರರಾಷ್ಟ್ರೀಯ ವ್ಯಾಪಾರವು ಏಕೆ ನಡೆಯುವುದು?

ಅಂತರರಾಷ್ಟ್ರೀಯ ರಂಗದಲ್ಲಿ ಒಂದು ದೇಶದ ಸರಕು ಇನ್ನೊಂದು ದೇಶದಲ್ಲಿ ಮಾರಿ ಹೋಗಲು ಕಾರಣವೇನೆಂದು ಪುನರಪಿ ಶೋಧನೆ ಮಾಡುವ ಅಗತ್ಯವಿಲ್ಲ. ಇಲ್ಲಿಯೂ ವಿನಿಮಯದ ಸೂತ್ರವೇ ಕೆಲಸಮಾಡುವುದು. ಇಂಗ್ಲೆಂಡಿನಲ್ಲಿ ಹತ್ತಿ ಬೆಳೆಯುವ ಯತ್ನ ಮಾಡುವುದಕ್ಕಿಂತ ಈಜಿಪ್ಟಿನಿಂದ ತರಿಸಿಕೊಳ್ಳುವುದು ಒಳ್ಳೆಯದು. ಈಜಿಪ್ಟಿನವರು ಇಂಗ್ಲೆಂಡಿನಲ್ಲಿ ತಯಾರಾದ ಉಣ್ಣೆಯನ್ನು ಹತ್ತಿಯ ಬದಲಾಗಿ ಪಡೆಯಬಹುದು. ಆಗ ಇಬ್ಬರಿಗೂ ಕಡಿಮೆ ವೆಚ್ಚದಲ್ಲಿ ಹೆಚ್ಚು ಸರಕುಗಳು ಸಿಗುವಂತಾಗುವುದು. ವಿನಿಮಯದಿಂದ ದೇಶದ ಉತ್ಪಾದನೆಯು ಹೇಗೆ ಹೆಚ್ಚುವುದೋ ಹಾಗೆಯೇ ಅಂತರರಾಷ್ಟ್ರೀಯ ವ್ಯಾಪಾರದಿಂದಲೂ ಪ್ರಪಂಚದ ಉತ್ಪಾದನೆಯು ಹೆಚ್ಚುವುದು. ಮಾರ್ಕೆಟು ಸನ್ನಿವೇಶದಲ್ಲಿ ಕಟ್ಟುಪಾಡುಗಳು ಇಲ್ಲವಾದರೆ ಪ್ರತಿಯೊಂದು ದೇಶವು ತನಗೆ ಅನುಕೂಲವಾದ, ಅಂದರೆ ಕಡಿಮೆ ವೆಚ್ಚದಲ್ಲಿ ತಾನು ತಯಾರುಮಾಡಲು ಬರುವಂಥ, ಸರಕನ್ನೇ ಉತ್ಪಾದಿಸುವುದು. ಎರಡನೆಯದಾಗಿ, ಬೇಡಿಕೆಯೂ ಪೂರೈಕೆಯೂ ವಿಶಾಲವಾದ ಸ್ಥಳಗಳಲ್ಲಿ ಪಸರಿಸಿದ ಹಾಗೆ ಧಾರಣೆಯಲ್ಲಿ ಸ್ಥಿರತೆಯೂ, ಏಕರೂಪತೆಯೂ ಉಂಟಾಗಲು ಸಹಾಯವಾಗುವುದು. ಮೂರನೆಯದಾಗಿ, ಅನುಭೋಗಿಗಳಿಗೆ ದೊರೆಯುವ ಸರಕುಗಳಲ್ಲಿ ವೈವಿಧ್ಯವು ಹೆಚ್ಚುವುದು. ನಾಲ್ಕನೆಯದಾಗಿ, ಫಕ್ಕನೆ ಒಂದು ದೇಶದಲ್ಲಿ ಯಾವುದಾದರೂ ಸರಕು ಕಡಿಮೆಯಾದರೆ, ಇನ್ನೊಂದು ದೇಶದಿಂದ ತರಿಸಿಕೊಳ್ಳಬಹುದು.

ಅಖಿಲ ಪ್ರಪಂಚವು ಒಂದು ರಾಷ್ಟ್ರವಾಗಿದ್ದರೆ ಬೇರೆಬೇರೆ ಸರಕುಗಳು ಬೇರೆಬೇರೆ ಕಡೆ ಉತ್ಪಾದಿಸಲ್ಪಡುವುದು ಏಕೆಂದು ಹೇಳುವುದು ಕಷ್ಟ. ಯಾವ ಸ್ಥಳದಲ್ಲಿ ಸರಕನ್ನು ಅತಿಕಡಿಮೆ ವೆಚ್ಚದಲ್ಲಿ ತಯಾರು ಮಾಡಲು ಆಗುವುದೋ, ಆ ಸ್ಥಳದಲ್ಲಿ ಅದನ್ನು ತಯಾರಿಸುವುದರಿಂದ ಅನುಭೋಗಿ

ಗಳಿಗೆ ಅತ್ಯಂತ ಹಿತವಿದೆ  ಹಲವು ರಾಷ್ಟ್ರಗಳಿರುವ ಪ್ರಪಂಚದಲ್ಲಿ ಒಂದು ರಾಷ್ಟ್ರವು 'ಅ' ಸರಕನ್ನು ತಾನೇ ತಯಾರಿಸ ಬಲ್ಲುದಾದರೂ, ಹಾಗೆ ಮಾಡದೆ ಇನ್ನೊಂದು ರಾಷ್ಟ್ರದಿಂದ ಆದನ್ನು ಆಮದುಮಾಡಿಕೊಳ್ಳುವುದೇಕೆ? ಎಂಬುದನ್ನು ಪರಿಶೀಲಿಸಬೇಕು. ಇದಕ್ಕೋಸ್ಕರ ಉತ್ಪಾದಕ ಅವಯವಗಳು ಸಂಚಲಿಸುವುದಿಲ್ಲವೆಂದೂ, ಉತ್ಪತ್ತಿಗಳು ಮಾತ್ರ ಚಲಿಸುವುವೆಂದೂ ಇಲ್ಲಿ ಭಾವಿಸಬೇಕು. ಅಲ್ಲದೆ ಪ್ರಪಂಚದಲ್ಲಿ ಇಟಲಿ, ಸೈಬೇರಿಯಗಳೆಂಬ ಎರಡೇ ದೇಶಗಳಿರುವುವೆಂದು ಊಹಿಸಬೇಕು.

(೧) ಇಟಲಿಯಲ್ಲಿ ಅಂಜೂರ ಮಾತ್ರ ಬೆಳೆಯುವುದು, ತುಪ್ಪಳ ಬೆಳೆಯುವುದಿಲ್ಲ  ಸೈಬೇರಿಯದಲ್ಲಿ ಅಂಜೂರ ಬೆಳೆಯದು, ತುಪ್ಪಳ ಮಾತ್ರ. ಇಂಥ ಸನ್ನಿವೇಶದಲ್ಲಿ ಇಟಲಿ ಸೈಬೇರಿಯಗಳೊಳಗೆ ವ್ಯಾಪಾರವು ನಡೆದರೆ ಎರಡು ದೇಶಗಳಲ್ಲೂ ಹಿಂದೆ ಲಭ್ಯವಾಗದ ಒಂದು ಸರಕು ಈಗ ದೊರೆಯುವಂತಾಗುವುದು. ಇಟಲಿಯ ವರ್ತಕನು ಹಡಗು ತುಂಬುವಷ್ಟು ಅಂಜೂರವನ್ನು ಸೈಬೇರಿಯಕ್ಕೆ ಕೊಂಡುಹೋಗಿ ಅದನ್ನು ಅಲ್ಲಿ ಮಾರಿ, ಬಂದ ಹಣದಿಂದ ತುಪ್ಪಳವನ್ನು ತೆಗೆದುಕೊಂಡು ಇಟಲಿಗೆ ಮರಳಿ, ತಾನು ಅಂಜೂರಕ್ಕೆ ಕೊಟ್ಟ ಹಣವನ್ನೂ ಹಡಗಿನ ಸಾಗುವಾಡು ವೆಚ್ಚಕ್ಕೆ ತೆತ್ತ ಹಣವನ್ನೂ ತನ್ನ ಮುನಾಫೆಯನ್ನೂ ಕೂಡಿಸಿದರೆ ಎಷ್ಟು ಮೊತ್ತ ಬರುವುದೋ ಅಷ್ಟಕ್ಕೆ ಮಾರುವನು. ಇಟಲಿಯ ಅಂಜೂರ ಉತ್ಪಾದನೆಗೂ, ಸೈಬೇರಿಯದ ತುಪ್ಪಳ ಉತ್ಪಾದನೆಗೂ ಒಂದಿಷ್ಟೂ ಭಂಗವು ಬರಲಿಲ್ಲ. ಇಬ್ಬರೂ ಇಷ್ಟಪಡುವ ಎರಡು ಸರಕು ಆಯಾ ದೇಶದಲ್ಲಿ ಸಿಗುವಂತಾದುದು ಅಂತರರಾಷ್ಟ್ರೀಯ ವ್ಯಾಪಾರದಿಂದುಂಟಾದ ಲಾಭ

(೨) ಎರಡು ದೇಶಗಳಲ್ಲಿಯೂ ಅಂಜೂರ ತುಪ್ಪಳಗಳು ತಯಾರಾಗುವುವೆಂದೂ, ಇಟಲಿಯಲ್ಲಿ ಅಂಜೂರವು ತುಪ್ಪಳಕ್ಕಿಂತ ಅಗ್ಗವಾಗಿಯೂ ಸೈಬೇರಿಯದಲ್ಲಿ ತುಪ್ಪಳವು ಅಂಜೂರಕ್ಕಿಂತ ಅಗ್ಗವಾಗಿಯೂ ತಯಾರಾಗುವುವು ಎಂದೂ ಭಾವಿಸುವ.

X ಅವಯವಗಳಿಂದ ಇಟಲಿಯಲ್ಲಿ  ೧೦೦ ಅಂಜೂರಗಳನ್ನೂ,
೫೦ ತುಪ್ಪಳಗಳನ್ನೂ,

X ಅವಯುವಗಳಿಂದ ಸೈಬೀರಿಯದಲ್ಲಿ ೧೦೦ ತುಪ್ಪುಳಗಳನ್ನೂ
೫೦ ಅಂಜೂರಗಳನ್ನೂ

ತಯಾರಿಸಬಹುದೆಂದು ಎಣಿಸುವ. ಇಟಲಿಯು ಅಂಜೂರ ತಯಾರಿಯಲ್ಲಿಯೂ, ಸೈಬೇರಿಯವು ತುಪ್ಪುಳ ತಯಾರಿಯಲ್ಲಿಯೂ ಪ್ರಾವೀಣ್ಯ ಪಡೆದುವು ಎಂದು ಇಟ್ಟುಕೊಂಡರೆ ೨X ಅವಯುವಗಳಿಂದ ಇಟಲಿಯಲ್ಲಿ ೨೦೦ ಅಂಜೂರವೂ, ಸೈಬೇರಿಯದಲ್ಲಿ ೨X ಅವಯುವಗಳಿಂದ ೨೦೦ ತುಪ್ಪುಳವೂ ತಯಾರಾಗುವುವು ೪X ಅವಯುವಗಳ ಒಟ್ಟು ಉತ್ಪಾದನೆ= ೨೦೦ ಅಂಜೂರ + ೨೦೦ ತುಪ್ಪುಳ. ಇಟಲಿ ಸೈಬೇರಿಯಗಳೊಳಗೆ ವ್ಯಾಪಾರವು ನಡೆದರೆ ಅಂತರರಾಷ್ಟ್ರೀಯ ವ್ಯಾಪಾರದ ಲಾಭವು ಈ ಎರಡು ದೇಶಗಳೊಳಗೆ ಹೇಗೆ ಹಂಚಿಹೋಗುವುದೆಂಬುದನ್ನು ತಿಳಿಯಲು ನಮಗೆ ವ್ಯಾಪಾರದ ಷರತ್ತುಗಳು ತಿಳಿದಿರಬೇಕು. ಒಂದು ಅಂಜೂರ ಮಾರಿದಾಗ ಒಂದು ತುಪ್ಪುಳ ಸಿಕ್ಕಿದರೆ ವ್ಯಾಪಾರ ಷರತ್ತು ೧. ಎರಡು ತುಪ್ಪುಳ ಸಿಕ್ಕಿದರೆ ೨. ಎರಡು ತುಪ್ಪುಳ ಸಿಗುವಾಗ ವ್ಯಾಪಾರ ಷರತ್ತು ಇಟಲಿಗೆ ಹೆಚ್ಚು ಅನುಕೂಲವಾಗಿರುವುದು. ವ್ಯಾಪಾರ ಷರತ್ತು ೧ ಇರುವಾಗ ಇಟಲಿಯು ಕಳಿಸುವ ೯೦ ಅಂಜೂರಕ್ಕೆ ೯೦ ತುಪ್ಪುಳವು ದೊರೆಯುವುದು. ಇಟಲಿಯಲ್ಲಿ ೧೧೦ ಅಂಜೂರವೂ ೯೦ ತುಪ್ಪುಳವೂ, ಸೈಬೇರಿಯದಲ್ಲಿ ೯೦ ಅಂಜೂರವೂ, ೧೧೦ ತುಪ್ಪುಳವೂ ಇದ್ದು ಪ್ರತಿಯೊಂದು ದೇಶವು ತಾನೇ ಎರಡೂ ಸರಕುಗಳನ್ನು ತಯಾರಿಸಲು ಕೈಹಾಕುವುದಕ್ಕಿಂತ ಹೆಚ್ಚು ಲಾಭವಾಗುವುದು.

(೩) ಈಗ ಇಟಲಿಯಲ್ಲಿ ತುಪ್ಪುಳ ಅಂಜೂರಗಳೆರಡನ್ನೂ ಸೈಬೇರಿಯಕ್ಕಿಂತ ಕಡಿಮೆ ವೆಚ್ಚದಲ್ಲಿ ತಯಾರಿಸಲು ಬರುವುದೆಂದೂ, ಅಂಜೂರವನ್ನು ತುಪ್ಪುಳಕ್ಕೆ ಸಾಪೇಕ್ಷವಾಗಿ ಮತ್ತೂ ಕಡಿಮೆ ವೆಚ್ಚದಲ್ಲಿ ಉತ್ಪಾದಿಸಬಹುದೆಂದೂ ಊಹಿಸೋಣ. ಇಟಲಿಯಲ್ಲಿ ೨೦೦ ಅಂಜೂರ ಅಥವಾ ೨೦೦ ತುಪ್ಪುಳ, ೧೦೦ ಅಂಜೂರ ಅಥವಾ ೧೦೦ ತುಪ್ಪುಳ ತಯಾರಾಗುವುವೆಂದು ಭಾವಿಸುವ. ಒಂದು ಅಂಜೂರ ಹೆಚ್ಚು ಬೆಳೆಯಬೇಕಾದರೆ ಒಂದು ತುಪ್ಪುಳ ಕಡಮೆಯಾಗುವುದು. ಇಟಲಿಯಲ್ಲಿ ಉಪಯೋಗಿಸಿದಷ್ಟೇ ಅವಯುವಗಳನ್ನು ಸೈಬೇರಿಯದಲ್ಲಿಯೂ ಉಪಯೋಗಿಸಿದರೆ ೮೦ ಅಂಜೂರ + ೧೬೦ ತುಪ್ಪುಳವೂ, ಅಥವಾ ೪೦ ಅಂಜೂರ + ೮೦ ತುಪ್ಪುಳವೂ ತಯಾ

ರಾಗುವುವು. ಇಟಲಿಯೇ ಸ್ವಸಂಪೂರ್ಣರಾಷ್ಟ್ರವಾಗಿ ಬಾಳಬೇಕೆಂದು ಬಯಸಿ ೧೫೦ ಅಂಜೂರ + ೫೦ ತುಪ್ಪುಳ ತಯಾರಿಸುವುದೆಂದೂ, ಅದೇ ಉದ್ದೇಶವನ್ನಿಟ್ಟುಕೊಂಡು ಸೈಬೇರಿಯವು ೪೦ ಅಂಜೂರ+೮೦ ತುಪ್ಪುಳಗಳನ್ನು ಉತ್ಪಾದಿಸುವುದೆಂದೂ ಎಣಿಸುವ. ಅಂತರರಾಷ್ಟ್ರೀಯ ವ್ಯಾಪಾರವು ನಡೆಯುವಾಗ ಇಟಲಿಯು ಅಂಜೂರದಲ್ಲಿಯೂ, ಸೈಬೇರಿಯವು ತುಪ್ಪುಳದಲ್ಲಿಯೂ ಪ್ರಾವೀಣ್ಯ ಪಡೆದ ಪಕ್ಷಕ್ಕೆ ಇಟಲಿಯು ೬೦ ತುಪ್ಪುಳ ೪೫ ಅಂಜೂರ ಕೊಟ್ಟಿತು ಎನ್ನುವಾಗ ಇಟಲಿಯಲ್ಲಿ ೧೫೫ ಅಂಜೂರವೂ ೬೦ ತುಪ್ಪುಳವೂ, ಸೈಬೇರಿಯಲ್ಲಿ ೪೫ ಅಂಜೂರವೂ ೧೦೦ ತುಪ್ಪುಳವೂ ಇರುವುವು. ಪ್ರಾವೀಣ್ಯ ಹಾಗೂ ವಿನಿಮಯದ ದೆಸೆಯಿಂದ ಎರಡು ದೇಶಗಳಿಗೂ ಸ್ಪಷ್ಟವಾದ ಲಾಭ ದೊರೆಯುವುದು.

**ಹೋಲಿಕೆ ವೆಚ್ಚದ ಸೂತ್ರ:**

ಈ ಮೇಲಿನ ಉದಾಹರಣೆಗಳಿಂದ ವಿರಚಿತವಾಗುವ ಸೂತ್ರಕ್ಕೆ "ಹೋಲಿಕೆ ವೆಚ್ಚದ ಸೂತ್ರ" ಎನ್ನುವರು. ಒಂದು ದೇಶವು ತನ್ನ ಹೋಲಿಕೆ ಅನುಕೂಲವು ಅತಿಶಯವಾಗಿರುವ ಸರಕುಗಳ ಉತ್ಪಾದನೆಯಲ್ಲಿ ಪ್ರಾವೀಣ್ಯವನ್ನು ಪಡೆದು ಆ ಸರಕನ್ನು ಬೇರೆ ದೇಶಗಳಿಗೆ ರಫ್ತುಮಾಡಿ ತನ್ನ ಹೋಲಿಕೆ ಅನುಕೂಲವು ಕಡಿಮೆಯಾಗಿರುವ ಯಾವುದಾದರೂ ಸರಕಿನೊಡನೆ ವಿನಿಮಯ ಮಾಡಿಕೊಳ್ಳುವುದರಿಂದ ಆ ದೇಶಕ್ಕೆ ಲಾಭವಾಗುವುದು.

**ವ್ಯಾಪಾರದ ಷರತ್ತುಗಳು:**

ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ನಿರತವಾಗಿರುವ ಒಂದು ದೇಶವು ತಯಾರಿಸುವ ಸರಕುಗಳಲ್ಲಿ ಕೆಲವು ಆ ದೇಶದೊಳಗೇ ಮಾರಿಹೋಗುವುವು, ಕೆಲವು ಪರದೇಶಕ್ಕೆ ರಫ್ತಾಗುವುವು ರಫ್ತಿನ ಬದಲಿಗೆ ಆಮದುಗಳು ಬರುವುವು. ತಾವು ತಯಾರಿಸಿದ ಎಲ್ಲ ಸರಕುಗಳನ್ನು ತಾವೇ ಉಪಯೋಗಿಸುವುದಕ್ಕಿಂತ ಪರದೇಶದ ಆಮದನ್ನು ಜನರು ಹೆಚ್ಚಾಗಿ ಬಯಸುತ್ತಾರೆ. ವಿನಿಮಯದ ದೆಸೆಯಿಂದ ಸ್ವದೇಶದ ಅನುಭೋಗಿಗಳಿಗೆ ಎಷ್ಟು ಲಾಭವೆಂಬುದನ್ನು ತಿಳಿಯಲು ವ್ಯಾಪಾರದ ಷರತ್ತುಗಳನ್ನು ಪರಿಶೀಲಿಸಬೇಕು.

ರಫ್ತುಗಳೂ ಆಮದುಗಳೂ ಒಂದರೊಡನೊಂದು ವಿನಿಮಯವಾಗುವ ಧಾರಣೆಗೆ 'ವ್ಯಾಪಾರ ಷರತ್ತು' ಎಂದು ಹೆಸರು ನಮ್ಮ (೩)ನೆಯ ಉದಾಹರಣೆಯಲ್ಲಿ ಇಟಲಿಗೆ ಒಂದು ತುಪ್ಪುಳ ತಯಾರಿಸುವ ಸಾಂದರ್ಭಿಕ ವೆಚ್ಚವು ಒಂದು ಅಂಜೂರವಾದುದರಿಂದ, ಒಂದಕ್ಕಿಂತ ಎಷ್ಟು ಹೆಚ್ಚು ತುಪ್ಪುಳ ಬಂದರೂ ಇಟಲಿಗೆ ಒಂದು ಅಂಜೂರವನ್ನು ರಫ್ತು ಮಾಡುವ ಉತ್ಸಾಹವಿರುವುದು ಸಹಜ. ಸೈಬೀರಿಯಕ್ಕೆ ಒಂದು ಅಂಜೂರ ತಯಾರಿಸುವ ವೆಚ್ಚವು ಎರಡು ತುಪ್ಪುಳವಾದುದರಿಂದ ಎರಡು ತುಪ್ಪುಳಕ್ಕಿಂತ ಕಡಮೆಯಾದ ಯಾವ ದರದಲ್ಲಿಯೂ ಸೈಬೀರಿಯವು ಇಟಲಿಯಿಂದ ಒಂದು ಅಂಜೂರವನ್ನು ಕೊಂಡುಕೊಳ್ಳಲು ಸಿದ್ಧವಾಗಿದೆ. ವ್ಯಾಪಾರ ಷರತ್ತು ಎರಡು ದೇಶಗಳ ಸಾಂದರ್ಭಿಕ ವೆಚ್ಚಗಳ ನಡುವೆ ಎಲ್ಲೋ ಬಂದು ನಿಲ್ಲುತ್ತದೆ. ಒಂದಕ್ಕಿಂತ ಹೆಚ್ಚು, ಎರಡಕ್ಕಿಂತ ಕಡಮೆ ತುಪ್ಪುಳಕ್ಕೆ ಒಂದು ಅಂಜೂರವನ್ನು ಕೊಡಲು ಇಟಲಿಯು ಸದಾ ಸಿದ್ಧವಾಗಿದೆ. ಪ್ರತಿಯೊಂದು ದೇಶದಲ್ಲಿಯೂ ಇರುವ ಅಂಜೂರ ತುಪ್ಪುಳಗಳ ಸಾಪೇಕ್ಷ ಬೇಡಿಕೆಯ ಮೇಲೆ ವಿನಿಮಯದರವು— ವ್ಯಾಪಾರ ಷರತ್ತು— ಹೊಂದಿಕೊಂಡಿದೆ. ಕಾಲವು ಸಂದಂತೆ ವ್ಯಾಪಾರ ಷರತ್ತು ಬದಲಾಗುವುದು. ಇಂಥ ಬದಲಾವಣೆಯು ಬೇಡಿಕೆಯ ಬದಲಾವಣೆಯ ದೆಸೆಯಿಂದ ಬಂದಿರುವುದಾದರೆ ಯಾವ ದೇಶದ ರಫ್ತಿಗೆ ಬೇಡಿಕೆ ಹೆಚ್ಚಾಗಿರುವುದೋ ಆ ದೇಶವು ಅಧಿಕ ಲಾಭ ಪಡೆಯುವುದು. ಸರಕುಗಳನ್ನು ಹೆಚ್ಚು ಪರಿಮಾಣದಲ್ಲಿ ರಫ್ತು ಮಾಡುವ ದೇಶದ ಮೇಲೆ ವ್ಯಾಪಾರ ಷರತ್ತು ಪರಿಣಾಮ ಮಾಡಿದಷ್ಟು ಆಂತರಿಕ ವ್ಯಾಪಾರವನ್ನೇ ವಿಶೇಷವಾಗಿ ನಂಬಿರುವ ದೇಶದ ಮೇಲೆ ಪರಿಣಾಮಮಾಡಲಾರದು.

**ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಸಮತೋಲ ಸೂತ್ರ:**

ವ್ಯಕ್ತಿಪರ ಪ್ರಾವೀಣ್ಯ, ಶ್ರಮವಿಭಾಗಗಳಿಗೂ ಅಂತರರಾಷ್ಟ್ರೀಯ ಪ್ರಾವೀಣ್ಯ ಮತ್ತು ಶ್ರಮವಿಭಾಗಗಳಿಗೂ ಹೆಚ್ಚು ವ್ಯತ್ಯಾಸವಿಲ್ಲ. ವ್ಯಕ್ತಿಗಳಂತೆ ದೇಶಗಳೂ ಯಾವ ಸರಕಿನಲ್ಲಿ ತಮ್ಮ ಅವಯವ ಸಂಯೋಜನೆಯ ಅನುಕೂಲ್ಯವು ಅತಿ ಹೆಚ್ಚಾಗಿರುವುದೋ ಆ ಸರಕನ್ನೇ ಉತ್ಪಾದಿಸತಕ್ಕುದು.

ಅಂತರರಾಷ್ಟ್ರೀಯ ವ್ಯಾಪಾರಕ್ಕೂ ಧಾರಣೆಯ ವ್ಯತ್ಯಾಸವೇ ಕಾರಣ ವಾಗಿದೆ. ಅದೂ ಒಂದು ಧಾರಣೆಯ ಘಟನೆ ಬೇರೆಬೇರೆ ದೇಶಗಳಲ್ಲಿನ ಅವಯವ ಸಂವಿಧಾನಗಳಲ್ಲಿರುವ ವ್ಯತ್ಯಾಸಗಳಿಗೂ ಅಲ್ಲಿನ ಧಾರಣೆ—ವೆಚ್ಚ ಗಳ ವ್ಯತ್ಯಾಸಗಳಿಗೂ ಏನಾದರೂ ಸಂಬಂಧ ಇರಬಹುದೆ? ಎಂಬ ಪ್ರಶ್ನೆ ಯನ್ನು ವಿಚಾರಿಸುವಾಗ ನಾವು ಹಲಕೆಲವು ಊಹನೆಗಳನ್ನು ಮಾಡ ಬೇಕಾಗುವುದು: (೧) ಉತ್ಪಾದಕ ಅವಯವಗಳು ಪರಿಪೂರ್ಣ ಸಂಚಲನೆ ಯುಳ್ಳವು. (೨) ಟಾರೀಫು, ಸಾಗುವಾಡಿನ ವೆಚ್ಚ ಮುಂತಾದುವು ಅವ ಯವಸಂಚಲನೆಗೆ ಅಡ್ಡಿಯಾಗುವುದಿಲ್ಲ (೩) ಅವಯವಗಳನ್ನು ಎಷ್ಟು ಚಿಕ್ಕ ಅಂಶಗಳನ್ನಾಗಿಯೂ ವಿಂಗಡಿಸಬಹುದು. (೪) ವಿನಿಮಯವಾಗು ವುದು ಸರಕು ಮಾತ್ರ, (೫) ಸರಕುಗಳ ಗುಣಗಳಲ್ಲಿ ಭೇದವಿಲ್ಲ. (೬) ಜಗ ತ್ತಿನಲ್ಲಿರುವುದು ಎರಡೇ ರಾಷ್ಟ್ರಗಳು. ಇಂಥ ಸನ್ನಿವೇಶದಲ್ಲಿ ಎರಡು ದೇಶ ಗಳ ನಡುವೆ ವ್ಯಾಪಾರವು ನಡೆಯಬೇಕಾದರೆ ಅವುಗಳ ಸಾಪೇಕ್ಷ ಧಾರಣೆ ಗಳಲ್ಲಿ ವ್ಯತ್ಯಾಸವಿರಲೇ ಬೇಕು. ಉತ್ಪಾದನೆಯ ಅವಯವಗಳ ಸಾಪೇಕ್ಷ ವಿರಳತ್ವವು ಒಂದೇ ಆಗಿರುವ ಪಕ್ಷಕ್ಕೆ, ಸಾಪೇಕ್ಷ ಅವಯವ-ಧಾರಣೆಗಳೂ, ಸರಕು–ಧಾರಣೆಗಳೂ ಅದಕ್ಕಿಂತ ಬೇರೆಯಾಗಲಾರವು ಹಾಗಾದಲ್ಲಿ ಅಂತರರಾಷ್ಟ್ರೀಯ ವ್ಯಾಪಾರವು ನಡೆಯಲಾರದು. ಎರಡು ದೇಶಗಳ ಹಣಗಳಿಗೆ ಮಾರುವೆದರವು ನಿಶ್ಚಿತವಾದೊಡನೆ ಎಲ್ಲಿ ಯಾವ ಸರಕು ಅತಿ ಅಗ್ಗವಾಗಿ ತಯಾರಾಗಲು ಸಾಧ್ಯವುಂಟೋ ಅಲ್ಲೇ ಅದನ್ನು ತಯಾರಿಸುವರು.

ಪ್ರತಿಯೊಂದು ದೇಶದ ಧಾರಣೆಯ ಮೇಲೆ ಎಂತೆಂತಹ ಶಕ್ತಿಗಳು ಪ್ರಭಾವ ಬೀರುವುವೋ ಅವೇ ಅಂತರರಾಷ್ಟ್ರೀಯ ವ್ಯಾಪಾರವನ್ನೂ ನಿರ್ಧರಿಸುವುವು

**ಅಂತರರಾಷ್ಟ್ರೀಯ ವ್ಯಾಪಾರದ ಪರಿಣಾಮಗಳು:**

(೧) ಸರಕುಗಳ ಧಾರಣೆಯಲ್ಲಿ ಸಮಾನತ್ವವು ಮೂಡುವುದು

(೨) ಅವಯವಗಳ ಧಾರಣೆಯಲ್ಲಿ ಸಮಾನತ್ವವು ಮೂಡುವುದು.

(೩) ವ್ಯಾಪಾರದಿಂದ ಸಿಗುವ ಮುನಾಫೆ.

(೪) ವರಮಾನವು ಹೆಚ್ಚುವುದರಿಂದ ದೇಶದೊಳಗೆ ಸರಕುಗಳ ಬೇಡಿಕೆಯು ಹಿಗ್ಗುವುದು.

(೫) ಪ್ರಾವೀಣ್ಯವು ಅಧಿಕವಾಗುತ್ತ ಹೋದಂತೆ ಅಂತರರಾಷ್ಟ್ರೀಯ ಅವಯವ ಸಂವಿಧಾನದಲ್ಲಿ ಬದಲಾವಣೆಗಳುಂಟಾಗುವುವು.

**ಪಾವತಿ ಸಿಲ್ಕು: ಬ್ಯಾಲೆನ್ಸ್ ಒಫ್ ಪೇಮೆಂಟ್ಸ್:**

ರಾಮಯ್ಯನಿಗೆ ವರ್ಷವೊಂದಕ್ಕೆ ದೊರೆಯುವ ವರಮಾನವು ೨೦,೦೦೦ ರುಪಾಯಿಯೆಂದೂ, ಅವನು ಅದರಲ್ಲಿ ಆ ವರ್ಷ ಹೊರಗೆ ಕೊಡಬೇಕಾದ ಮೊಬಲಗು ೧೭,೦೦೦ ರುಪಾಯಿಯೆಂದೂ ಎಣಿಸಿದರೆ ವರ್ಷಾಂತ್ಯದಲ್ಲಿ ಅವನ ಹತ್ತಿರ ೩,೦೦೦ ರುಪಾಯಿಯ ಸಿಲ್ಕು ಉಳಿಯುವುದು. ಅವನಿಗೆ ಹೊರಗಿನಿಂದ ಸಂದ ಹಣವನ್ನೂ ಅವನು ಹೊರಗೆ ಸಲ್ಲಿಸಬೇಕಾದ ಹಣವನ್ನೂ ಸಮತೂಕವಾಗಿರಿಸುವ ಈ ಮೂರು ಸಾವಿರದ ಮೊತ್ತಕ್ಕೆ 'ಸಿಲ್ಕು' ಅಥವಾ 'ಬ್ಯಾಲೆನ್ಸ' ಅನ್ನುವರು. ಒಬ್ಬನ ಬದಲು ಹಲವು ಜನರ ಗುಂಪನ್ನು ತೆಗೆದುಕೊಂಡರೂ ಆ ಗುಂಪಿನ ಲೆಕ್ಕಕ್ಕೆ ಒಳಸೇರುವ ಹಣವನ್ನೂ, ಅವರ ಲೆಕ್ಕದಲ್ಲಿ ಹೊರಹೋದ ಹಣವನ್ನೂ ಸಮೀಕರಿಸುವ 'ಬ್ಯಾಲೆನ್ಸ್' ಇದ್ದೇ ಇರುವುದು. ಪ್ರಪಂಚದಲ್ಲಿ ಭಾರತ, ಇಂಗ್ಲೆಂಡು ಎರಡೇ ದೇಶಗಳಿವೆಯೆಂದು ಎಣಿಸೋಣ. ಭಾರತೀಯರು ಅಮೇರಿಕದಿಂದ ತರಿಸಿಕೊಂಡ ಮೋಟಾರುಕಾರು ಯಂತ್ರಗಳಿಗೂ, ನಮ್ಮ ರಾಯಭಾರಿಗಳು ವಾಲ್ಡೋರ್ಫ್ ಆಸ್ಟೋರಿಯಾ ಮುಂತಾದ ಹೋಟೆಲುಗಳಲ್ಲಿ ಉಳಕೊಂಡುದಕ್ಕೂ, ಇಂಗ್ಲಿಷ್ ಹಡಗುಗಳಲ್ಲಿ ನಾವು ಸರಕು ಸಾಗಿಸಿದುದಕ್ಕೂ, ಲಾಯಿಡ್ಸ್ ಬೇಂಕ್ ಹಾಗೂ ಕ್ರೌನ್ ಇನ್ಶೂರೆನ್ಸ್ ಕಂಪೆನಿಗಳ ಸೌಕರ್ಯ ಪಡೆದುದಕ್ಕೂ, ಪ್ರತಿವರ್ಷವೂ ನಾವು ಅವರಿಗೆ ಹಣ ತೆರಬೇಕು. ಮೋಟರು, ಯಂತ್ರ ಮೊದಲಾದುವು ಭಾರತದ ದೃಷ್ಟಿಯಲ್ಲಿ 'ದೃಶ್ಯ' ಆಮದುಗಳು. ಹಡಗು, ವಿಮಾ ಕಂಪೆನಿಗಳ ಸೇವೆ ಮುಂತಾದುವು 'ಅದೃಶ್ಯ' ಆಮದುಗಳು. ಇವೇ ಇಂಗ್ಲೆಂಡಿನ ದೃಷ್ಟಿಯಲ್ಲಿ 'ದೃಶ್ಯ' ಮತ್ತು 'ಅದೃಶ್ಯ' ರಫ್ತುಗಳು. ನಾವು ನಮ್ಮ ಸ್ಟರ್ಲಿಂಗ್ ಸೆಕ್ಯೂರಿಟಿಯನ್ನು ಇನ್ನೊಬ್ಬರಿಗೆ ಮಾರಿದಾಗಲೂ, ಸಣಬು, ಹತ್ತಿ, ಮ್ಯಾಂಗನೀಸ್, ಬಟ್ಟೆ

ಮೊದಲಾದ ಸರಕುಗಳನ್ನು ರಫ್ತು ಮಾಡಿದಾಗಲೂ, ಬ್ರೇಜಿಲ್, ಅರ್ಜೆಂಟೀನಾ, ಇಂಗ್ಲೆಂಡ್ ಮೊದಲಾದ ದೇಶಗಳಿಂದ ನಮಗೆ ಹಣವು ಬರುತ್ತದೆ. ಅವರ ಸೆಕ್ಯೂರಿಟಿಗಳನ್ನು ಕೊಂಡರೆ ಅವರಿಗೆ ನಾವು ಹಣವನ್ನು ಕೊಡಬೇಕಾಗುತ್ತದೆ. ಆಮದು ರಫ್ತುಗಳ ಸಮತೋಲಕ್ಕೆ ಕಾರಣವಾಗುವ 'ಬ್ಯಾಲೆನ್ಸ್ ಒಫ್ ಪೇಮೆಂಟ್ಸ್' ಸಮೀಕರಣವು ಈ ಕೆಳಗಿನ ಹಾಗಿರುತ್ತದೆ:

ಒಳಗೆ ಬರುವ ಹಣ = ಹೊರಗೆ ಕೊಡುವ ಹಣ + ಶಿಲ್ಕಿನ ಹೆಚ್ಚಳ.

| | | | | | | | | |
|---|---|---|---|---|---|---|---|---|
| ರಫ್ತಿನ ಮೌಲ್ಯ (ವಿದೇಶೀಯರಿಗೆ ಮಾರಿದ ಸರಕು ಸೇವೆಗಳು) | + | ವಿದೇಶೀಯರಿಗೆ ಮಾರಿದ ಸೆಕ್ಯೂರಿಟಿಗಳ ಮೌಲ್ಯ | = | ಆಮದಿನ ಮೌಲ್ಯ (ವಿದೇಶೀಯರಿಂದ ಕೊಂಡ ಸರಕು ಸೇವೆ) | + | ವಿದೇಶೀಯರಿಂದಕೊಂಡ ಸೆಕ್ಯೂರಿಟಿಗಳ ಮೌಲ್ಯ | + | ಸಿಲ್ಕಿನ ಹೆಚ್ಚಳ |

೧೯೩೬ರಲ್ಲಿ ಅಮೇರಿಕದ ಸಂಯುಕ್ತ ರಾಜ್ಯದ ಬ್ಯಾಲೆನ್ಸ್ ಒಫ್ ಪೇಮೆಂಟ್ಸ್ ಕೆಳಗೆ ಕಂಡ ಹಾಗಿತ್ತು:

| ಬಾಬುಗಳು | ವಿದೇಶೀಯರಿಂದ ಜಮಾ "ರಫ್ತು" 'ಕ್ರೆಡಿಟ್' | ವಿದೇಶೀಯರಿಗೆ ಪಾವತಿ 'ಆಮದು' 'ಡೆಬಿಟ್' | ಐನ್ ಕ್ರೆಡಿಟ್ (+) ಅಥವಾ ಡೆಬಿಟ್ (−) | |
|---|---|---|---|---|
| **ವ್ಯಾಪಾರ ಮತ್ತು ಸೇವೆಗಳು** | | | | |
| ವ್ಯಾಪಾರೀ ಸರಕು .... ... | ೨೪೫೬ | ೨೪೨೨ | + | ೩೪ |
| ವ್ಯಾಪಾರೀ ಸರಕುಗಳ ಸರಿಪಡಿಸೋಣ | ೬೬ | ೪೧ | + | ೨೫ |
| ಸಾಗುವಾಡು ಮತ್ತು ಹಡಗು . | ೬೮ | ೧೨೯ | − | ೬೧ |
| ಪ್ರವಾಸಿಕರ ಖರ್ಚು .... . . | ೧೨೫ | ೪೯೭ | − | ೩೭೨ |
| ದೇಶದಲ್ಲಿರುವ ವಿದೇಶೀಯರ ಇರಸಾಲು | ೫ | ೧೧೫ | − | ೧೧೦ |
| ದಾನ, ಶೈಕ್ಷಣಿಕ ಮತ್ತು ಇತರ ವಂತಿಗೆಗಳು | ... | ೩೨ | − | ೩೨ |
| ಬಡ್ಡಿ ಮತ್ತು ಲಾಭಾಂಶ .... .... | ೫೬೮ | ೨೩೮ | + | ೩೩೦ |
| ಯುದ್ಧ-ಸಾಲದ ಜಮೆ .... .... | ೧ | .... | + | ೧ |

| | | | |
|---|---|---|---|
| ಸರಕಾರೀ ಲೇವಾದೇವಿ (ಯುದ್ಧ-ಸಾಲದ ಜಮೆಯನ್ನು ಹೊರತಾಗಿ | ೩೦ | ೯೬ | — ೬೬ |
| ಇತರ ಸೇವೆಗಳು .... .... | ೧೬೪ | ೬೬ | + ೯೮ |
| ಒಟ್ಟು ವ್ಯಾಪಾರ ಮತ್ತು ಸೇವೆ | ೩೪೮೩ | ೩೬೩೬ | — ೧೫೩ |
| **ಚಿನ್ನ ಮತ್ತು ಬೆಳ್ಳಿ** | | | |
| ಚಿನ್ನದ ಆಮದು ಮತ್ತು ರಫ್ತು .... | ೨೮ | ೧೧೪೪ | —೧೧೬೬ |
| ಚಿನ್ನದ 'ಇಯರ್ ಮಾರ್ಕಿಂಗ್ ಒಪರೇಶನ್' ಒಟ್ಟು | | | + ೮೬ |
| ಒಟ್ಟು ಚಿನ್ನದ ಸಂಚಲನೆ | | | —೧೦೩೦ |
| ಬೆಳ್ಳಿಯ ರಫ್ತು ಮತ್ತು ಆಮದು | ೩ | ೧೮೩ | — ೧೮೦ |
| ಒಟ್ಟು ಚಿನ್ನ ಬೆಳ್ಳಿಯ ಸಾಗಾಟ | | | —೧೨೧೦ |
| **ಬಂಡವಾಳ** | | | |
| ನಿಡುವಾಯಿದೆ ಬಂಡವಾಳದ ಸಂಚಲನೆ | ೩೪೭೫ | ೨೭೧೭ | + ೭೫೮ |
| ಕಿರುವಾಯಿದೆಯ ಬ್ಯಾಂಕಿಂಗ್ ಫಂಡುಗಳ ಸಂಚಲನೆ | | | + ೪೦೪ |
| ಇತರ ಬಂಡವಾಳ .... .... | | | — ೧೨ |
| ಕಾಗದ ಹಣದ ಸಂಚಲನೆ .... | ೫೭ | ೩೫ | + ೨೨ |
| ಒಟ್ಟು ಬಂಡವಾಳ .... .... | | | +೧೧೭೨ |
| ಒಟ್ಟು ಶೇಷಾಂಶ .. ... | | | + ೧೯೧ |

ಈ ಕೆಳಗೆ ಬಂಡವಾಳದ ಸಂಚಲನೆಯನ್ನು ಬಿಟ್ಟುಬಿಟ್ಟು ಬರೆ ಅಂದಾಜು 'ಬ್ಯಾಲೆನ್ಸ್'ಗಳನ್ನು ಮಾತ್ರ ತೋರಿಸಲಾಗುತ್ತದೆ. ಇದನ್ನು ೨೫ನೇ ಫೆಬ್ರುವರಿ, ೧೯೩೭ರ 'ಬೋರ್ಡ್ ಓಫ್ ಟ್ರೇಡ್ ಜರ್ನಲ್' ಎಂಬುದರಿಂದ ಆರಿಸಿಕೊಳ್ಳಲಾಗಿದೆ.

| | (ಮಿಲಿಯ £) |
|---|---|
| ಬೆಳ್ಳಿಯ ಗಟ್ಟಿ, ನಾಣ್ಯಗಳು ಮತ್ತು ವ್ಯಾಪಾರೀ ಸರಕುಗಳ ಆಮದಿನ ಹೆಚ್ಚುವರಿ .... | ೩೪೭ |
| ಸರಕಾರವು ಸಾಗರಾಂತರಕ್ಕೆ ಮಾಡಿದ ಪಾವತಿಗಳ ಅಂದಾಜು ಹೆಚ್ಚುವರಿ .... | ೨ |
| | ೩೪೯ |
| ಹಡಗಿನಿಂದ ಬರುವ ನಿವ್ವಳ ರಾಷ್ಟ್ರೀಯ ವರಮಾನದ ಅಂದಾಜು .... | ೯೫ |
| ಸಾಗರೋತ್ತರದ 'ಇನ್ವೆಸ್ಟ್‌ಮೆಂಟ್'ಗಳಿಂದ ಬಂದ ನಿವ್ವಳ ಮುನಾಫೆಯ ಅಂದಾಜು .... | ೧೯೫ |
| ಕಮಿಷನ್ ಇತ್ಯಾದಿಗಳಿಂದ ಬಂದ ಅಂದಾಜು ಜಮೆ ... | ೩೦ |
| ಇತರ ಕಡೆಯಿಂದ ಬಂದ ಅಂದಾಜು ಜಮೆ .. .... | ೧೦ |
| | ೩೩೦ |
| ಮೇಲ್ಕಾಣಿಸಿದ ಬಾಬುಗಳ ಒಟ್ಟು ಅಂದಾಜು 'ಡೆಬಿಟ್' .. | ೧೯ |

**ಆಮದು**

| | |
|---|---|
| ವ್ಯಾಪಾರೀ ಸರಕು ... ... ... .... | ೮೪೮.೯ |
| ಬೆಳ್ಳಿಯ ಗಟ್ಟಿ, ನಾಣ್ಯಗಳು .... .. .... | ೧೭.೧ |
| | ೮೬೭.೦ |

**ರಫ್ತು**

| | |
|---|---|
| ವ್ಯಾಪಾರೀ ಸರಕು .... ... .. .... | ೫೦೧.೧ |
| ಬೆಳ್ಳಿಯ ಗಟ್ಟಿ, ನಾಣ್ಯ ... ... .... . | ೧೮.೧ |
| | ೫೧೯.೨ |

**ಭಾರತದ ಆಯಾತ-ನಿರ್ಯಾತ ಧೋರಣೆ:**

ಸ್ವಾತಂತ್ರ್ಯವು ದೊರೆತಂದಿನಿಂದಲೂ ಭಾರತದ ವ್ಯಾಪಾರ ಶಿಲ್ಕು ಭಾರತಕ್ಕೆ ಅನುಕೂಲವಾಗಿಯೇ ಇದೆ. ೧೯೫೦-೫೧ನೆಯ ಸಾಲಿನಲ್ಲಿ ನಮ್ಮ ವ್ಯಾಪಾರ ಶಿಲ್ಕು ೩೫.೪೫ ಕೋಟಿ ರುಪಾಯಿಗಳಷ್ಟು ಇದ್ದಿತು.

ಕೊರಿಯಾ ಯುದ್ಧದ ದೆಸೆಯಿಂದ ನಾವು ಮುಖ್ಯವಾಗಿ ಸಾಮುಗ್ರಿಗಳನ್ನು ತರಿಸುವಂಥ ಬ್ರಿಟನಿನಲ್ಲಿ ಬೆಲೆಗಳು ಏರಿದುವು. ಇದರಿಂದಾಗಿ ನಮ್ಮ ಆಯಾತ ಸರಕುಗಳಿಗೆ ನಾವು ತೆರಬೇಕಾದ ಮೊಬಲಗು ಕೂಡ ಹೆಚ್ಚಾಗಿದೆ. ನಮ್ಮ ವಾಣಿಜ್ಯ ಮಂಡಲಕ್ಕೆ ಹೇರಳ ಆಯುವನ್ನುಂಟುಮಾಡುವ ಸಣಬಿನ ಸರಕುಗಳಿಗೆ ಈಚೀಚೆಗೆ ಅಮೇರಿಕದಲ್ಲಿ ಹತ್ತಿಯ ಚೀಲಗಳ ಪೈಪೋಟಿಯನ್ನು ಸಹಿಸಬೇಕಾಗಿ ಬಂದಿದೆ. ಪ್ರಾಚ್ಯ ಮತ್ತು ಮಧ್ಯಪೂರ್ವದ ದೇಶಗಳಿಗೆ ನಾವು ಸುಮಾರು ೧೦೦ ಕೋಟಿ ಗಜ ಬಟ್ಟೆಯನ್ನು ಪ್ರತಿವರ್ಷವೂ ರಫ್ತು ಮಾಡುವುದು (೧೯೫೦–೫೧ರಲ್ಲಿ ೧೨೬.೯ ಕೋಟಿ ಗಜವು ರಫ್ತಾಗಿದೆ) ವರ್ಷಸಂದಂತೆ ಹೆಚ್ಚುಹೆಚ್ಚು ಆವಶ್ಯಕವಾಗುವುದು. ಭಾರತ–ಪಾಕಿಸ್ತಾನಗಳ ವಿಭಜನಾನಂತರದಲ್ಲಿ ನಮ್ಮ ದೇಶವು ಹೊರನಾಡಿನ ಆಹಾರಕ್ಕಾಗಿ ಕೋಟ್ಯಂತರ ರುಪಾಯಿಗಳನ್ನು ವೆಚ್ಚಮಾಡುತ್ತಿದೆ; ಮೊದಲೇ ವಿರಳವಾಗಿರುವ ನಮ್ಮ ವಿದೇಶೀಯ ಹಣದ ಸಂಚಯನಕ್ಕೆ ಈ ಒಂದು ಬಾಬಿನಿಂದಲೇ ತುಂಬ ಆಘಾತವಾಗುತ್ತಿದೆ. ೧೯೪೬ರಿಂದಲೂ ನಾವು ಪರದೇಶಗಳಿಂದ ವಿಪುಲ ಯಂತ್ರಸಾಮುಗ್ರಿಗಳನ್ನು ತರಿಸಿಕೊಳ್ಳುತ್ತಿದ್ದೇವೆ ನಮ್ಮ ಔದ್ಯೋಗೀಕರಣದಿಂದಲೇ ನಮ್ಮ ನಾಡಿನ ಮುಕ್ತಿ ಎಂಬುದು ಇದರಿಂದ ವಿದಿತವಾಗುವುದು. ನಮ್ಮ ಔದ್ಯಮಿಕ ಉತ್ಪತ್ತಿಗಳಿಗೆ ಪ್ರಾಚ್ಯ ದೇಶಗಳಲ್ಲಿ ಬೇಕೆಂಬಷ್ಟು ಗಿರಾಕಿ ಇರುವುದರಿಂದ ನಿರ್ಯಾತಕ್ಕೋಸ್ಕರವಾಗಿ ಔದ್ಯಮಿಕ ಸರಕುಗಳನ್ನು ಉತ್ಪಾದಿಸುವುದರಿಂದ ನಮ್ಮ ವಿದೇಶೀಯ ಹಣದ ಪರಿಸ್ಥಿತಿಯು ಸುಖಕರವಾಗುವುದು. ಇಷ್ಟಾಗದೆ ನಮ್ಮ ಅನುಕೂಲ ಶಿಲ್ಕು ಎಷ್ಟು ಕೋಟಿ ರುಪಾಯಿಗಳಷ್ಟಾದರೂ ಕ್ಷೇಮವಿಲ್ಲ. ೧೯೪೬ರಿಂದ ೧೯೫೧ರ ವರೆಗೆ ನಾವು ತರಿಸಿಕೊಂಡ ಯಂತ್ರ ಸಾಮುಗ್ರಿಗಳ ಯಾದಿಯ ವೈವಿಧ್ಯವನ್ನಿಲ್ಲಿ ನೋಡಬಹುದು.

| | (ಕೋಟಿ ರುಪಾಯಿ) |
|---|---|
| ವಿದ್ಯುತ್ಸಂಬಂಧವಿರದ ಪ್ರಧಾನ ಚಾಲಕ ಯಂತ್ರಗಳು | ೪೯.೯೪ |
| ವಿದ್ಯುತ್ ಸಲಕರಣೆಗಳು .... .... .... | ೫೨.೨೦ |
| ಕೃಷಿ ಯಂತ್ರಗಳು .... .... .... .... | ೧೭.೬೧ |
| ಏರೇಟೆಡ್ ವಾಟರ್ ಯಂತ್ರಗಳು .... .... | .೧೨ |

| | |
|---|---|
| ಬೊಯ್ಲರುಗಳು | ೧೯·೪೯ |
| ಬೂಟಿನ ಯಂತ್ರಗಳು | ·೪೩ |
| ಚರ್ಮ ಹದಗೊಳಿಸುವ ಯಂತ್ರಗಳು | ೧೭ |
| ಯಂತ್ರಾಯುಧಗಳು | ೧೩·೫೦ |
| ಲೋಹಕ್ಕೆ ಸಂಬಂಧಿಸಿದ ಯಂತ್ರಗಳು | ೨ ೮೪ |
| ಗನಿಗಾರಿಕೆ | ೪ ೬೧ |
| ಎಣ್ಣೆ ಹಿಂಡುವುವು | ೨·೩೧ |
| ಕಾಗದದ ಕಾರ್ಖಾನೆ | ೫ ೨೦ |
| ನೀರು ಸೇದುವುವು | ೭·೦೨ |
| ಶೈತ್ಯ ಯಂತ್ರಗಳು | ೫·೭೮ |
| ಅಕ್ಕಿ–ಹಿಟ್ಟಿನ ಯಂತ್ರಗಳು | ೧ ೩೫ |
| ಹೊಲಿಗೆ | ೭·೮೩ |
| ಸಕ್ಕರೆ | ೫ ೭೭ |
| ಚಹ | ೩·೦೯ |
| ಹತ್ತಿಯ ಬಟ್ಟೆಯ ಯಂತ್ರ | ೪೦ ೦೫ |
| ಸಣಬಿನ ಯಂತ್ರಗಳು | ೯.೬೭ |
| ಇತರ ನೆಯ್ಗೆ ಯಂತ್ರಗಳು | ೧೩ ೦೨ |
| ಟೈಪ್‌ರೈಟರುಗಳು | ೩ ೯೫ |
| ಇತರ ಯಂತ್ರಗಳು | ೮೦ ೧೪ |
| ಮುದ್ರಣ ಯಂತ್ರಗಳು | ೬ ೩೭ |
| ಬೆಲ್ಟಿಂಗ್ | ೮·೪೧ |
| | ೩೬೧ ೦೭ |

**ಪಾವತಿ ಶಿಲ್ಕು ಸಮತೋಲವನ್ನುಂಟು ಮಾಡುವುದು ಹೇಗೆ?**

ವಿನಿಮಯಕ್ಕೆ ಯಾವಾಗಲೂ ಎರಡು ಮುಖಗಳು. ವಿದೇಶೀಯ ಹಣವನ್ನು ಭಾರತೀಯರು ಕೊಳ್ಳುವಾಗ ಅದನ್ನು ವಿದೇಶೀಯರಲ್ಲಿ ಯಾರಾ ದರೂ ಒಬ್ಬನು ನಮಗೆ ಮಾರಬೇಕು. ಇಂಗ್ಲೆಂಡಿನಲ್ಲಿ ಪ್ರತಿ ಆರು ತಿಂಗ

ಳಲ್ಲೋ ಮೂರು ತಿಂಗಳಲ್ಲೋ ಮಾರಿಹೋಗುವ ಒಟ್ಟು ಸ್ಟರ್ಲಿಂಗೂ, ಕೊಂಡುಕೊಳ್ಳಲ್ಪಡುವ ಸ್ಟರ್ಲಿಂಗೂ ಸಮಾನವಾಗಬೇಕು. ಮಾರಿಹೋದ ಸ್ಟರ್ಲಿಂಗೇ ಕೊಂಡುಕೊಂಡ ಸ್ಟರ್ಲಿಂಗು. ಆದುದರಿಂದ ಪಾವತಿ ಶಿಲ್ಕು ಯಾವಾಗಲೂ 'ಬ್ಯಾಲೆನ್ಸ್' ಆಗುವುದವಶ್ಯ.

ಪ್ರತಿನಿತ್ಯವೂ ಅನೇಕ ಅಂತರರಾಷ್ಟ್ರೀಯ ವಹಿವಾಟುಗಳು ನಡೆಯುತ್ತಿರುವುವು. ಬ್ಯಾಲೆನ್ಸ್ ಓಫ್ ಪೇಮೆಂಟ್ಸನ್ನು ನದರಿನಲ್ಲಿಟ್ಟುಕೊಂಡು ವ್ಯವಹಾರ ಮಾಡುವವರು ಯಾರಿದ್ದಾರೆ? ಮಿ. ಮೇಥಾರು ಲಂಡನ್ನಿಗೆ ಹೋಗಿ ಮನಸ್ಸಿಗೆ ಖರ್ಚುಮಾಡುತ್ತಾರೆ. ಬಂಡವಾಳಗಾರರು ತಮ್ಮ ಬಂಡವಾಳವನ್ನು ಹೆಚ್ಚು ದರ ಸಿಗುವ ದೇಶಕ್ಕೆ ಸಾಗಿಸಿ 'ಇನ್ವೆಸ್ಟ್' ಮಾಡುತ್ತಾರೆ. ಭಾರತೀಯ ಫರ್ಮುಗಳು ಯಾವ ದೇಶದವರ ಹಡಗು ಅನುಕೂಲವಾದ ಕಾಲದಲ್ಲಿ, ಸುಲಲಿತವಾದ ದರದಲ್ಲಿ, ಸಿಗುವುದೋ ಆ ಹಡಗಿನ ಸೇವೆಯನ್ನು ಒಪ್ಪಿಕೊಳ್ಳುತ್ತಾರೆ. ಹೀಗಿರುವುದರಿಂದ ನಮ್ಮ ಸಮಗ್ರ 'ಕ್ರೆಡಿಟು' ಸಮಗ್ರ 'ಡೆಬಿಟ'ಗೆ ಯಾವುದಾದರೂ ನಿಶ್ಚಿತ ಕಾಲಾವಧಿಯಲ್ಲಿ ಸಮಾನವಾಗಬೇಕೆಂಬ ನಿಯಮವಿಲ್ಲ. ಒಂದಾನೊಂದು ವೇಳೆ ನಾವು ಇಂಗ್ಲೆಂಡಿಗೆ ಕೊಡಬೇಕಾದ ಹಣವು ಅಲ್ಲಿಂದ ನಮಗೆ ಬರಬೇಕಾದ ಹಣಕ್ಕಿಂತ ಹೆಚ್ಚಾದರೆ ನಾವು ಈ ವ್ಯತ್ಯಾಸವನ್ನು ಹೇಗೆ ಪಾವತಿ ಮಾಡುತ್ತೇವೆ? ನಮ್ಮ ರುಪಾಯಿ ಇಂಗ್ಲೆಂಡಿನಲ್ಲಿ ನಡೆಯುವುದಿಲ್ಲ ತಾನೇ? ಅವರ ಸ್ಟರ್ಲಿಂಗನ್ನು ಅವರಿಗೆ ಕೊಡಬೇಕು. ಹೇಗೆ ಕೊಡೋಣ? ನಮ್ಮ ಭಾರತೀಯ ಬ್ಯಾಂಕುಗಳು ಅಥವಾ ರಿಸರ್ವ ಬ್ಯಾಂಕು ಇಂಗ್ಲೆಂಡಿನಲ್ಲಿ ಸ್ವಲ್ಪ ಸ್ಟರ್ಲಿಂಗು ಬ್ಯಾಲೆನ್ಸನ್ನು ಇಟ್ಟುಕೊಂಡಿದ್ದರೆ, ಆ ಬ್ಯಾಂಕುಗಳ ಮೂಲಕವಾಗಿಯೇ ಸರ್ವ ವ್ಯವಹಾರಗಳೂ ನಡೆದರೆ, ಆಗ ಇಂಗ್ಲೆಂಡಿನವರು ನಮಗೆ ಹಣ ಸಲ್ಲಿಸಿದ ಹಾಗೆ ನಮ್ಮ ಬ್ಯಾಂಕಿನ ಸ್ಟರ್ಲಿಂಗು ಬ್ಯಾಲೆನ್ಸ್ ಏರುವುದು. ನಾವು ಇಂಗ್ಲಿಷರಿಗೆ ಅವರ ಸರಕಿಗೆ ಹಣ ತೆತ್ತ ಹಾಗೆ ಸ್ಟರ್ಲಿಂಗ್ ಬ್ಯಾಲೆನ್ಸ್ ಇಳಿಯುವುದು. ನಮ್ಮ ಡೆಬಿಟ್ ಹೆಚ್ಚಾದರೆ ನಮ್ಮ ಬ್ಯಾಂಕಿನ ಸ್ಟರ್ಲಿಂಗ್ ಬ್ಯಾಲೆನ್ಸ್ ಇಳಿಯುವುದು. ಭಾರತದ ಎಲ್ಲಾ ವಿದೇಶೀಯ ಹಣವನ್ನೂ ರಿಸರ್ವ ಬ್ಯಾಂಕ್ ಸ್ಟರ್ಲಿಂಗಿನಲ್ಲೇ ಇಟ್ಟುಕೊಂಡಿರುವುದರಿಂದ ನಮ್ಮ ಸ್ಟರ್ಲಿಂಗ್ ಸೆಕ್ಯೂರಿಟಿಗಳು ಕಡಿಮೆಯಾದಾಗ 'ಬ್ಯಾಲೆನ್ಸ್ ಓಫ್

ಪೇಮೆಂಟ್ಸ್'ನಮಗೆ ಪ್ರತಿಕೂಲವಾಗಿದೆ ಎಂದು ನಮಗೆ ತಿಳಿಯುತ್ತದೆ. ಅವು ಹೆಚ್ಚಿದಾಗ ಬ್ಯಾಲೆನ್ಸ್ ನಮಗೆ ಅನುಕೂಲವಾಗಿದೆ ಎಂದು ತಿಳಿಯಬೇಕು.

ಸ್ಟರ್ಲಿಂಗು ನಿರಂತರವೂ ಕಡಿಮೆಯಾಗುತ್ತಾ ಹೋದರೆ-ಬ್ಯಾಲೆನ್ಸ್ ಪ್ರತಿಕೂಲವಾಗಿ ಬಹುಕಾಲ ಉಳಿದರೆ-ನಮ್ಮ ಸ್ಟರ್ಲಿಂಗು ಕರಗಿ ಮಾಯವಾಗುವುದು. ಯುದ್ಧ ಮುಗಿದೊಡನೆ ನಮ್ಮ ಸ್ಟರ್ಲಿಂಗು ಸಂಗ್ರಹ ಸುಮಾರು ೬೫೦ ಕೋಟಿಗಳಷ್ಟಿತ್ತು. ಇದು ನಾವು ಯುದ್ಧಕಾಲದಲ್ಲಿ ಇಂಗ್ಲೆಂಡಿಗೆ ಮಾರಿದ ಸರಕುಸೇವೆಗಳಿಂದಾಗಿ ಬಂದ ಮೊತ್ತ. ನಾವು ನಮ್ಮ ಹಲವಾರು ಯೋಜನೆಗಳಿಗೂ, ರೈಲು ಹಾದಿಗಳಿಗೂ, ಹತ್ತಿಯ ಗಿರಣಿಗಳಿಗೂ ಯಂತ್ರಗಳನ್ನು ತರಿಸಿಕೊಂಡು ಬಂದಂತೆ ಸ್ಟರ್ಲಿಂಗು ಮೊಬಲಗು ಕರಗುತ್ತಾ ಕರಗುತ್ತಾ ಬಂದು, ಈಗ ಸುಮಾರು ೬೦೦ ಕೋಟಿಯ ಮಟ್ಟದಲ್ಲಿ ನಿಂತಿದೆ. ಇದೇ ರೀತಿ ಮುಂದುವರಿದರೆ ನಾಲ್ಕಾರು ವರ್ಷಗಳಲ್ಲಿ ನಮ್ಮ ಎಲ್ಲಾ ಸಂಗ್ರಹವೂ ಮಾಯವಾಗಿ 'ಬ್ಯಾಲೆನ್ಸ್' ನಮಗೆ ಚಿರಕಾಲವೂ ಪ್ರತಿಕೂಲವಾಗಿ ನಿಲ್ಲುವ ಸನ್ನಿವೇಶವೂ ಬರಬಹುದು. ಇಂಥ ಸನ್ನಿವೇಶವು ಬಾರದ ಹಾಗೆಯೂ, ಅಥವಾ ಬಂದರೆ ಆದರ ದುಷ್ಪರಿಣಾಮವನ್ನು ತಡೆಗಟ್ಟುವ ಹಾಗೆಯೂ, ಯಾವ ಯಾವ ಕಾರ್ಯಗಳನ್ನು ಕೈಗೊಳ್ಳಬೇಕು ಎಂಬುದನ್ನು ವಿಚಾರಿಸುವ.

## ಪ್ರತಿಕೂಲ ಬ್ಯಾಲೆನ್ಸನ್ನು ಸರಿಪಡಿಸುವುದು:

(೧) ಡಿಪ್ರೀಶಿಯೇಶನ್: ವಿನಿಮಯದ ದರವನ್ನು ತನ್ನಷ್ಟಕ್ಕೆ ಕೆಳಗೆ ಇಳಿಯಲು ಬಿಡುವುದು ಅತಿ ಸುಲಭವಾದ ಉಪಾಯ. ಭಾರತೀಯ ವರ್ತಕನು ಕಳುಹಿಸುವ ಲಂಡನ್ ಡ್ರಾಫ್ಟಿಗೆ ರುಪಾಯಿಯ ಧಾರಣೆಯಲ್ಲಿ ಹೆಚ್ಚು ಧಾರಣೆಯಿಟ್ಟಲ್ಲಿ ವಿದೇಶೀಯ ಸರಕುಗಳಿಗೆ ಹಿಂದಿಗಿಂತ ಹೆಚ್ಚು ಧಾರಣೆ ಕೊಡಬೇಕಾಗುವುದರಿಂದ ಭಾರತಕ್ಕೆ ಇಂಗ್ಲೆಂಡಿನಿಂದ ಬರುವ ಆಮದಿನ ಪರಿಮಾಣ ಕಡಿಮೆಯಾಗುವುದು. ಮಾತ್ರವಲ್ಲದೆ ಸ್ಟರ್ಲಿಂಗಿನ ಬೆಲೆ ಏರಿಸಿದ್ದರಿಂದ ನಮ್ಮ ಡೆಬಿಟ್ ಪಾರ್ಶ್ವದ ಇನ್ನೂ ಹಲವು ಅಂಶಗಳು ಪರಿಮಾಣದಲ್ಲಿ ಕಮ್ಮಿಯಾಗುವುವು. ಅತ್ತ ಕಡೆ ರಫ್ತುಗಳಿಗೆ ಪ್ರೋತ್ಸಾಹ ಸಿಗುವುದು; ಏಕೆಂದರೆ ಈ ಹಿಂದೆ ನಾವು ಮಾರಿದ ಸಣಬಿನ

ಒಂದು ಮಣಕ್ಕೆ ಒಂದು ಪೌಂಡು ಸ್ಟರ್ಲಿಂಗು ಸಿಕ್ಕಿದರೆ, ಈಗ ಪೌಂಡು ಸ್ಟರ್ಲಿಂಗಿಗೆ ನಮ್ಮ ರುಪಾಯಿಯ ಬೆಲೆ ಏರಿರುವುದರಿಂದ ಭಾರತೀಯ ವರ್ತಕನಿಗೆ ಹೆಚ್ಚು ರುಪಾಯಿ ಸಿಗುವುದು. ಆಮದು ಕಡಿಮೆಯಾಗಿ ರಫ್ತು ಅಧಿಕವಾದ ಹಾಗೆ ಕೊರತೆಯು ಕಡಿಮೆಯಾಗುವುದು ಕಟ್ಟಕಡೆಗೆ ಮರಳಿ ಸಮತೋಲ ಉಂಟಾಗುವುದು. ದೇಶದ ಒಳಗಿನ ವರಮಾನ, ಕೂಲಿಗಳನ್ನು ಕಡಿಮೆಮಾಡದೆಯೆ, ನಮ್ಮ ದೇಶದ ಸಾಮಾನನ್ನು ಪರದೇಶದವರಿಗೆ ಅಗ್ಗವಾಗಿ ಮಾರುವುದೂ, ಅವರ ಸಾಮಾನು ನಮಗೆ ತುಟ್ಟಿಯಾಗುವಂತೆ ಮಾಡುವುದೂ 'ಡಿಪ್ರೀಶಿಯೇಶನ್' ನಿರ್ವಹಿಸುವ ಕಾರ್ಯ.

(೨) ಡಿಫ್ಲೇಶನ್: ಭಾರತೀಯ–ಇಂಗ್ಲಿಷ್ ನಾಣ್ಯಗಳ ಮಾರುವೆ ದರವನ್ನು ಸ್ಥಿರವಾಗಿ ಇರಿಸಬೇಕೆಂಬ ಹಠವನ್ನು ರಿಸರ್ವಬ್ಯಾಂಕ್ ತೊಟ್ಟಿದ್ದ ಪಕ್ಷಕ್ಕೆ ಸ್ಟರ್ಲಿಂಗ್ ಬ್ಯಾಲೆನ್ಸ್ ಶೂನ್ಯಬಿಂದುವನ್ನು ಮುಟ್ಟದ ಹಾಗೆ ಮಾಡಲು ಇನ್ನೊಂದು ಮಾರ್ಗವಿದೆ. ಕೂಲಿ, ಸಂಬಳ ಮುಂತಾದ ಸ್ವದೇಶದ ವರಮಾನಗಳಲ್ಲಿ ಕಡಿತವನ್ನು ತರುವುದು. ಇದರಿಂದಾಗಿ ನಮ್ಮ ದೇಶದಲ್ಲಿ ಪರದೇಶಗಳ ಸರಕುಗಳಿಗೆ ಬೇಡಿಕೆಯು ತಗ್ಗುವುದು. ಸದಸ್ಯ ಬ್ಯಾಂಕುಗಳಿಗೆ ಸಾಲಕೊಡುವ ಬಡ್ಡಿಯದರವನ್ನೂ (ಬ್ಯಾಂಕ್ ರೇಟನ್ನೂ) ಏರಿಸಿದರೆ ಅವು ತಮ್ಮ ಡಿಪಾಸಿಟಿನ ಪರಿಮಾಣವನ್ನು ಕಡಿಮೆಮಾಡಿಕೊಳ್ಳಬೇಕು ಅಂದರೆ, ವಹಿವಾಟಿನ ಭಾರವು ತನ್ನಷ್ಟಕ್ಕೆ ಕಡಿಮೆಯಾಗಿ ವರಮಾನಗಳು ತಮ್ಮಷ್ಟಕ್ಕೆ ಇಳಿಯುವುವು. ಔದ್ಯಮಿಕ ಕೂಲಿಗಾರರು ಬಹುಸಂಖ್ಯಾಕರಾಗಿರುವ ಇಂಗ್ಲೆಂಡ್, ಬೆಲ್ಜಿಯಮ್ ಮೊದಲಾದ ದೇಶಗಳಲ್ಲಿ 'ಡಿಫ್ಲೇಶನ್' ಮಾರ್ಗವನ್ನು ಕೂಲಿಕಾರರು ವಿರೋಧಿಸುವುದರಿಂದ ಕೂಲಿ ಕಡಿತವು ಕಷ್ಟವಾಗುವುದು. ಕೂಲಿಕಡಿತವು ಯಶಸ್ವಿಯಾದರೆ ನಿರುದ್ಯೋಗವುಂಟಾಗುವುದು. ಉತ್ಪಾದನೆಯು ಇಳಿಮುಖವಾಗುವುದು. ಹಣವರಮಾನವೂ, ವಾಸ್ತವಿಕ ವರಮಾನವೂ ಸಂಕುಚಿತವಾಗುವುವು. ಆದುದರಿಂದ, ಈ ರೀತಿ ಕ್ರೆಡಿಟ್ ಸಂಕೋಚದಿಂದ ಜನಿಸುವ 'ಡಿಫ್ಲೇಶನ್' ಅಸ್ತ್ರವು ಆರ್ಥಿಕ ಮುಗ್ಗಟ್ಟಿಗೆ ಕಾರಣವಾಗುವುದು.

(೩) ಸರಕಾರವು ತನ್ನ ಹಣದ ಬೆಲೆಯನ್ನು ಇಳಿಸಬಹುದು. ಅಂದರೆ ತನ್ನ ಹಣದಲ್ಲಿರುವ ಸ್ವರ್ಣದ ತೂಕವನ್ನು ಕಡಿಮೆಮಾಡಬಹುದು.

ಇದಕ್ಕೆ 'ಬೆಲೆಯ ಇಳಿತಾಯ' ಅಥವಾ 'ಡಿವೇಲ್ಯುವೇಶನ್' ಎಂದು ಹೆಸರು. ಇತರ ರಾಷ್ಟ್ರಗಳೂ ನಮ್ಮಂತೆಯೇ ತಮ್ಮ ನಾಣ್ಯಗಳ ಬೆಲೆಯನ್ನು ಇಳಿಸದಿರುವ ಪಕ್ಷಕ್ಕೆ ನಾಣ್ಯದ ಬೆಲೆ ಇಳಿಸಿದೊಡನೆ ನಮ್ಮ ಹಣದ ಬೆಲೆಯು ಇತರ ಹಣಗಳ ಬೆಲೆಗೆ ಸಾಪೇಕ್ಷವಾಗಿ ಇಳಿಯುವುದು. ಆಮದು ಕಡಿಮೆಯಾಗುವುದು; ರಫ್ತು ಅಧಿಕವಾಗುವುದು, ತನ್ನ ಸರಕನ್ನು ಇಂಗ್ಲೆಂಡಿಗೆ ಮಾರುವ ವರ್ತಕನಿಗೆ ಮೌಲ್ಯವಿಚ್ಛೇದದ ಬಳಿಕ ಆಗುವ ಸ್ಟರ್ಲಿಂಗಿಗೆ ಹೆಚ್ಚು ರೂಪಾಯಿ ದೊರೆಯುವುದರಿಂದ ಅವನು ಹೆಚ್ಚು ಹೆಚ್ಚು ಸರಕುಗಳನ್ನು ರಫ್ತುಮಾಡಲು ಉತ್ಸಾಹಿತನಾಗುವನು.

(೪) ಆಮದು ಸುಂಕ ಮತ್ತು 'ಕೋಟಾ'ಗಳು: ಒಟ್ಟಾರೆ ಮೇಲೆ ನಮ್ಮ ಪ್ರತಿಕೂಲ ಬ್ಯಾಲೆನ್ಸು ಸರಿದೂಗಬೇಕಾದರೆ ಆಮದು ಕಡಿಮೆ ಮಾಡುವುದು ಮುಖ್ಯವಾದ ದಾರಿ. ಆದುದರಿಂದ ಆಮದು ಸರಕುಗಳ ಮೇಲೆ ಸುಂಕ (ಟಾರೀಫು) ಹೇರಿದರೆ ಅವುಗಳು ದೇಶದೊಳಕ್ಕೆ ಬರುವುದು ದುಸ್ತರವಾಗುವುದು. ಇದೇ ಉದ್ದೇಶವನ್ನು 'ಕೋಟಾ' ಪದ್ಧತಿಯಿಂದಲೂ ಸಾಧಿಸಬಹುದು. ಪ್ರತಿಯೊಂದು ಸರಕನ್ನು ನಮಗೆ ರಫ್ತುಮಾಡುವ ಪ್ರತಿಯೊಂದು ದೇಶಕ್ಕೂ 'ಪರಮಾವಧಿ ಪರಿಮಾಣ ಇಂತಿಷ್ಟನ್ನು ನೀವು ಕಳುಹಿಸಬಹುದು' ಎಂದು ನಿರ್ದೇಶಿಸುವ ಕ್ರಮಕ್ಕೆ 'ಕೋಟಾ' ಪದ್ಧತಿಯೆನ್ನುವರು. ಮೋರಿಸ್ ಕಂಪೆನಿಗೆ ವರ್ಷಕ್ಕೆ ೧೨೦೦ ಕಾರನ್ನೂ, ಆಸ್ಟಿನ್ ಕಂಪೆನಿಗೆ ೨,೦೦೦ ಕಾರುಗಳ ಕೋಟಾವನ್ನೂ, ಕೊಡಬಹುದು. ಅಂತೂ ಇಂತೂ ಭಾರತಕ್ಕೆ ಎಲ್ಲ ಕಂಪೆನಿಗಳಿಂದ ಸೇರಿ ೧೫,೦೦೦ ಕ್ಕಿಂತ ಹೆಚ್ಚು ಕಾರುಗಳು ಬರಕೂಡದು ಎಂದು ಸರಕಾರವು ವಿಧಿಸಬಹುದು.

(೫) ಹಣದ ಮಾರುವೆಯ ಪ್ರತ್ಯಕ್ಷ ನಿಯಂತ್ರಣ: 'ಮಾರುವೆ' ಎಂದರೆ ಏನೆಂದು ಮೊದಲು ವಿಚಾರಿಸಬೇಕು. ಸಾಮಾನ್ಯವಾಗಿ ಒಂದು ದೇಶದ ಒಳಗೆ ವ್ಯಾಪಾರವು ನಡೆಯುವಾಗ ಹಣವನ್ನು ಕೊಟ್ಟು ಸರಕನ್ನು ಪಡೆಯುವುದು ವಾಡಿಕೆ. ಈಗ ನಾವು ಪಡೆಯಬೇಕಾಗಿರುವ ಸರಕು 'ಹಣ'ವೇ ಆದುದರಿಂದ ಎಷ್ಟು ರುಪಾಯಿ ಕೊಟ್ಟರೆ ಒಂದು ಪೌಂಡು ಅಥವಾ ಡಾಲರು ಸಿಗುವುದು ಎಂಬುದನ್ನು ನಾವು ನೋಡಬೇಕು. ಸರಕಿನ ಧಾರಣೆಯು ಹೇಗೆ ಬೇಡಿಕೆಯನ್ನು ಅವಲಂಬಿಸಿರುವುದೋ, ಹಾಗೆಯೇ

ಸ್ಟರ್ಲಿಂಗ್ ಸರಕಿನ ರುಪಾಯಿ ಧಾರಣೆಯೂ ಸ್ಟರ್ಲಿಂಗಿನ ಬೇಡಿಕೆಯನ್ನು ಹೊಂದಿಕೊಂಡಿದೆ. ರುಪಾಯಿವಾಲರು ಸ್ಟರ್ಲಿಂಗನ್ನು ಹೆಚ್ಚು ಹೆಚ್ಚಾಗಿ ಬೇಡಿದರೆ, ಅಂದರೆ ಒಂದು ಸ್ಟರ್ಲಿಂಗಿಗೆ ಹೆಚ್ಚು ರುಪಾಯಿಗಳನ್ನು ಕೊಡಲು ಉದ್ಯುಕ್ತರಾದರೆ, ಆಗ ಸ್ಟರ್ಲಿಂಗಿನ ಧಾರಣೆಯು ಹೆಚ್ಚುವುದು. (ಅಥವಾ ರುಪಾಯಿಯ ಧಾರಣೆ ತಗ್ಗುವುದು) ರುಪಾಯಿ–ಸ್ಟರ್ಲಿಂಗ್ ಮಾರುವೆ ದರವು ಅಧಿಕವಾಗುವುದು. ಭಾರತವೂ, ಬ್ರಿಟನೂ ವ್ಯಾಪಾರಕ್ಕೆ ಇಳಿದಿರುವಾಗ ನಾವು ಅವರಿಗೆ ಕೊಡಬೇಕಾದ ಹಣವು ೧೪ ಕೋಟಿ ರುಪಾಯಿಯೂ ಅವರು ನಮಗೆ ಕೊಡಬೇಕಾದ ಹಣ ೧ ಕೋಟಿ ಪೌಂಡೂ ಆದ ಪಕ್ಷಕ್ಕೆ, ರುಪಾಯಿ–ಪೌಂಡಿನ ಮಾರುವೆ ದರವು ೧೪ ರುಪಾಯಿ= £೧. ಭಾರತೀಯರ ಪೌಂಡಿನ ಬೇಡಿಕೆಯನ್ನೂ, ಆಂಗ್ಲರ ರುಪಾಯಿಯ ಬೇಡಿಕೆಯನ್ನೂ ಸಮತೋಲದಲ್ಲಿರಿಸುವ ಧಾರಣೆ ೧೪ರೂ. =£೧. ಈ ಬೇಡಿಕೆಯು ಯಾವ ಯಾವ ಕಾರಣಗಳಿಂದ ಬದಲಾಗುವುದು ಎಂಬುದನ್ನು ಪರಿಶೀಲಿಸುವ ಮೊದಲು 'ಗ್ರಾಹಕ ಶಕ್ತಿಯ ಸಮಾನತ್ವ' ಎಂಬೊಂದು ಸಿದ್ಧಾಂತವನ್ನು ವಿವೇಚಿಸುವ ಯತ್ನ ಮಾಡಬೇಕು. ಇದರ ಒಟ್ಟು ಮರ್ಮವೇನೆಂದರೆ ವಿನಿಮಯ ದರವು ಎರಡು ಹಣಗಳ ಬೇಡಿಕೆ–ಪೂರೈಕೆ ಗಳನ್ನು ಸಮೀಕರಿಸುವುದು ಮಾತ್ರವೇ ಅಲ್ಲ. ಪ್ರತಿಯೊಂದು ಹಣಕ್ಕೂ ಆಯಾ ದೇಶದಲ್ಲಿ ಒಂದೇ ತೆರನಾದ ಗ್ರಾಹಕಶಕ್ತಿ ಇರಬೇಕಾಗುತ್ತದೆ. ಒಂದು ಶ್ವಾನ ಪೆನ್ನಿಗೆ ಇಂಗ್ಲೆಂಡಿನಲ್ಲಿ ಒಂದು ಪೌಂಡು ಇದ್ದರೆ, ಭಾರತ ದಲ್ಲಿ ೧೪ ರುಪಾಯಿ ಇರಲೇ ಬೇಕು. (ಸಾಗುವಾಡಿನ ವೆಚ್ಚವು ಪೆನ್ನಿನಂಥ ಚಿಕ್ಕ ವಸ್ತುವಿಗೆ ಅತ್ಯಲ್ಪವಾದುದೆಂದು ಭಾವಿಸುವ.) ಲಂಡನ್‌ನಲ್ಲಿ ಪೆನ್ನಿಗೆ ಒಂದು ಪೌಂಡು ಧಾರಣೆ, ನಮ್ಮಲ್ಲಿ ೧೪ ರುಪಾಯಿ. ಆದುದರಿಂದ £೧= ೧೪ ರುಪಾಯಿ. ಈ ಮೂರು ಸಂಗತಿಗಳಲ್ಲಿ ಯಾವುದು ಒಂದು ಇಲ್ಲದೆ ಹೋದರೂ ಮೂರನೆಯದನ್ನು ಸುಲಭದಲ್ಲಿ ಕಂಡುಹಿಡಿಯಬಹುದು. ಮೂರನೆಯದು ನಾವು ಕಂಡುಹಿಡಿದ ಸಂಖ್ಯೆಗಿಂತ ಭಿನ್ನವಾಗಿದ್ದ ಪಕ್ಷಕ್ಕೆ ಯಾರೋ ನಡುವೆ ಲಾಭ ಹೊಡೆಯುತ್ತಿರುವರೆಂಬುದು ಖಂಡಿತ. ಲಂಡನಿನಲ್ಲಿ ಪೆನ್ನಿಗೆ ಒಂದು ಪೌಂಡು ಧಾರಣೆಯಿದ್ದು, ಇಂಡಿಯದಲ್ಲಿ ಅದೇ ಪೆನ್ನಿಗೆ ೧೦ ರುಪಾಯಿ ಇದ್ದಲ್ಲಿ ಇಂಡಿಯದಲ್ಲಿ ೧೦ ರುಪಾಯಿಗೆ ಒಂದು

ಪೆನ್ ತೆಗೆದುಕೊಂಡು, ಅದನ್ನು ಲಂಡನಿನಲ್ಲಿ ಒಂದು ಪೌಂಡಿಗೆಮಾರಿ ಆ ಪೌಂಡಿನಿಂದ ೧೪ ರುಪಾಯಿ ಪಡೆದುಕೊಂಡು ೪ ರು ಪಾ ಯಿ ಲಾಭ ಹೊಡೆಯಬಹುದು. ಆದರೆ ಈ ರೀತಿಯ ವಹಿವಾಟು ಬಹುಕಾಲ ನಡೆಯುವುದಿಲ್ಲ. ಏಕೆಂದರೆ,

(ಅ) ಶ್ವಾನ ಪೆನ್ನಿನ ಬೆಲೆಯು £ $\frac{೧೦}{೧೪}$ ಆಗಬಹುದು.

ಪೆನ್ನಿನ ಬೆಲೆ. ಇಂಗ್ಲೆಂಡಿನಲ್ಲಿ = $\frac{೧೦}{೧೪}$ ಪೌಂಡು

: ಇಂಡಿಯದಲ್ಲಿ = ೧೦ ರುಪಾಯಿ.

೧ ಪೌಂಡು = ೧೪ ರುಪಾಯಿ.

(ಆ) ಇಂಡಿಯದಲ್ಲಿ ಅದರ ಬೆಲೆ ೧೪ ರುಪಾಯಿ ಆಗಬಹುದು:

ಪೆನ್ನಿನ ಬೆಲೆ: ಇಂಗ್ಲೆಂಡಿನಲ್ಲಿ = ೧ ಪೌಂಡು.

: ಇಂಡಿಯದಲ್ಲಿ = ೧೪ ರುಪಾಯಿ.

೧ ಪೌಂಡು = ೧೪ ರುಪಾಯಿ.

(ಇ) ಅಥವಾ ರುಪಾಯಿಯ ಮಾರುವೆ ದರವು ಏರಬಹುದು.

ಪೆನ್ನಿನ ಬೆಲೆ: ಇಂಗ್ಲೆಂಡಿನಲ್ಲಿ = ೧ ಪೌಂಡು.

. ಇಂಡಿಯದಲ್ಲಿ = ೧೦ ರುಪಾಯಿ.

೧ ಪೌಂಡು = ೧೦ ರುಪಾಯಿ.

'ಗ್ರಾಹಕ ಶಕ್ತಿಯ ಸಮಾನತ್ವದ ಸಿದ್ಧಾಂತ'ವು, ಸರಕುಗಳ ಅಂತರ ರಾಷ್ಟ್ರೀಯ ಧಾರಣೆಯು ಏಕರೂಪವಾಗಿರುವುದೆಂದು ಹೇಳುವುದಕ್ಕಿಂತ ವಿಶೇಷವಾಗಿ ಬೇರೇನನ್ನೂ ಸೂಚಿಸುವುದಿಲ್ಲವೆಂದು ಇಷ್ಟರಿಂದಲೇ ತಿಳಿಯ ಬಹುದು.

ಇದೇ ನಿರೂಪಣೆಯನ್ನು ತುಸು ತಿದ್ದಿ ಕೆಸೆಲ್ಲನು, "ಒಂದು ಹಣಕ್ಕೆ ತನ್ನ ದೇಶದಲ್ಲಿ ಸರಕುಸೇವೆಗಳನ್ನು ಪಡೆಯುವ ಗ್ರಾಹಕಶಕ್ತಿಯು ಇರು ವುದರಿಂದಲೇ ನಾವು ಆ ದೇಶದ ಹಣವನ್ನು ಬೇಡುವೆವು. ನಮ್ಮ ಹಣದ ಮೂಲಕವಾಗಿ ಇನ್ನೊಂದು ಹಣವನ್ನು ಅಳೆಯುವಾಗ ನಾವು ಯಥಾರ್ಥ

ವಾಗಿ ನಮ್ಮೆರಡು ದೇಶಗಳ ಹಣಗಳ ಸಾಪೇಕ್ಷ ಶಕ್ತಿಯನ್ನು (ಗ್ರಾಹಕಶಕ್ತಿ) ಅಳೆಯುವ ಪ್ರಯತ್ನದಲ್ಲಿರುವೆವು'' ಎಂದಿರುವನು. ಸಾಪೇಕ್ಷ ಗ್ರಾಹಕ ಶಕ್ತಿಯು ಸಮಾನವಾಗುವುದನ್ನು ಪರಿಶೀಲಿಸಬೇಕಾದರೆ ಒಂದು ಪೌಂಡಿನಿಂದ ಇಂಗ್ಲಿಷ್ ಕೂಲಿಕಾರನು ಪಡೆಯುವ ಸರಕೂ ಭಾರತೀಯ ಕೂಲಿಕಾರನು ಪಡೆದುಕೊಳ್ಳುವ ಸರಕೂ ಒಂದೇ ಆಗಿರಬೇಕು. ಭಾರತೀಯ ಕೂಲಿಕಾರನೂ ಇಂಗ್ಲಿಷರವನ ಹಾಗೆ ಬೂಟು, ಹ್ಯಾಟು, ಗೇಸ್, ಹಣ್ಣು ಮೊದಲಾದುವನ್ನು ತನ್ನ ಜೀವನದಲ್ಲಿ ಬಳಸಿಕೊಳ್ಳಬೇಕು. ಆದುದರಿಂದ ಈ ತತ್ತ್ವವು ನಿರಂಕುಶವಾದ ಧಾರಣೆವಾಸಿಗೆ ಅನ್ವಯಿಸದೆ, ಬದಲಾವಣೆ ಹೊಂದುವ ಕ್ರಯಕ್ಕೆ ಮಾತ್ರ ಅನ್ವಯಿಸುವುದು.

ಭಾರತದಲ್ಲಿ ಅತಿ ಪ್ರಸರಣದ ದೆಸೆಯಿಂದ ಬೆಲೆಯು ನಾಲ್ಮಡಿಯಾದಾಗ, ಒಂದು ಪೌಂಡಿನ ಬೆಲೆಯ ಸರಕನ್ನು ಪಡೆಯಲು ನಾಲ್ಕರಷ್ಟು ಅಂದರೆ, ೫೬ ರುಪಾಯಿ ಕೊಡಬೇಕು ಎನ್ನುವುದು ಸತ್ಯವಾದ ಮಾತು. ಮಾರುವೆದರವು ೫೬ ರೂ. = ಒಂದು ಪೌಂಡು. ಇದಕ್ಕೆ ಭಾರತದಲ್ಲಿ ಧಾರಣೆಯ ಸೂಚಿಯು ೧೦೦ರಿಂದ ೪೦೦ಕ್ಕೆ ಏರಿದುದೇ ಕಾರಣ. ೧೯೨೭ರಲ್ಲಿ ಇಂಗ್ಲೆಂಡಿನ ಧಾರಣೆ ಇಂಡೆಕ್ಸ್ ೧೬೪ ಆಗಿಯೂ, ಅಮೇರಿಕದ ಇಂಡೆಕ್ಸ್ ೧೫೬ ಆಗಿಯೂ ಇದ್ದಾಗ ಗ್ರಾಹಕ ಶಕ್ತಿಯ ಸಮಾನತ್ವವು $\frac{೧೫೬}{೧೬೪}=\frac{೯೫·೧}{೧೦೦}$. ಪೌಂಡಿನ ಗ್ರಾಹಕ ಶಕ್ತಿಯ ಸಮಾನತ್ವವು ೪·೮೬೬ ಡಾಲರಿನ ೯೫ ೧%ರಷ್ಟಾಯಿತು. ನಿಜಕ್ಕೂ ಮಾರುವೆದರವು ಇಷ್ಟೇ ಆಗಿದ್ದುದರಿಂದ ಗ್ರಾಹಕ ಶಕ್ತಿಯ ಸಮಾನತ್ವವು ಈ ಸಂದರ್ಭದಲ್ಲಿ ನಿಖರವಾಗಿ ಅನ್ವಯಿಸಿತೆಂದು ದಿವಂ. ಕೀನ್ಸ್ ಹೇಳಿರುವನು.

**ಮಾರುವೆದರದಲ್ಲುಂಟಾಗುವ ಬದಲಾವಣೆ:**

(೧) ಹಣದ ಮಾರುವೆ ದರವು ಮುಖ್ಯವಾಗಿ ಅದಕ್ಕಿರುವ ಬೇಡಿಕೆ, ಪೂರೈಕೆಯ ಪರಿಸ್ಥಿತಿಯನ್ನು ಹೊಂದಿಕೊಂಡಿದೆ. ಬೇಡಿಕೆ-ಪೂರೈಕೆಗಳು ಆಮದು-ರಫ್ತುಗಳ ಗಾತ್ರವನ್ನು ಹೊಂದಿಕೊಂಡಿವೆ. ಆಮದಿಗಿಂತ ರಫ್ತು ಹೆಚ್ಚಾದ ದೇಶದ ಹಣದ ಮಾರುವೆ ದರವು ಹೆಚ್ಚು, ರಫ್ತು ಕಡಿಮೆಯಾದಲ್ಲಿ ಮಾರುವೆ ದರವು ಕಡಿಮೆ. ರಫ್ತು ಹೆಚ್ಚಾಯಿತೆಂದರೆ ಆ ಹಣಕ್ಕೆ

ಬೇಡಿಕೆಯು ಹೆಚ್ಚಾಯಿತೆಂದೂ, ಕಡಿಮೆಯಾದರೆ ಬೇಡಿಕೆ ಇಳಿಯಿತೆಂದೂ ತಿಳಿಯತಕ್ಕುದು.

(೨) ಸರಕಾರದ ಹಣಕಾಸಿನ ಧೋರಣೆಯು ಹಣದ ಮಾರುವೆ ದರದ ಮೇಲೆ ಪರಿಣಾಮಬೀರುವುದು. ಭಾರತದಲ್ಲಿ ನಾವು ಉಬ್ಬರದ ಧೋರಣೆಯನ್ನು ಅವಲಂಬಿಸಿದರೆ ನಮ್ಮ ಆಂತರಿಕ ಸರಕುಗಳ ಧಾರಣೆಯು ಹೆಚ್ಚುವುದು. ಇದರ ಫಲವಾಗಿ 'ಡಿಪ್ರೀಶಿಯೇಶನ್' ಆದ ನಮ್ಮ ಹಣಕ್ಕೆ ಬೇಡಿಕೆಯು ಒತ್ತುವುದು ಪರದೇಶದ ಹಣಕ್ಕೆ ನಮ್ಮ ದೇಶದ ಬೇಡಿಕೆಯು ಏರುವುದು.

(೩) ಹಣದ ಉಬ್ಬರ ಅಥವಾ ಹಣದ ಡಿಫ್ಲೇಶನ್ ಎರಡೂ ಇಲ್ಲದೆಯೂ ಇಂಗ್ಲೆಂಡು ಭಾರತಕ್ಕೆ ಬಂಡವಾಳವನ್ನು ರಫ್ತುಮಾಡುವ ಸಂದರ್ಭದಲ್ಲಿ ಭಾರತದ ಹಣಕ್ಕೆ ಪ್ರತಿಯಾಗಿ ಕೊಡುವ ಸ್ಟರ್ಲಿಂಗ್ ಹಣವು ಹೆಚ್ಚುವುದರಿಂದ ಭಾರತದ ರುಪಾಯಿಯ ಧಾರಣೆಯು ಏರಲು ಅವಕಾಶವುಂಟು. ಮಾರು ದರದ ಬದಲಾವಣೆಗಳಿಂದ ಲಾಭ ದೊರಕಿಸಿಕೊಳ್ಳುವ ಹಂಬಲವನ್ನಿಟ್ಟುಕೊಂಡ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಬಂಡವಾಳವು ಸಂಚರಿಸುವುದುಂಟು. ಅಮೇರಿಕದಿಂದ ನಮ್ಮ ದೇಶಕ್ಕೆ ಒಮ್ಮಿಂದೊಮ್ಮೆ ನಾವಿರಮಿಲಿಯ ಡಾಲರು ಬಂಡವಾಳವು ಓಡಿ ಬಂದರೆ ಖಂಡಿತವಾಗಿಯೂ ರುಪಾಯಿಯ ಬೆಲೆ ಏರುವುದು.

## ಎಕ್ಸ್‌ಛೇಂಜನ್ನು ಸಮಾನವಾಗಿ ಮಾಡುವ ನಿಧಿ:

ಮಾರುವೆದರವು ಈ ಬಗೆಯಾಗಿ ಕಂಡ ಬಟ್ಟೆಯಲ್ಲಿ ಬದಲಾಗುವುದನ್ನು ನಿಯಂತ್ರಿಸಲು ಇತ್ತೀಚೆಗೆ ಎಲ್ಲಾ ದೇಶಗಳೂ ಪ್ರಯತ್ನಿಸುತ್ತಿವೆ. ೧೯೩೧ರ ಆರ್ಥಿಕ ಮುಗ್ಗಟ್ಟು ಈ ವಿಷಯದಲ್ಲಿ ಬ್ರಿಟನಿಗೆ ಪಾಠಕಲಿಸಿತು. ಆ ವರ್ಷ ಬ್ರಿಟನ್ ಸ್ವರ್ಣ ಪ್ರಮಿತಿಯನ್ನು ಕಿತ್ತೊಗೆದು ಮಾರುವೆದರ ನಿಯಂತ್ರಣಕ್ಕೋಸ್ಕರ ($೧=೩·೭ ಡಾಲರು) 'ಎಕ್ಸ್‌ಛೇಂಜ್ ಸಮೀಕರಣ ನಿಧಿ'ಯನ್ನು ಸ್ಥಾಪಿಸಿತು. ಕೇಂದ್ರ ಬ್ಯಾಂಕಾದ ಬ್ಯಾಂಕ್ ಆಫ್ ಇಂಗ್ಲೆಂಡಿನ ಆರ್ಥಿಕ ಶಕ್ತಿಯು ಈ ಮಹತ್ಕಾರ್ಯಕ್ಕೆ ಸಾಲದೆಂದು ಬಗೆದು ೧೯೩೨ರಲ್ಲಿ ೧೫೦ ಮಿಲಿಯ ಪೌಂಡು ಖಜಾನೆ ಹುಂಡಿಗಳ ನಿಧಿಯಿಂದ

ಎಕ್ಸ್‌ಛೇಂಜ್ ಸಮೀಕರಣ ನಿಧಿಯನ್ನು ಸ್ಥಾಪಿಸಲಾಯಿತು. ಈ ನಿಧಿಗೆ ಆ ಮೇಲೆ ೧೯೩೩ರಲ್ಲಿ ೨೦೦ ಮಿಲಿಯ ಪೌಂಡನ್ನೂ, ೧೯೩೭ರಲ್ಲಿ ಮತ್ತೆ ೨೦೦ ಮಿಲಿಯ ಪೌಂಡನ್ನೂ ಸೇರಿಸಿ ಬಲಪಡಿಸಲಾಯಿತು. ದೇಶದೊಳಕ್ಕೆ ಅಲ್ಪಕಾಲದ ಆಶ್ರಯಕ್ಕಾಗಿ ಗುಳೇ ಬರುವ ಬಂಡವಾಳವು ಮಾರುವೆದರದ ಮೇಲೆ ಮಾಡುವ ಪರಿಣಾಮವನ್ನು ಹತ್ತಿಕ್ಕಲು ನಿಧಿಯು ಪ್ರಯತ್ನಿಸುತ್ತದೆ. ವಿದೇಶೀಯ ಬಂಡವಾಳವು ದೇಶದೊಳಗೆ ಪ್ರವಹಿಸುವಾಗ ನಿಧಿಯು ತನ್ನ ಖಜಾನೆ ಹುಂಡಿಗಳನ್ನು ಮಾರಿ ಅಗತ್ಯ ಬೀಳುವ ಹೆಚ್ಚಿನ ಸ್ಟರ್ಲಿಂಗನ್ನು ಬಂಡವಾಳಕ್ಕೆ ಇದಿರೊಡ್ಡುವುದು. ಸ್ಟರ್ಲಿಂಗ್ ಕೊಟ್ಟು ವಿದೇಶೀಯ ಹಣವನ್ನು ಪಡೆದು ಅದನ್ನು ಕೂಡಲೇ ಚಿನ್ನವಾಗಿ ಮಾರ್ಪಡಿಸಿ ಶೇಖರಿಸಿಟ್ಟುಕೊಳ್ಳುವುದು. ಒಳಗೆ ಬಂದ ಬಂಡವಾಳವು ದೇಶದ ಆರ್ಥಿಕ ಅವಶ್ಯಕತೆಯ ಪೂರೈಕೆಗಾಗಿ ಬಂದುದಲ್ಲ, ಬರೇ ಲಾಭ ದೃಷ್ಟಿಯಿಂದ ಬಂದುದು. ಅಷ್ಟೇ ಅವಸರದಲ್ಲಿ ಅದು ದೇಶದಿಂದ ಹೊರಗೆ ಓಡುವ ಒಲವನ್ನು ಸೂಚಿಸಿತೋ, ನಿಧಿಯು ಕೂಡಲೇ ತನ್ನಲ್ಲಿರುವ ಚಿನ್ನವನ್ನು ಕೊಟ್ಟು ಸ್ಟರ್ಲಿಂಗನ್ನು ಸ್ವೀಕರಿಸುವುದು. ಹೀಗೆ ಅನಾವಶ್ಯಕವಾದ ಬಂಡವಾಳದ ಓಟಗಳನ್ನು ಹತವೀರ್ಯವಾಗಿ ಮಾಡಿ ಮಾರುವೆ ದರದಲ್ಲಿ ಸಿಕ್ಕಾಬಟ್ಟೆ ಏರಿಳಿತಗಳು ಉಂಟಾಗದ ಹಾಗೆ ನೋಡಿಕೊಳ್ಳುವುದು ನಿಧಿಯ ಕೆಲಸ.

**ಪ್ರತ್ಯಕ್ಷವಾಗಿ ಮಾರುವೆ ದರವನ್ನು ನಿಯಂತ್ರಿಸುವುದು:**

(೧) ಎಲ್ಲಾ ಹಣದ ವ್ಯವಹಾರಗಳನ್ನೂ ಕೇಂದ್ರೀಕರಿಸುವುದು. ಖಾಸಗಿ ವ್ಯಕ್ತಿಯು ಹಣದ ವ್ಯವಹಾರವನ್ನು ಮಾಡಬಾರದು. ದೇಶದ ಸರಕಾರವು ನಿಯಮಿಸಿದ ಮಾರುವೆದರದಲ್ಲಿಯೇ ಎಲ್ಲ ವ್ಯವಹಾರಗಳೂ ಸಾಗಬೇಕು.

(೨) ಬ್ಲಾಕ್ಡ್ ಎಕೌಂಟ: ಪ್ರಥಮ ಮತ್ತು ದ್ವಿತೀಯ ಮಹಾಯುದ್ಧಗಳ ನಡುವಿನ ಕಾಲದಲ್ಲಿ ಜರ್ಮನಿಯವರು ಬ್ಲಾಕ್ಡ್ ಎಕೌಂಟ ಕ್ರಮದಿಂದ ತಮ್ಮ ಮಾರುವೆದರವನ್ನು ನಿಯಂತ್ರಿಸಲು ಯತ್ನಿಸಿದರು. ಆಮದುಗಳ ಬದಲಿಗೆ ಚಿನ್ನವನ್ನೋ ಆಯಾ ದೇಶದ ಹಣವನ್ನೋ ಕೊಡು

ವುದು ಬಿಟ್ಟು, ವಿದೇಶೀಯರ ಎಕೌಂಟನ್ನು ಒತ್ತಿ ಹಿಡಿದು ವಿದೇಶೀಯರು ಜರ್ಮನಿಯಿಂದ ಸರಕು ಕೊಳ್ಳುವಾಗ ಮಾತ್ರ ಅದನ್ನು ಉಪಯೋಗಿಸ ತಕ್ಕುದೆಂಬ ಸುಗ್ರೀವಾಜ್ಞೆಯನ್ನು ಜರ್ಮನ್ ಸರಕಾರ ಹೊರಡಿಸಿತು. ಈ ಬಗೆಯ ಕಡ್ಡಾಯ ಶಿಕ್ಷಣಕ್ಕೆ ಬಗ್ಗುವ ಮೂಢದೇಶಗಳು ಪ್ರಪಂಚದಲ್ಲಿ ವಿರಳವಾದುದರಿಂದ ಮಾರುವೆನಿಯಂತ್ರಣಕ್ಕೆ ಇದು ಬಹಳ ನೆರವಾಗುವು ದಿಲ್ಲ. ತಮ್ಮ ದೇಶದ ರಫ್ತಿಗೆ ತಮ್ಮ ದೇಶದ ಹಣದಲ್ಲಿಯೇ ಸಂದಾಯ ವನ್ನು ಮಾಡದಿದ್ದರೆ ಸರಕೇ ಕಳಿಸುವುದಿಲ್ಲವೆಂದು ಪಣತೊಟ್ಟರೆ 'ಬ್ಲಾಕ್ಡ್ ಎಕೌಂಟ' ವಿಧಾನವು ನಿಷ್ಪ್ರಯೋಜಕವಾಗುವುದು.

(೫) ತೀರುವೆ ಹಾಗೂ ಪಾವತಿ ಒಪ್ಪಂದ: ಮಾರುವೆ ದರವನ್ನು ನಿಯಂತ್ರಿಸುವ ದೇಶವು ಸರಕು ರಫ್ತುಮಾಡುವ ದೇಶಕ್ಕೆ ಹಣವನ್ನು ಪಾವತಿ ಮಾಡುವುದಕ್ಕೋಸ್ಕರ ಒಂದು ವಿಶೇಷ ನಿಧಿಯನ್ನು ಕೂಡಿಸಿಡು ವುದೂ, ಆವಶ್ಯಕತೆ ಉಂಟಾದಾಗ ಮಾರುವೆದರವನ್ನು ನಿಯಂತ್ರಿಸಲೆಳುವ ದೇಶವು ಈ ನಿಧಿಯಿಂದ ವಿದೇಶೀಯ ಹಣವನ್ನು ತೆಗೆದು ಪಾವತಿ ಮಾಡು ವುದೂ 'ತೀರುವೆ ಒಪ್ಪಂದ' ಎನಿಸುವುದು. ಇಲ್ಲಿ ರಫ್ತು ಮಾಡಿದವನಿಗೆ ಹಣವು ಸಿಗಲು ಸ್ವಲ್ಪ ತಡವಾಗಬಹುದು. ಈ ದೋಷವನ್ನು ತಿದ್ದಿ ಕಟ್ಟಿದ ಹೊಸ ಒಪ್ಪಂದಕ್ಕೆ 'ಪಾವತಿ ಒಪ್ಪಂದ'ವೆಂದು ಹೆಸರು. ಒಡಂಬಡಿಕೆಗೆ ಸಹಿಹಾಕುವ ದೇಶಗಳು ತಮ್ಮ ಪರಸ್ಪರ ಆಮದು ರಫ್ತುಗಳ ದಾಮಾಶಯವನ್ನು ಮೊದಲೇ ನಿರ್ಣಯಿಸಿ ಹಣದ ಪಾವತಿಯು ತಡವಾಗದಂತೆ ಯತ್ನಿಸುವುವು.

ಪ್ರಪಂಚದಲ್ಲಿ ಮಾರುವೆನಿಯಂತ್ರಣದ ಏಕಾದಶಾವತಾರಗಳು ಕಳೆದ ಮೇಲೆ ಅಂತರರಾಷ್ಟ್ರೀಯ ವ್ಯಾಪಾರವು ಬಹಳ ಸಂಕುಚಿತವಾಗಿದೆ. ಮಾರುವೆಯ ನಿರ್ಬಂಧದ ದೆಸೆಯಿಂದಾಗಿ ಎಷ್ಟೋ ರಾಷ್ಟ್ರಗಳೂ, ಫರ್ಮು ಗಳೂ ಹಣದ ವಿನಿಮಯದ ಲೇವಾದೇವಿಗೆ ಶರಣು ಹೊಡೆದು ಅದಲಾ ಬದಲಿಯನ್ನು ಅಪ್ಪಿಕೊಳ್ಳುವುವು. ಇಂಥ ತೊಡಕುಗಳನ್ನು ನಿವಾರಿಸಲು ೧೯೩೦ರಲ್ಲಿ 'ದಿ ಬ್ಯಾಂಕ್ ಒಫ್ ಇಂಟರ್‌ನ್ಯಾಷನಲ್ ಸೆಟ್ಲ್‌ಮೆಂಟ್ಸ್' ಎಂ ಬುದು ಸ್ಥಾಪಿತವಾಯಿತು. ಚಿನ್ನದ ಡಿಪಾಸಿಟುಗಳನ್ನು ಸ್ವೀಕರಿಸಿ ಇಡಿ ಪ್ರಪಂಚದ ಬ್ಯಾಂಕುಗಳೊಡನೆ ಡಿಪಾಸಿಟು, ಡಿಸ್ಕೌಂಟು ಮುಂತಾದ

ಬ್ಯಾಂಕಿಂಗ್ ವ್ಯವಹಾರಗಳನ್ನಿಟ್ಟುಕೊಂಡು, ಬ್ಯಾಂಕಿಂಗ್ ಜಗತ್ತಿನಲ್ಲಿ ಸೌಹಾರ್ದದ ವಾತಾವರಣವನ್ನು ಕಲ್ಪಿಸಿದ ಈ ಬ್ಯಾಂಕನ್ನು ಕಂಡು ನಮ್ಮ ಮುತ್ಸದ್ದಿಗಳಿಗೆಲ್ಲ 'ಪಾವತಿಯ ಪ್ರಶ್ನೆಯನ್ನು ಜಾಗತಿಕ ಪ್ರಮಾಣದಲ್ಲಿಯೂ ಬಗೆಹರಿಸಲು ಶಕ್ಯವಿದೆ' ಎಂಬುದನ್ನು ಮೊದಲಬಾರಿಗೆ ಕಲಿಯುವಂತಾಯಿತು. ಎರಡು ಯುದ್ಧಗಳ ಮಧ್ಯಕಾಲದಲ್ಲಿ ಅಮೇರಿಕದಲ್ಲೂ ವಿಲಾಯತಿಯಲ್ಲೂ ಜಾಗತಿಕ ಬ್ಯಾಂಕಿಂಗಿನ ಕುರಿತು ಹಲವು ಬಗೆಯ ವಾದಗಳೂ ವ್ಯವಸ್ಥೆಗಳೂ ಹುಟ್ಟಿಕೊಂಡುವು. ಇವು ಶ್ರೀಕೃಷ್ಣನು ಜನಿಸುವ ಮೊದಲು ಕಂಸನ ಕೈಯಿಂದ ಸಾವಿಗೀಡಾದ ಶಿಶು ಯೋಜನೆಗಳಂತಿದ್ದುವು. ಆದರೆ ಅವುಗಳ ಪೈಕಿ ೧೯೪೩ರಲ್ಲಿ ಪ್ರಚಾರಕ್ಕೆ ಬಂದ 'ಕೀನ್ಸ್' ಯೋಜನೆ ಮತ್ತು 'ವ್ಹಾಯಿಟ ಯೋಜನೆ'ಗಳನ್ನು ಸಮನ್ವಯಗೊಳಿಸಿದ ಸಂಯುಕ್ತ ಘೋಷಣೆಯೂ ೧೯೪೪ರಲ್ಲಿ ಬ್ರೆಟ್ಟನ್‌ವುಡ್ಸನಲ್ಲಿ ಸೇರಿದ ಜಾಗತಿಕ ಸಮ್ಮೇಳನವೂ ಸಂಸಾರ ಹೂಡಿ 'ಇಂಟರ್ ನ್ಯಾಷನಲ್ ಮೊನಿಟರಿ ಫಂಡ' ಮತ್ತು 'ಇಂಟರ್ ನ್ಯಾಷನಲ್ ಬ್ಯಾಂಕ್ ಫಾರ್ ರಿಕನ್‌ಸ್ಟ್ರಕ್ಶನ್ ಎಂಡ ಸೆಟ್ಲ್‌ಮೆಂಟ' ಎಂಬ ಅವಳಿ ಕೂಸುಗಳನ್ನು ಹೆತ್ತುವು. ಕೃಷ್ಣ ಬಲರಾಮರಂತೆ!

೧೯೪೯ರಲ್ಲಿ 'ಇಂಟರ್‌ನ್ಯಾಷನಲ್ ಮೊನಿಟರಿ ಫಂಡಿ'ಗೆ ೪೭ ರಾಷ್ಟ್ರಗಳು ಸದಸ್ಯರಾಗಿದ್ದುವು. ಪ್ರತಿಯೊಂದು ದೇಶವು ಚಿನ್ನದ ಮೂಲಕವಾಗಿಯೂ, ತನ್ನ ತನ್ನ ಹಣದಮೂಲಕವಾಗಿಯೂ ನಿಶ್ಚಿತವಾದ ಒಂದು ಚಂದಾ ಮೊಬಲಗನ್ನು ತೆರಬೇಕು. ಚಂದಾಹಣದ 'ಕೋಟಾ'ಗಳು ಹೊಂಡುರಾಸ್ ಪನಾಮಾದೇಶಗಳಿಗಿರುವ ೫೦,೦೦೦ ಡಾಲರಿನ ಇಲಿಗಾತ್ರದಿಂದ ಹಿಡಿದು ಇಂಗ್ಲೆಂಡ್, ಸಂಯುಕ್ತ ರಾಷ್ಟ್ರಗಳ ೧,೩೦೦,೦೦೦,೦೦೦ ಮತ್ತು ೨,೭೫೦,೦೦೦,೦೦೦ ಡಾಲರುಗಳ ಹುಲಿಗಾತ್ರದ ವರೆಗೂ ಬೆಳೆದಿವೆ. ೧೯೪೮ನೆಯ ಅಕ್ಟೋಬರ ತಿಂಗಳಲ್ಲಿ 'ಫಂಡಿ'ನ ಲೇಣೆಯು ೮,೦೩೫,೦೦೦,೦೦೦ ಡಾಲರಾಗಿದ್ದಿತ್ತು. 'ಫಂಡಿ'ನ ವಹಿವಾಟು ನಡೆಯುವ ಕ್ರಮವು ಸೂಕ್ಷ್ಮವಾಗಿ ಹೀಗಿದೆ. ಮುಖ್ಯವಾಗಿ ತನ್ನ ಹತ್ತಿರ ಜಮೆಯಾದ ನಾನಾದೇಶದ ಹಣಗಳನ್ನೂ ಮಾರುವ ಕೆಲಸವನ್ನು ಕೆಲವು ಷರತ್ತುಗಳ ಮೇಲಿನಿಂದ 'ಫಂಡು' ನಿರ್ವಹಿಸುತ್ತದೆ. ಷರತ್ತುಗಳು ಯಾವುವೆಂದರೆ — (೧) ವರ್ಷ ಒಂದಕ್ಕೆ ಒಬ್ಬ ಸದಸ್ಯನ ಕೋಟಾದ ೨೫% ರಷ್ಟು ಹಣವನ್ನು ಮಾತ್ರ ಅವನಿಗೆ

ಮಾರಲಾದೀತು. (೨) ಚಂದಾ ಕೊಟ್ಟ ಹಣವನ್ನು 'ಫಂಡು' ಹೇಳಿದಾಗ ರಾಷ್ಟ್ರಗಳು ವಾಪಸು ಪಡೆಯಬೇಕು. (೩) ॥% ಮಾರಾಟದ ಛಾರ್ಜನ್ನು ಚಿನ್ನದ ರೂಪದಲ್ಲಿಯೇ ಸಲ್ಲಿಸಬೇಕು. (೪) ಕೋಟಾಕ್ಕಿಂತ ಹೆಚ್ಚು ಹಣವು ಜಮೆಯಾದರೆ ಅಂಥ ರಾಷ್ಟ್ರವು ಫಂಡಿಗೆ ಕೊಂಚ ಇತರ ಛಾರ್ಜನ್ನು ತೆರಬೇಕು. (೫) ಫಂಡು ಕೆಲವು ವೇಳೆ ಚಿನ್ನದ ವ್ಯವಹಾರವನ್ನು ಮಾಡಬಹುದು.

ಅಂತರರಾಷ್ಟ್ರೀಯ ಆರ್ಥಿಕ (ವಿಶೇಷತಃ ಹಣಕಾಸಿನ) ಸಹಕಾರ ಸೌಹಾರ್ದಗಳನ್ನು ಬೆಳೆಯಿಸುವುದಕ್ಕೂ, ಅಂತರರಾಷ್ಟ್ರೀಯ ವ್ಯಾಪಾರ ವಹಿವಾಟು ಏರುಪೇರಿಲ್ಲದೆ ಸುಲಲಿತವಾಗಿ ಜರಗಿ ಸದಸ್ಯ ರಾಷ್ಟ್ರದ ಉದ್ಯೋಗದ ಯೋಜನೆಗಳು ಫಲಿಸುವುದಕ್ಕೂ ರಾಷ್ಟ್ರರಾಷ್ಟ್ರಗಳ ಒಳಗಿನ ವ್ಯಾಪಾರವನ್ನು ಬಹುಸ್ರೋತವಾಗಿ ಜರಗಿಸಿ ಮಾರುವೆಯ ತೊಂದರೆಗಳನ್ನು ನಿವಾರಿಸುವುದಕ್ಕೂ, ಅಗತ್ಯಬಿದ್ದಲ್ಲಿ ಫಂಡಿನ ತಾಂತ್ರಿಕ ಜ್ಞಾನವನ್ನು ಸದಸ್ಯರಿಗೆ ಎರವಲು ಕೊಟ್ಟು ಪ್ರಪಂಚದ ಆರ್ಥಿಕ ಶಕ್ತಿಯನ್ನು ಹೆಚ್ಚಿಸುವುದಕ್ಕೂ, ಬದ್ಧಕಂಕಣವಾಗಿರುವ 'ಮೊನಿಟರಿ ಫಂಡು' ಯುಕ್ತ ರಾಷ್ಟ್ರ ಸಂಘದ ಆಶ್ರಯದಲ್ಲಿ ದಿನೇದಿನೇ ಜನಪ್ರಿಯವಾಗುತ್ತಿದೆ.

ಇಂಟರ್ ನ್ಯಾಷನಲ್ ಬ್ಯಾಂಕು ಪ್ರಪಂಚದ ರಾಷ್ಟ್ರಗಳಿಗೆ ಸಾಲಕೊಡುವುದಕ್ಕಾಗಿಯೇ ನಿಯೋಜಿಸಲಾದ ಸಂಸ್ಥೆ. ಯುದ್ಧಾನಂತರದ ಯೋಜನೆಗಳಿಗೆ ಇದರಿಂದ ಸಹಾಯ ದೊರೆಯುವುದರಲ್ಲಿ ಸಂಶಯವಿಲ್ಲ. ಭಾರತಕ್ಕೆ ಇದು ಈ ವರೆಗೆ ೬·೨೫ ಕೋಟಿ ಡಾಲರುಗಳ ಸಾಲವನ್ನು ಕೊಟ್ಟಿರುವುದು.

**ಸ್ವರ್ಣಪ್ರಮಿತಿ:**

ದೇಶದ ಹಣದ ಮೂಲಕ ಚಿನ್ನದ ಬೆಲೆಯನ್ನು ನಿರ್ಧರಿಸುವುದಕ್ಕೆ ಮೂರು ಮಾರ್ಗಗಳಿವೆ.

(೧) ಸ್ವರ್ಣ ನಾಣ್ಯಗಳ ಪ್ರಮಿತಿ—ಸರಕಾರವು ನಿಶ್ಚಿತವಾದ ತೂಕದ ಚಿನ್ನದ ನಾಣ್ಯಗಳನ್ನು ಹೊರಡಿಸುವುದು. ಚಿನ್ನದ ಗಟ್ಟಿಯನ್ನು ಯಾರು ಎಷ್ಟು ತಂದು ಕೊಟ್ಟರೂ ಅವರಿಗೆ ಇಂಥ ನಾಣ್ಯಗಳನ್ನು ಮಾಡಿಕೊಡುವುದೂ, ಪ್ರತಿಯೊಬ್ಬ ವ್ಯಕ್ತಿಗೆ ನಾಣ್ಯಗಳನ್ನು ಕರಗಿಸುವುದಕ್ಕೂ,

ರಫ್ತು ಮಾಡುವುದಕ್ಕೂ ಸ್ವಾತಂತ್ರ್ಯ ಇರುವುದೂ ಸ್ವರ್ಣನಾಣ್ಯ ಪ್ರಮಿತಿಯ ಲಕ್ಷಣಗಳು. ಇದು ೧೯೧೪ರ ತನಕ ಇಂಗ್ಲೆಂಡಿನಲ್ಲಿ ಪ್ರಚಾರದಲ್ಲಿದ್ದಿತು.

(೨) ಸ್ವರ್ಣಗಟ್ಟಿಯ ಪ್ರಮಿತಿ: ಚಿನ್ನದ ನಾಣ್ಯವು ಚಲಾವಣೆಯಲ್ಲಿ ರದಿದ್ದರೂ ದೇಶದ ಹಣದಿಂದ ಚಿನ್ನದ ಬೆಲೆಯನ್ನು ನಿಷ್ಕರ್ಷಿಸಿ ಹೇಳುವುದಕ್ಕೆ ಸ್ವರ್ಣಗಟ್ಟಿಯ ಪ್ರಮಿತಿ ಎನ್ನುವರು. ಪೌಂಡು ನೋಟುಗಳನ್ನು ಕೊಂಡುಹೋಗಿ ಚಿನ್ನ ಪಡೆಯುವ ಸ್ವಾತಂತ್ರ್ಯವು ಈಗಲೂ ಇದೆ. ಆದರೆ ೪೦೦ ಔನ್ಸಿಗೆ ಕಡಮೆಯಾದ ಚಿನ್ನದ ವ್ಯವಹಾರವನ್ನು ಬ್ಯಾಂಕು ಮಾಡದಿರುವುದರಿಂದ ವಿದೇಶೀಯ ವ್ಯಾಪಾರಕ್ಕೆ ಮಾತ್ರವೇ ಚಿನ್ನವನ್ನು ಬಳಸಬಹುದು.

(೩) ಸ್ವರ್ಣ ವಿನಿಮಯ ಪ್ರಮಿತಿ: ಸ್ವರ್ಣ ಪ್ರಮಿತಿಯಲ್ಲಿರುವ ಯಾವುದಾದರೊಂದು ದೇಶದ ಹಣಕ್ಕೆ ತನ್ನ ದೇಶದ ಹಣವನ್ನು ಜೋಡಿಸಿಕೊಂಡು ಪರಸ್ಪರ ಹಣಗಳಿಗೊಂದು ವಿನಿಮಯ (ಮಾರುವೆ) ದರವನ್ನು ನಿರ್ಣಯಿಸುವುದು ಸ್ವರ್ಣವಿನಿಮಯಪ್ರಮಿತಿ ಎನಿಸುವುದು. ಭಾರತದಂತೆ ಚಿನ್ನವು ದೇಶದೊಳಗೆ ಚಲಾವಣೆಯಲ್ಲಿರದೆ ಹೋದರೂ — ನೋಟು ಕೊಟ್ಟು ಬ್ಯಾಂಕಿನಿಂದ ಚಿನ್ನ ಪಡೆಯುವಂತಿಲ್ಲವಾದರೂ — ಇಂಗ್ಲೆಂಡಿನ ಸ್ಟರ್ಲಿಂಗನ್ನು ಕೇಂದ್ರ ಬ್ಯಾಂಕಿನಲ್ಲಿ 'ಕೋಶ'ವಾಗಿ ಇರಿಸಿಕೊಂಡಲ್ಲಿ ಪರೋಕ್ಷವಾಗಿ ಭಾರತೀಯ ನಾಣ್ಯದ ಮೂಲಕ ಚಿನ್ನದ ಬೆಲೆಯನ್ನು ಅಳೆದಂತಾಗುವುದು.

## ಸ್ವರ್ಣಪ್ರಮಿತಿ ಯಶಸ್ವಿಯಾಗುವುದೆ?

ಸ್ವರ್ಣ ಪ್ರಮಿತಿಯು ಯಶಸ್ವಿಯಾಗಲು ಎರಡು ಮುಖ್ಯ ಷರತ್ತುಗಳಿವೆ: (೧) ಪ್ರತಿಯೊಂದು ದೇಶದ ಹಣದಲ್ಲಿಯೂ ಚಿನ್ನದ ಬೆಲೆ ಚಿಕ್ಕ ಪರಿಮಿತಿಯೊಳಗೇ ನಿಷ್ಕರ್ಷೆಯಾಗತಕ್ಕುದು. (೨) ಚಿನ್ನವು ಒಂದು ದೇಶದಿಂದ ಇನ್ನೊಂದಕ್ಕೆ ಚಲಿಸಲು ಸಂಪೂರ್ಣ ಸ್ವಾತಂತ್ರ್ಯ ಇರತಕ್ಕುದು.

ಮೊದಲನೆಯ ಷರತ್ತನ್ನು ಪೂರೈಸುವ ಮೂರು ಮುಖ್ಯ ವಿಧಾನಗಳನ್ನು ಕಳೆದ ಪರಿಚ್ಛೇದದಲ್ಲಿ ಗುರುತಿಸಿದೆವು. ಈ ಷರತ್ತುಗಳನ್ನು ನಡೆಯಿಸುವ ಎರಡು ದೇಶಗಳ ಪರಸ್ಪರ ಹಣಗಳ ಮಾರುವೆ ದರವು ಬಹಳ

ವ್ಯತ್ಯಾಸವಾಗಲು ಸಾಧ್ಯವಿಲ್ಲ. ಏಕೆಂದರೆ A ದೇಶದ ಮಾರುವೆ ದರವು ಏರಿದರೆ ಅದರ ಹಣವನ್ನು ಕೊಳ್ಳುವುದಕ್ಕಿಂತ ನಮ್ಮ ದೇಶದ ಹಣದಿಂದ ಚಿನ್ನವನ್ನು ಕೊಂಡುಕೊಂಡು ಅದನ್ನು A ಯಲ್ಲಿ ಮಾರುವುದು ಅಗ್ಗವಾಗುವುದರಿಂದ ನಮ್ಮ ವರ್ತಕರು ಚಿನ್ನವನ್ನೇ ರಫ್ತು ಮಾಡುವರು. ಇದರಿಂದ ಪರದೇಶದ ಹಣಕ್ಕೆ ಬೇಡಿಕೆಯು ತಗ್ಗಿ ಮಾರುವೆದರವು ಮೊದಲಿನ ಮಟ್ಟಕ್ಕೆ ಬರುವುದು. ಮಾರುವೆ ದರವು ಇಳಿದರೆ ಇದಕ್ಕೆ ವಿಪರೀತವಾದ ವರ್ತನೆ. ಆದುದರಿಂದ ಮಾರುವೆ ದರವು ಸ್ಥಿರವಾಗಿ ಉಳಿಯುವುದು.

**ಸ್ವರ್ಣಪ್ರಮಿತಿಯ ಕಾರ್ಯಭಾರ:**

ನಾವು ಇನ್ನೊಂದು ದೇಶಕ್ಕೆ ಪಾವತಿ ಶಿಲ್ಕು ಕೊಡಬೇಕಾದ ಸಂದರ್ಭವು ಬಂದಾಗ ನಮಗೆ ಆ ದೇಶದ ಹಣವು ಬೇಕಾಗುವುದು. ಇದರಿಂದ ವಿದೇಶೀಯ ಹಣದ ದರವು ಏರುವುದು, ನಮ್ಮ ಹಣದ ಧಾರಣೆ ಇಳಿಯುವುದು. ರಫ್ತಿಗೆ ಪ್ರೋತ್ಸಾಹವೂ ಆಮದಿಗೆ ನಿರುತ್ಸಾಹವೂ ಉಂಟಾಗುವುದು. ಆದರೆ ಸ್ವರ್ಣಪ್ರಮಿತಿ ಇರುವಾಗ ಮಾರುವೆ ದರಗಳು ಚಿನ್ನದ ನಿರ್ಯಾತಬಿಂದು ಮತ್ತು ಚಿನ್ನದ ಆಯಾತಬಿಂದು ಎಂಬ ಎರಡು ಅತಿ ಚಿಕ್ಕ ಪರಿಮಿತಿಗಳ ಒಳಗೆಯೆ ವ್ಯತ್ಯಯವಾಗುವುದರಿಂದ ಕೊರತೆ ಇರುವ ದೇಶದಲ್ಲಿ ಚಿನ್ನದ ಕೋಶವು ಮಾಯವಾಗುವ ತನಕ ಚಿನ್ನದಲ್ಲಿಯೇ ಪಾವತಿ ನಡೆಯುವುದು ಚಿನ್ನವು ಹೊರಗೆ ಹರಿದ ಹಾಗೆ ದೇಶದೊಳಗಿನ ಕ್ರೆಡಿಟಿನ ಗಾತ್ರವು ಕುಗ್ಗುವುದು. ಚಿನ್ನದ ಹರಿವು ಬಹುಕಾಲ ಸಾಗಿದರೆ ಕೇಂದ್ರಬ್ಯಾಂಕು ಕ್ರೆಡಿಟ ಸಂವಿಧಾನವನ್ನು ತುಂಬಾ ಸಂಕೋಚಗೊಳಿಸಬೇಕಾಗಿ ಬರುವುದು.

ಚಿನ್ನವು ಯಾವ ದೇಶಕ್ಕೆ ಹೋಗುವುದೋ ಅಲ್ಲಿ ಬ್ಯಾಂಕ ರಿಸರ್ವ ಹೆಚ್ಚುವುದು; ವ್ಯಾವಹಾರಿಕ ಬ್ಯಾಂಕುಗಳ ಡಿಪಾಸಿಟು ಬೆಳೆಯುವುದು; ಕ್ರೆಡಿಟ ಸಂವಿಧಾನವು ವಿಶಾಲವಾಗುವುದು; ಬಡ್ಡಿಯ ದರವು ಇಳಿಯುವುದು. ಆದರೆ ಚಿನ್ನವು ಹೊರಡುವ ದೇಶದಲ್ಲಿ ಬಡ್ಡಿಯ ದರವು ಏರುವುದರಿಂದ ಚಿನ್ನವನ್ನು ಸ್ವೀಕರಿಸುವ ದೇಶದಿಂದ ಅಲ್ಲಿಗೆ ಕಿರುವಾಯಿದೆಯ ಬಂಡವಾಳವು ಸಂಚಲಿಸುವುದು. ಇದು ಚಿನ್ನ ಕಳೆದುಕೊಳ್ಳುವ ದೇಶದಲ್ಲಿ

ಕ್ರೆಡಿಟ ಸಂಕೋಚದಿಂದ ಉಂಟಾದ 'ಡಿಫ್ಲೇಶನ'ನ್ನು ನಿವಾರಿಸಲು ನೆರವಾಗುವುದು.

ಮೇಲೆ ಹೇಳಿರುವ ವಿದ್ಯಮಾನವು ಅಲ್ಪಾವಧಿಯಲ್ಲಿ ಮಾತ್ರ ನಡೆದೀತು. ದೀರ್ಘಾವಧಿಯಲ್ಲಿ ಆಯಾ ದೇಶದ ಧಾರಣೆವಾಸಿಯು ಸಮತೋಲಕ್ಕೆ ಬರದಿದ್ದರೆ ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಸಮತೋಲವು ಉಂಟಾಗುವುದಿಲ್ಲ.

ಸ್ವರ್ಣಪ್ರಮಿತಿಯನ್ನು ನಂಬಿರುವ ದೇಶಗಳು ತಮ್ಮ ಆಂತರಿಕ ಆರ್ಥಿಕ ಧೋರಣೆಗೆ ಭಂಗಬಂದರೂ ಸ್ವರ್ಣಪ್ರಮಿತಿಯ ಆಟದ ನಿಯಮವನ್ನು ಪಾಲಿಸಿಯೇ ಬಿಡುವೆವು ಎಂದು ಪ್ರತಿಜ್ಞೆ ಹಾಕಿಕೊಂಡಿರಬೇಕು. ಅಲ್ಲಿನ ಧಾರಣೆ ವೆಚ್ಚಗಳು—ಮುಖ್ಯವಾಗಿ ಕೂಲಿ—ಬೇಕಾದಾಗ ಏರಿಸಲಿಕ್ಕೂ ಇಳಿಸಲಿಕ್ಕೂ ಅನುಕೂಲವಾಗಿರಬೇಕು. ಇವೆರಡು ಶರ್ತಗಳನ್ನು ಉತ್ಕಟಕಾಲದಲ್ಲಿ ಪಾಲಿಸುವುದು ತೀರ ಕಠಿನವೇ ಸರಿ. ಇಂಗ್ಲೆಂಡು ತನ್ನ ಆರ್ಥಿಕ ಧೋರಣೆಯನ್ನು ಪೂರ್ಣೋದ್ಯೋಗಕ್ಕೆ ಕಟ್ಟಿಹಾಕಿರುವ ಪಕ್ಷಕ್ಕೆ ದೇಶದಿಂದ ಚಿನ್ನವು ಹೊರಗೆ ಪ್ರವಹಿಸಲು ಆರಂಭಿಸಿದ ಕೂಡಲೆ ಕೂಲಿ ಇಳಿಸಿ ಕ್ರೆಡಿಟ್-ಸಂಕೋಚ ಮಾಡುವ 'ಡಿಫ್ಲೆಶನ್' ಧೋರಣೆಯನ್ನು ಒಪ್ಪಿಕೊಂಡೀತೆ? ಹಾಗೆ ಮಾಡದಿದ್ದರೆ ಸ್ವರ್ಣಪ್ರಮಿತಿಯ ನಿಯಮವನ್ನು ಮುರಿದಂತಾಗಲಿಲ್ಲವೆ?

## ಸ್ವರ್ಣಪ್ರಮಿತಿಯ ಅನುಕೂಲತೆಗಳು:

(೧) ಅಂತರರಾಷ್ಟ್ರೀಯ ವ್ಯಾಪಾರಕ್ಕೂ ಬಂಡವಾಳ ಸಂಚಲನೆಗೂ ಅತ್ಯಾವಶ್ಯಕವಾಗಿರುವ ಸುದೃಢವಾದ ಮಾರುವೆ ದರವನ್ನು ಒದಗಿಸುವುದು.

(೨) ಹಣದ ಉಬ್ಬರ ಹಾಗೂ ಇಳಿತದ(ಡಿಫ್ಲೇಶನ್)ಚಿಕ್ಕ ಪ್ರಮಾಣಗಳನ್ನು ಆರಂಭದಲ್ಲಿಯೇ ಪ್ರಯೋಗಿಸಿ ದೊಡ್ಡ ದೊಡ್ಡ ಇಳಿತಭರತಗಳು ಸಂಭವಿಸದ ಹಾಗೆ ನೋಡಿಕೊಳ್ಳುವುದು.

(೩) ಯಾವ ಒಂದು ಅಂತರರಾಷ್ಟ್ರೀಯ ಅಧಿಕಾರದ ದರ್ಪಕ್ಕೂ ಒಳಗಾಗದೆ ಎಲ್ಲ ದೇಶಗಳು ಸಾಲಾಗಿ ಮುನ್ನಡೆಯಬಹುದು.

(೪) ಅನಾವಶ್ಯಕ ನಿರ್ಬಂಧಗಳಿಲ್ಲದೆ ಸರಳವಾಗಿಯೂ ಸುಸೂತ್ರವಾಗಿಯೂ ಕೆಲಸ ಮಾಡಬಹುದು.

**ಸ್ವರ್ಣಪ್ರಮಿತಿಯ ಅನನುಕೂಲತೆಗಳು:**

ಇಷ್ಟೆಲ್ಲ ಗುಣಗಳ ಪಟ್ಟಿಯನ್ನು ಕೊಟ್ಟರೂ ಸ್ವರ್ಣಪ್ರಮಿತಿಯು "ಪ್ರಪಂಚದ ಕ್ರೆಡಿಟ ನಿಯಂತ್ರಣದಲ್ಲಿ ಅರಾಜಕತೆಯನ್ನು ತಂದೊಡ್ಡುವ ವಿದ್ಯಮಾನ"ವೆಂಬು ಕೆಲವರು ಕರೆಯಲು ಕಾರಣವೇನು? ಚಿನ್ನದ ಹೊರ ಪ್ರವಾಹವನ್ನು ತಡೆಯಲೆಂದು ಒಂದು ದೇಶವು ಕ್ರೆಡಿಟ ಸಂಕೋಚಗೊಳಿಸಿದೊಡನೆ ಬೇರೆ ದೇಶಗಳಲ್ಲಿಯೂ ಸರಕಿನ ಬೇಡಿಕೆ ತಗ್ಗಿ ಅಲ್ಲಿಯೂ ಕ್ರೆಡಿಟ ಸಂಕೋಚವು ಹರಡುವುದೂ, ಒಂದು ದೇಶದಲ್ಲಿ ಕ್ರೆಡಿಟು ವಿಸ್ತರಿಸಿದಾಗ ಇತರ ದೇಶಗಳಿಗೆ ಅದು ಅಲೆಯಲೆಯಾಗಿ ಹೋಗಿ ತಟ್ಟುವುದೂ ಸ್ವರ್ಣ ಪ್ರಮಿತಿಯ ನಿಯಮಕ್ಕೆ ಅಪವಾದಗಳಾಗಿ ವರ್ತಿಸುವುದು ಕಾಣುವುದಿಲ್ಲವೆ?

ಸ್ವರ್ಣಪ್ರಮಿತಿಯ ದೋಷಗಳನ್ನು ಕೆಳಗೆ ಗುರುತಿಸಲಾಗಿದೆ.

(೧) ಪ್ರಪಂಚದ ಕ್ರೆಡಿಟ ನಿಯಂತ್ರಣದಲ್ಲಿ ಸ್ವರ್ಣಪ್ರಮಿತಿಯು ಅರಾಜಕತೆಯನ್ನು ತಂದೊಡ್ಡುವುದು ಮಾತ್ರವಲ್ಲದೆ ರಾಷ್ಟ್ರೀಯ ಆರ್ಥಿಕ ಧೋರಣೆಗಳನ್ನು ಅಂತರರಾಷ್ಟ್ರೀಯ ಅಧಿಕಾರಶಾಹಿಯ ಬಲೆಯೊಳಗೆ ತಳ್ಳುವುದು

(೨) ಸ್ವರ್ಣಪ್ರಮಿತಿಯ ದೃಷ್ಟಿಯಲ್ಲಿ ಆರ್ಥಿಕ ದೃಢತೆಯೂ, ಸ್ಥಿರತೆಯೂ, ಪೂರ್ಣೋದ್ಯೋಗವೂ ಅಲ್ಪ ವಿಷಯಗಳೆಂದು ಕಂಡರೂ ರಾಷ್ಟ್ರದ ದೃಷ್ಟಿಗೆ ಇವು ಅತಿ ಮಹತ್ವದ ವಿಷಯಗಳೆಂಬುದನ್ನು ಅಲ್ಲಗಳೆಯುವಂತಿಲ್ಲ ಸ್ವರ್ಣ ಪ್ರಮಿತಿಯಲ್ಲಿ ಮಾರುವೆದರವನ್ನು ಸ್ಥಿರವಾಗಿಡುವ ಏಕೈಕ ಧೋರಣೆಗೆ ಉಳಿದ ಸರ್ವ ವಿಷಯಗಳೂ ಬಲಿಯಾಗುವುವು

(೩) ಅರ್ವಾಚೀನ ಕಾಲದಲ್ಲಿ ಹಣಕಾಸಿನ ಯಂತ್ರವು ಸಂಪೂರ್ಣವಾಗಿ ನಮ್ಮ ಅಡಿಯಾಳಾಗಿ ವರ್ತಿಸಬೇಕು. ಆದುದರಿಂದ ಸ್ವರ್ಣಪ್ರಮಿತಿಯು ಈಗಿನ ಕಾಲಕ್ಕೆ ಹೇಳಿಸಿದುದಲ್ಲ.

(೪) ಈಗಿನ ಸಮಾಜಗಳಲ್ಲಿ ಸ್ವರ್ಣಪ್ರಮಿತಿಯನ್ನು ಬದುಕಿಸಲು

'ಡಿಫ್ಲೇಶನ್' ಮಾರ್ಗವನ್ನನುಸರಿಸಿದರೆ ದೇಶದೊಳಗೆ ನಿರುದ್ಯೋಗವೂ, ಅಂತರರಾಷ್ಟ್ರೀಯ ಮುಗ್ಗಟ್ಟೂ ಉಂಟಾಗುವುವು.

(೫) ಜೋನ್ ರಾಬಿನ್ಸನ್ ಹೇಳುವಂತೆ ಸ್ವರ್ಣಪ್ರಮಿತಿಯು 'ಡಿಫ್ಲೇಶನ್' ಕಡೆಗೆ ಅತಿ ಹೆಚ್ಚು ಒಲಿಯುವಂತೆ ಕಾಣುವುದು.

೧೯೧೪ಕ್ಕೆ ಹಿಂದೆ ಇಡೀ ಒಂದು ಶತಮಾನವೂ ಧಾರಣೆಯು ಏರುತ್ತಲೇ ಇದ್ದ ಕಾಲದಲ್ಲಿ ಸ್ವರ್ಣಪ್ರಮಿತಿಯು ಯಶಸ್ವಿಯಾಗಿ ಕೆಲಸ ಮಾಡಿರಬಹುದಾದರೂ, ಔದ್ಯೋಗೀಕರಣದ ವರಿಷ್ಠ ಸಾಮೀಪ್ಯವನ್ನು ಮುಟ್ಟುತ್ತಿರುವ ಅರ್ವಾಚೀನ ಪ್ರಪಂಚದಲ್ಲಿ, ಮುಖ್ಯವಾಗಿ ಪಾಶ್ಚಾತ್ಯ ಜಗತ್ತಿನಲ್ಲಿ, ಹಣಕಾಸಿನ ವ್ಯವಸ್ಥೆಗೂ ಮಿಗಿಲಾಗಿ ಸಾರ್ವಜನಿಕ ವ್ಯಯ, ತೆರಿಗೆ, ವಿದೇಶೀಯ ವ್ಯಾಪಾರ, ಕೃಷಿ, ಪರಿಶ್ರಮ ಮೊದಲಾದುವುಗಳ ವಿಷಯದಲ್ಲಿ ರಾಷ್ಟ್ರವು ವಹಿಸುವ ಧೋರಣೆಗೆ ಪ್ರಾಧಾನ್ಯವು ಬಂದಿರುವುದರಿಂದ ಸ್ವರ್ಣಪ್ರಮಿತಿಯು ಇನ್ನೊಮ್ಮೆ ಗದ್ದುಗೆ ಏರುವ ಲಕ್ಷಣಗಳು ಕಾಣಿಸುವುದಿಲ್ಲ. ಧಾರಣೆಯ ಸ್ಥೈರ್ಯಕ್ಕಿಂತಲೂ ಸಮಗ್ರ ಆರ್ಥಿಕರಂಗದ ಸರ್ವತೋಮುಖವಾದ ಸ್ಥೈರ್ಯವು ನವಯುಗದ ಧ್ಯೇಯವಾಗಿರುವಾಗ ಸ್ವರ್ಣಪ್ರಮಿತಿಯು ಮೂಲೆಪಾಲಾಗುವುದು ಸ್ವಾಭಾವಿಕ.

**ಟಾರಿಫ್ ಮುಂಗಾವಲು ಮತ್ತು ಸ್ವತಂತ್ರವ್ಯಾಪಾರ:**

ರಾಷ್ಟ್ರರಾಷ್ಟ್ರಗಳ ಒಳಗಿನ ವ್ಯಾಪಾರವು ಅನಿರ್ಬಂಧಿತವಾಗಿ ಸಾಗುವುದು ಒಟ್ಟು ಪ್ರಪಂಚದ ದೃಷ್ಟಿಯಿಂದ ಹಿತಕರವಾದುದೆಂದು ಅರ್ಥಶಾಸ್ತ್ರಿಗಳು ಎಷ್ಟು ನಲ ಸಾರಿ ಹೇಳಿದರೂ ರಾಷ್ಟ್ರೀಯ ಸರಕಾರಗಳು ಅವರ ಮಾತನ್ನು ಲಕ್ಷಿಸುವುದಿಲ್ಲ. ಹದಿನೆಂಟು, ಹತ್ತೊಂಭತ್ತನೆಯ ಶತಮಾನದಲ್ಲಿ ಪ್ರಪಂಚದಲ್ಲಿ ಎಲ್ಲೆಡೆಯೂ ಸ್ವತಂತ್ರ ವ್ಯಾಪಾರವು ನಡೆಯಬೇಕು (= ತನ್ನ ಕಾರ್ಖಾನೆಗಳಲ್ಲಿ ತಯಾರಾಗುವ ಸರಕುಗಳಿಗೆ ಜಾಗತಿಕ ಮಾರ್ಕೆಟು ಸುಲಭದಲ್ಲಿ ದೊರೆಯಬೇಕು) ಎಂದು ಗರ್ಜಿಸುತ್ತಿದ್ದ ಆಂಗ್ಲ ಸಿಂಹವು ಕೂಡ ೨೦ನೆಯ ಶತಮಾನದಲ್ಲಿ ಪ್ರಪಂಚದ ಔದ್ಯೋಗಿಕ ಪ್ರತಿಸ್ಪರ್ಧಿಗಳಿಂದ—ಜಪಾನು, ಜರ್ಮನಿ, ಅಮೇರಿಕಗಳಿಂದ—ತನ್ನ ಸರಕುಗಳನ್ನು ರಕ್ಷಿಸಲು ಭದ್ರವಾದ ಸುಂಕದ ಪೌಳಿಯನ್ನು ನಿರ್ಮಿಸಿರುತ್ತದೆ.

ಕೆನಡಾ ಜರ್ಮನಿ ಮುಂತಾದ ದೇಶಗಳಲ್ಲಿ ಉದ್ಯಮಗಳು ವಿಕಾಸವಾಗಲು 'ಟಾರೀಫ' ಮುಂಗಾವಲು ಬಹಳ ನೆರವಾಯಿತೆಂಬುದು ನಿಜವಾದರೂ ಮುಂಗಾವಲಿನ ಸಾರಾಸಾರ ವಿಮರ್ಶೆಯನ್ನು ಮಾಡುವುದು ಅಗತ್ಯ ವಾಗಿದೆ. ಮುಂಗಾವಲಿನ ಪುರಸ್ಕರ್ತರು ತಮ್ಮ ಧೋರಣೆಯನ್ನು ಪುಷ್ಟೀ ಕರಿಸಲು ಕೊಡುವ ಕೆಲವು ಕಾರಣಗಳನ್ನೂ, ಅವುಗಳ ಪರಿಹಾರಗಳನ್ನೂ ಈ ಕೆಳಗೆ ಒಟ್ಟೊಟ್ಟಾಗಿ ಇಡಲಾಗಿದೆ:

(೧) ದೇಶದ ಕೃಷಿ, ಹಡಗು, ಸೇನೆಗಳಿಗೆ ಸಂಬಂಧಿಸಿದ ಆವಶ್ಯಕ ಉದ್ಯಮಗಳಿಗೆ ಪರಕೀಯರನ್ನವಲಂಬಿಸಿದರೆ ಸಮರಕಾಲದಲ್ಲಿ ಅಪಾ ಯವು ಬರಬಹುದಾದ್ದರಿಂದ ಮುಂಗಾವಲಿಟ್ಟಾದರೂ ಅವನ್ನು ನಾವು ಬೆಳೆಯಿಸಿಕೊಳ್ಳಬೇಕು.

—ಯಾವ ಉದ್ಯಮವು ಇಂಥ 'ಆವಶ್ಯಕ' ದರ್ಜೆಗೆ ಸೇರ ಬೇಕೆಂಬುದನ್ನು ನಿರ್ಧರಿಸುವುದು ಕಷ್ಟ. ಮುಂ ಗಾವಲಿಟ್ಟರೆ 'ಆವಶ್ಯಕ' ಸರಕುಗಳು ಸ್ವದೇಶದ ಅನುಭೋಗಿಗಳಿಗೆ ತುಟ್ಟಿಯಾಗುವುವು.

(೨) 'ಶಿಶು' (ಹೊಸ) ಉದ್ಯಮಗಳಿಗೆ ಮುಂಗಾವಲಿಡದಿದ್ದರೆ ಅವು ಅಂತರರಾಷ್ಟ್ರೀಯ ಸ್ಪೈರ್ಧೆಯ ನಡುವೆ ಬದುಕಿಯಾವೆ?

—ಈ 'ಶಿಶು'ವಿಗೆ ಮೀಸೆ ಬಂದರೂ ಅದು ತನ್ನ ಶೈಶವವನ್ನು ಬಿಡಲು—ಮುಂಗಾವಲಿನ ಪರೆಯನ್ನು ಕಳಚಲು — ಅಪೇಕ್ಷಿಸುವುದಿಲ್ಲ

(೩) ಮುಂಗಾವಲುಳ್ಳ ಉದ್ಯಮದ ಮಾರ್ಕೆಟು ವಿಸ್ತಾರವಾಗುವುದ ರಿಂದ ಅದರ ಉತ್ಪಾದನೆಯ ಗಾತ್ರವು ಬೆಳೆದು, ವೆಚ್ಚವು ಕಡಿಮೆಯಾಗಿ, ತಯಾರಾದ ಸರಕಿನ ಧಾರಣೆ ಇಳಿಯುವುದು.

—ಮುಂಗಾವಲು ಉದ್ಯಮದ ಸಮಗ್ರ ಗಾತ್ರವನ್ನು ಹೆಚ್ಚಿಸಬಹುದೆಂಬುದನ್ನು ಒಪ್ಪಿಕೊಂಡರೂ, ಉದ್ಯ ಮದ ಪ್ರಮಾಣವನ್ನು ಅದು ಹೆಚ್ಚಿಸಲಾರದು. ಮುಂಗಾವಲಿನಿಂದ ಧೈರ್ಯವು ಹೆಚ್ಚಿ, ಅನೇಕ

ಚಿಕ್ಕ ಚಿಕ್ಕ ಅಸಮರ್ಥ ಫರ್ಮುಗಳು ತೆರೆಯಲ್ಪಡು
ವುದರಿಂದ ಉದ್ಯಮದ ವೆಚ್ಚವು ಮೇಲೇರುವುದೇ
ವಿನಾ ಕೆಳಗಿಳಿಯುವುದಿಲ್ಲ. ಸರಕು ಅಗ್ಗವಾಗು
ವುದೂ ಇಲ್ಲ.

(೪) ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಉತ್ಪಾದನೆಯ ವೆಚ್ಚಗಳನ್ನು ಸಮಾನ ಹಂತಕ್ಕೆ ತಂದು ನಿಲ್ಲಿಸಲು ಟಾರೀಫು ನೆರವಾಗುವುದು.

—ವೆಚ್ಚಗಳು ಸಮಾನವಾದರೆ ಅಂತರರಾಷ್ಟ್ರೀಯ
ಪ್ರಾವೀಣ್ಯದ ಎಲ್ಲ ಲಾಭಗಳು ಮಾಯವಾಗಿ ಅಂ
ತರರಾಷ್ಟ್ರೀಯ ವ್ಯಾಪಾರವು ನಿಂತುಹೋಗ
ಬಹುದು. ನಾನಾ ದೇಶಗಳಲ್ಲಿ ನಾನಾ ವೆಚ್ಚಗಳಿರು
ವಾಗ ನಮ್ಮ ದೇಶದ ವೆಚ್ಚವನ್ನು ಯಾವ ದೇಶದ
ವೆಚ್ಚದೊಡನೆ ಸಮಾನವಾಗಿರಿಸೋಣ?

(೫) ಮೊನೊಪಲಿಗಾರರು ತಮ್ಮ ಸರಕುಗಳನ್ನು ನಮ್ಮ ತಲೆಯ ಮೇಲೆ 'ಹೇರು'ವುದನ್ನು ತಡೆಯಲು ಮುಂಗಾವಲು ಬೇಕು.

—ಈ ವಾದದಲ್ಲಿ ಏನೋ ಸ್ವಲ್ಪ ತಿರುಳಿದೆ. ನಮ್ಮ
ದೇಶದ ಸರಕಿನ ಪೈಪೋಟಿಯನ್ನು ಅಂತರರಾ
ಷ್ಟ್ರೀಯ ಮಾರ್ಕೆಟಿನಲ್ಲಿ ತೊಡೆದುಬಿಡಲೆಂದೂ,
ನಮ್ಮ ಫರ್ಮುಗಳನ್ನು ದಿವಾಳಿ ತೆಗೆಯಿಸ
ಬೇಕೆಂದೂ, ತಮ್ಮ ಸರಕಾರಗಳಿಂದ ಸಹಾಯ
ಧನವನ್ನು ಪಡೆದು ಯಾವುವಾದರೂ ದೇಶಗಳು
ನಮ್ಮ ಮಾರ್ಕೆಟಿಗೆ ಧಾಳಿ ಇಟ್ಟಾವು. ಆದರೆ
ಇಂಥ ಧಾಳಿಯು ಸದಾ ಸರ್ವದಾ ನಡೆಯುವುದು
ಶಕ್ಯವಿಲ್ಲ.

(೬) ವ್ಯಾಪಾರ ಶಿಲ್ಕು ನಮಗೆ ಹಿತಕರವಾಗುವ ರೀತಿಯಲ್ಲಿ ಬೆಳೆಯುವುದು. ಟಾರೀಫಿನಿಂದ ವಿದೇಶೀಯ ಸರಕುಗಳು ದೇಶದೊಳಗೆ ಕಾಲಿಡಲು ಅಂಜುವುವು. ರಫ್ತಿನ ಪರಿಮಾಣ ಹೆಚ್ಚುವುದು.

—ಈ ವಾದದ ಪ್ರಕಾರ ಇತ್ತೀಚೆಗೆ ಔದ್ಯಮಿಕ ರಾಷ್ಟ್ರಗಳ ವ್ಯಾಪಾರಶಿಲ್ಕು ಅವುಗಳಿಗೆ ಕಡಮೆ ಕಡಮೆ ಅನುಕೂಲವಾಗಿ ವರ್ತಿಸುತ್ತಿರುವುದಕ್ಕೆ ಅವುಗಳ 'ದೃಶ್ಯ' ಆಮದಿನ ಹೆಚ್ಚಳವು ಕಾರಣ. ನಿಷ್ಣಾತರು ಆ ದೇಶಗಳ 'ಅದೃಶ್ಯ' ರಫ್ತು (ಹಡಗಿನ ಸೇವೆ, ವಿಮಾ ಸೇವೆ) ಪರಿಮಾಣದಲ್ಲಿ ಕುಗ್ಗಿದುದರಿಂದ ವ್ಯಾಪಾರದ ಶಿಲ್ಕು ಬೀಳುತ್ತಿದೆ ಎನ್ನುತ್ತಾರೆ

(೭) ಸುಂಕ ತೆರುವವನು ಪರದೇಶದವನಲ್ಲವೆ? ಕೊಡಲಿ ಎಂಬುದೂ ಒಂದು ಕುತರ್ಕ.

—ಕೆಲವೊಂದು ವಿಶಿಷ್ಟ ಅಪವಾದಗಳನ್ನು ಬಿಟ್ಟರೆ ಸುಂಕದ ಮೊಬಲಗೆಲ್ಲ ಸ್ವದೇಶದ ಅನುಭೋಗಿಯ ತಲೆಯ ಮೇಲೆಯೆ ಬಂದೆರಗುವುದು. ಸುಂಕ ತೆತ್ತ ಮೇಲೂ ವಿದೇಶೀಯ ಸರಕು ನಮ್ಮಲ್ಲಿ ಮಾರಿ ಹೋಗುವ ಪಕ್ಷಕ್ಕೆ ಸುಂಕದಿಂದ ಪ್ರಯೋಜನವಿಲ್ಲವೆಂದಾಯಿತು. ವಿದೇಶೀಯ ವರ್ತಕನು ಸುಂಕವನ್ನು ತನ್ನ ಸರಕಿನ ಧಾರಣೆಗೇ ಬೆರಸಿಬಿಟ್ಟರಂತೂ ಅನುಭೋಗಿಯ ಪಾಡು ಮತ್ತಷ್ಟು ಕಠಿನವಾಗುವುದು.

ಅಂತೂ ಪ್ರಗತಿಶೀಲ ಸಮಾಜದಲ್ಲಿ ಟಾರೀಫಿಗೆ ಸರ್ವಥಾ ಎಡೆ ಎಲ್ಲ. ಆದರೆ ಪ್ರಗತಿಯಲ್ಲಿ ಹಿಂದುಳಿದ ದೇಶಗಳಲ್ಲಿ ಔದ್ಯೋಗೀಕರಣವು ತೀರ ಶೈಶವಾವಸ್ಥೆಯಲ್ಲಿರುವಾಗ ಟಾರೀಫು ಗೋಡೆ ಇಲ್ಲದೆ ಅಲ್ಲಿನ ಉದ್ಯಮಗಳು ಬದುಕಬಲ್ಲವೆ? ಎಂಬುದು ಗಂಭೀರವಾದ ಸಮಸ್ಯೆಯಾಗಿದೆ. ಉದಾ: ಭಾರತದಲ್ಲಿ ಮೋಟಾರು ಉದ್ಯಮವು ಬೆಳೆಯಬೇಕಾದರೆ ಇನ್ನು ಹತ್ತು ಹದಿನೈದು ವರ್ಷ ಪರದೇಶದ ಮೋಟರುಗಳ ಮೇಲೆ ವಿಪುಲವಾದ ಸುಂಕ ಹೇರದಿದ್ದರೆ ಫೋರ್ಡ್–ಆಸ್ಟಿನ್ ಪೈಪೋಟಿಯ ಬಿರುಗಾಳಿಯನ್ನು ನಮ್ಮ ಶಿಶು ಉದ್ಯಮವು ತಡೆದುಕೊಳ್ಳಲಾರದು.

ಅರ್ಥಶಾಸ್ತ್ರದ ತತ್ತ್ವದ ಪ್ರಕಾರವಾಗಿ ಅಂತರರಾಷ್ಟ್ರೀಯ ವ್ಯಾಪಾರವನ್ನು ನಡೆಯಿಸುವುದಾದರೆ 'ಪ್ರಾವೀಣ್ಯ'ದ ಸದುಪಯೋಗ ಮಾಡಿಕೊಳ್ಳುವುದಕ್ಕೂ, ಅತಿಸಮರ್ಥವಾದ ಫರ್ಮುಗಳೇ ಮುಂದೆ ಬರುವುದಕ್ಕೂ, ಅನುಭೋಗಿಗೆ ಕಡಮೆ ಧಾರಣೆಯಲ್ಲಿ ಸರಕು ಪೂರೈಸುವುದಕ್ಕೂ, ಟಾರೀಫು, ಕೋಟಾ ಮೊದಲಾದ ನಿರ್ಬಂಧಗಳಿಲ್ಲದ ಸ್ವತಂತ್ರ ವ್ಯಾಪಾರವು ಶ್ರೇಷ್ಠವೆಂದು ಹೇಳಲು ಯಾವ ಅಡ್ಡಿಯೂ ಇಲ್ಲ. ವ್ಯಾಪಾರ ವಹಿವಾಟು ಅಂತರರಾಷ್ಟ್ರೀಯವಾದರೂ ರಾಜನೀತಿಯು ಇನ್ನೂ ರಾಷ್ಟ್ರೀಯ ಪರಿಮಿತಿಯೊಳಗೆಯೇ ಸುಳಿಯುತ್ತಿರುವುದರಿಂದ ಟಾರೀಫನ್ನು ಹೊರದಬ್ಬುವುದು ಅಸಾಧ್ಯವಾದ ಮಾತು. ಎರಡು ಮಹಾಯುದ್ಧಗಳ ನಡುವಣ ಕಾಲದ ಅನುಭವದಿಂದ ಅಸಂಖ್ಯಾತವಾದ ಟಾರೀಫು ಪೊದೆಗಳನ್ನು ಕಿತ್ತೊಗೆಯದೆ ರಾಷ್ಟ್ರೀಯ ವ್ಯಾಪಾರಕ್ಕೂ ದೀರ್ಘಾವಧಿ ಲಾಭವು ಸಮನಿಸದು ಎಂಬ ತಿಳಿವಳಿಕೆ ರಾಷ್ಟ್ರೀಯ ಮುತ್ಸದ್ದಿಗಳ ತಲೆ ಹೊಕ್ಕುದರಿಂದಲೋ ಏನೋ, ಯುಕ್ತರಾಷ್ಟ್ರ ಸಂಘದ ಆಶ್ರಯದಲ್ಲಿ 'ಇಂಟರ್ ನ್ಯಾಷನಲ್ ಟ್ರೇಡ ಆರ್ಗನೈಸೇಶನ್' ಎಂಬ ಸಂಸ್ಥೆಯು ಈಚೆಗೆ ಸ್ಥಾಪಿತವಾಗಿ ಟಾರೀಫನ್ನು ಇಳಿಸುವ ಹಾಗೂ ಅಳಿಸುವ ಯತ್ನದಲ್ಲಿರುವುದು ಮಂಗಳಕರವಾದ ಒಂದು ಯತ್ನವೆನ್ನಬಹುದು.

## ಹದಿನಾರನೆಯ ಅಧ್ಯಾಯ

# ರಾ ಜ ಸ್ವ

### ವ್ಯಯಪ್ರಧಾನವಾದ ರಾಜಸ್ವ:

ಖಾಸಗಿ ವ್ಯಕ್ತಿಯು ತನ್ನ ಸ್ವಂತ ಉಪಭೋಗಕ್ಕಾಗಿಯೂ, ಉತ್ಪಾದನೆಗಾಗಿಯೂ ವೆಚ್ಚಮಾಡುವಂತೆ ಪ್ರಪಂಚದಲ್ಲಿರುವ ರಾಷ್ಟ್ರಗಳು ದೇಶವನ್ನು ಶತ್ರುಗಳಿಂದ ರಕ್ಷಿಸುವುದಕ್ಕೂ, ದೇಶದೊಳಗೆ ಶಾಂತಿಸುಭಿಕ್ಷೆಗಳನ್ನು ಸ್ಥಾಪಿಸುವುದಕ್ಕೂ, ಪ್ರಜೆಗಳ ಶಾರೀರಿಕ, ಮಾನಸಿಕ, ಆರ್ಥಿಕ ಮತ್ತು ನೈತಿಕ ಉನ್ನತಿಗೂ, ಸರ್ವಜನೋಪಯೋಗಿ ಸಂಸ್ಥೆಗಳನ್ನು ಏರ್ಪಡಿಸುವುದಕ್ಕೂ ವೆಚ್ಚಮಾಡುವುದು ಸ್ವಾಭಾವಿಕ. ಈ ಬಗೆಯ ಸರಕಾರಿ ವೆಚ್ಚಗಳನ್ನೂ, ಇವುಗಳಿಗೆ ಬೇಕಾಗಿ ಜನರಿಂದ ಹಲವು ಬಗೆಯಾಗಿ ತೆರಿಗೆ ವಸೂಲುಮಾಡುವ ಸರಕಾರಿ ಆಯಮಾರ್ಗವನ್ನೂ ಒಟ್ಟಾಗಿ 'ರಾಜಸ್ವ'ವೆಂದು ಕರೆಯಬಹುದು. ಹಿಂದಿನ ಕಾಲದಲ್ಲಿ ಆರ್ಥಿಕ ಮಂಡಲದಲ್ಲಿ ಹಸ್ತಕ್ಷೇಪ ಮಾಡಬೇಕೆಂದಿದ್ದ ಸರಕಾರಗಳು ಹಿಂದುಮುಂದು ನೋಡುವ ಪರಿಸ್ಥಿತಿ ಇದ್ದಿತು. ಆದರೆ ಸಮಾನತ್ವದ ಸಿದ್ಧಾಂತವು ಜಗದ್ವಂದ್ಯವಾಗಿರುವ ಈ ಕಾಲದಲ್ಲಿ ಸರಕಾರದ ಕಾರ್ಯಕ್ಷೇತ್ರವು ಬಹಳ ವಿಸ್ತಾರವಾಗಿದೆ. ರಾಜಸ್ವದ ವ್ಯಾಪ್ತಿಯು ದೇಶದ ಆರ್ಥಿಕ ಪ್ರಗತಿಯನ್ನು ಸೂಚಿಸುತ್ತದೆ.

ಖಾಸಗಿ ವ್ಯಕ್ತಿಯು ಹಾಸಿಗೆ ಇದ್ದಷ್ಟೇ ಕಾಲು ಚಾಚಬೇಕು, ತನ್ನ ವರಮಾನಕ್ಕನುಗುಣವಾಗಿ ವೆಚ್ಚಮಾಡಬೇಕು ಎಂಬುದು ವಸ್ತುಸ್ಥಿತಿಯಷ್ಟೆ. ತಿಂಗಳೊಂದರ ೧೦೦ ರುಪಾಯಿ ವರಮಾನ ಬರುವ ವ್ಯಕ್ತಿ ೧೨೦ ರುಪಾಯಿ ವೆಚ್ಚಮಾಡಿದರೆ ಕೂಡಲೆ ೨೦ ರುಪಾಯಿಯ ಸಾಲದ ಶೂಲೆ ಅವನನ್ನು ಬಾಧಿಸಿಯೇ ಬಾಧಿಸುವುದು. ಆದುದರಿಂದ ಅವನು ತನ್ನ ವರಮಾನಕ್ಕಿಂತ ಹೆಚ್ಚು ವೆಚ್ಚ ಮಾಡಲಾರ. ಸರಕಾರವಾದರೆ ಹೀಗಲ್ಲ. ಅದು ಮೊದಲು ತನ್ನ ವರ್ಷದ ವೆಚ್ಚವೆಷ್ಟೆಂಬುದನ್ನು ಅಂದಾಜುಮಾಡುವುದು. ಆ ಮೇಲೆ ಈ ವೆಚ್ಚಕ್ಕೆ ಬೇಕಾಗುವಷ್ಟು ಆಯವನ್ನು ಕರತೆರಿಗೆಗಳ ಮೂಲಕವಾಗಿ ಸಂಗ್ರಹಿಸುವುದು. ಭಾರತದ ಪಂಚವಾರ್ಷಿಕ ಯೋಜನೆಗೆ

ತಗಲುವ ಅಧಿಕ ವೆಚ್ಚವನ್ನು ಪ್ರಜೆಗಳ ಮೇಲೆ ತೆರಿಗೆ ಹಾಕಿ ವಸೂಲು ಮಾಡಬೇಕೆಂದು ನಮ್ಮ ಸರಕಾರವು ಈಗಾಗಲೇ ನಿರ್ಧರಿಸಿರುತ್ತದೆ. ಇನ್ನು ಮುಂದೆ ಪ್ರತಿವರ್ಷದ ಅನುಮಾನಪತ್ರ(ಬಜೆಟು)ದಲ್ಲಿಯೂ ಹೊಸ ಕರಗಳನ್ನು ಜೋಡಿಸಲಾಗುತ್ತದೆ. ಏನಂಚ, ಸರಕಾರವು ಹಾಸಿಗೆಗಿಂತಲೂ ಉದ್ದವಾಗಿ ಕಾಲು ಚಾಚಬಹುದು. ಹಾಗೆ ಚಾಚಿದ ಕಾಲು ನೆಲಕ್ಕೆ ತಗಲದಂತೆ ಜನರ ಹಣದಿಂದ ಹಾಸಿಗೆಯನ್ನೇ ಸಾಕಷ್ಟು ಉದ್ದಮಾಡುವ ಅಧಿಕಾರವು ಸರಕಾರದ ಕೈಯಲ್ಲಿದೆ. ಸರಕಾರದ ವ್ಯಯವು ಸಾರ್ವಜನಿಕ ಸುಖಕ್ಕೆ ಹೇತುವಾಗಿದೆಯೆ ಎಂಬ ಪ್ರಶ್ನೆ ಮುಖ್ಯವಲ್ಲದೆ ಪ್ರಜೆಗಳಿಂದ ಕರ ಎತ್ತುವುದೊಂದು ದೊಡ್ಡ ವಿಷಯವಲ್ಲ. ರಾಜಸ್ವವು ಯಾವಾಗಲೂ ವ್ಯಯ ಪ್ರಧಾನವಾದುದರಿಂದ ತಕ್ಕುದಾದ ಆಯುವನ್ನು ಗಳಿಸುವ ನ್ಯಾಯಸಮ್ಮತವಾದ ಹಕ್ಕು ಸರಕಾರಕ್ಕೆ ಇದ್ದೇ ಇದೆ.

**ಸರಕಾರಿ ಆಯುದ ಮುಖ್ಯ ಭೇದಗಳು:**

ಸರಕಾರದ ಆಯದಲ್ಲಿ (೧) ತೆರಿಗೆ (೨) ಶುಲ್ಕ ಮತ್ತು (೩) ವ್ಯಾವಸಾಯಿಕ ಆಯುವೆಂದು ಮೂರು ಮುಖ್ಯ ಭೇದಗಳಿವೆ ಇವಲ್ಲದೆ ಅರಣ್ಯ, ಗನಿ ಮುಂತಾದ ನೈಸರ್ಗಿಕ ಸಂಪತ್ತಿನಿಂದಲೂ, ಸಾಮಂತರು ಸಲ್ಲಿಸುವ ಕಪ್ಪಕಾಣಿಕೆಯಿಂದಲೂ, ವಾರಸುದಾರರಿಲ್ಲದೆ ಮೃತರಾದವರ ಸ್ಥಿರಚರ ಸೊತ್ತುಗಳಿಂದಲೂ, ಯುದ್ಧದಲ್ಲಿ ಸೋತ ನಮ್ಮ ಶತ್ರುಗಳು ಕೊಡುವ ದಂಡ ಮತ್ತು ಪರಿಹಾರಧನದಿಂದಲೂ, ಯುದ್ಧಕ್ಕೋಸ್ಕರ ಎತ್ತುವ ಚಂದಾಮೊಬಲಗಿನಿಂದಲೂ, ದೈನಂದಿನ ವ್ಯವಹಾರದಲ್ಲಿ ಸಿಗುವ ಜುಲ್ಮಾನೆಯ ಹಣದಿಂದಲೂ ಸರಕಾರದ ಬೊಕ್ಕಸವು ಹಿರಿದಾಗುವುದು. ರಾಜಸ್ವದಲ್ಲಿ ಬಲಾತ್ಕಾರದ ಅಂಶವಿದೆ. ವಿರೋಧಿಸುವವರನ್ನು ಶಾಸನ ರೀತ್ಯಾ ದಂಡಿಸಬಹುದು—ಎಂದ ಮಾತ್ರಕ್ಕೆ ಅಲ್ಪಮತೀಯರನ್ನು ಯಾವಾಗಲೂ ಹತ್ತಿಕ್ಕಬೇಕೆಂಬ ದುಷ್ಟಬುದ್ಧಿಯು ಆಡಳಿತೆದಾರರಲ್ಲಿ ಇರಬಾರದು. ಪ್ರಜಾಸಮುದಾಯದಲ್ಲಿ ಎಲ್ಲ ವರ್ಗಗಳಿಗೂ ನ್ಯಾಯವು ದೊರೆಯಬೇಕೆಂಬ ಸೂತ್ರದ ಮೇಲೆಯೇ ರಾಜಸ್ವವು ನಡೆಯತಕ್ಕುದು. ಅಲ್ಲದೆ ರಾಜಸ್ವದ ನಿರ್ವಾಹಕರು ಸಾರ್ವಜನಿಕ ಹಣದ ಅಪವ್ಯಯದ ಕುರಿತು ವಿಶೇಷ ಜಾಗ್ರತೆ

ಯನ್ನು ವಹಿಸಬೇಕು. ಖಾಸಗಿ ವ್ಯಕ್ತಿಯ ದುರ್ವ್ಯಯದ ಪರಿಣಾಮವು ಹೆಚ್ಚೆಂದರೆ ಅವನ' ಪರಿವಾರ ಅಥವಾ ಅವನ ಉದ್ಯಮದ ಮೇಲೆ ಮಾತ್ರ ಕಠಿನತರಳನ್ನು ಹಾಯಿಸುವುದು. ಸಾರ್ವಜನಿಕ ಹಣದ ದುರುಪಯೋಗ ವಾದರೆ ಅದರಿಂದ ಇಡಿ ಜನಾಂಗಕ್ಕೇ ಕೇಡು ಸಂಭವಿಸುವುದು. ಈ ವಿಷಯವನ್ನು ಭಾರತೀಯ ರಾಜ್ಯಾಧಿಕಾರಿಗಳು ಮುಖ್ಯವಾಗಿ ಗಮನಿಸ ಬೇಕು. ಏಕೆಂದರೆ ನಮ್ಮಲ್ಲಿ ಅಪವ್ಯಯ, ಅಜಾಗರೂಕತೆಗಳನ್ನು ಮನ್ನಿ ಸಲು ಬೇಕಾದಷ್ಟು ಧಾರಾಳ ನಿಧಿಸಂಗ್ರಹವು ಇರುವುದಿಲ್ಲ.

**ತೆರಿಗೆಯ ಸೂತ್ರಗಳು:**

(೧) ತೆರಿಗೆಯಲ್ಲಿ ಸಮಾನತೆ ಇರಬೇಕು ಅದನ್ನು ಕೊಡುವ ಸಾಮ ರ್ಥ್ಯವು ಆಯಾ ವರ್ಗದ ವ್ಯಕ್ತಿಗಳಲ್ಲಿ ಇರಲೇಬೇಕು. ಸಾಧಾರಣವಾಗಿ ಪ್ರಜೆಗಳು ತಾವು ಗಳಿಸುವ ಹಣಕ್ಕೆ ಅನುಪಾತಿಕವಾದ ಒಂದು ಮೊತ್ತವನ್ನು ತೆರಿಗೆಯ ರೂಪದಲ್ಲಿ ಕೊಡಬೇಕೆಂದು ಅರ್ಥಶಾಸ್ತ್ರದ ತಾತನಾದ ಆ್ಯಡಂ ಸ್ಮಿಥ್ ಸಾರಿರುವನು. ನೂರು ರುಪಾಯಿ ವರಮಾನವುಳ್ಳವನಿಂದಲೂ ಇನ್ನೂರು ರುಪಾಯಿ ಸಿಗುವವನಿಂದಲೂ ಒಂದೇ ಮೊಗಬಲಗನ್ನು ವಸೂಲು ಮಾಡುವುದು ಶುದ್ಧ ಅನ್ಯಾಯವೇ ಸರಿ. ಅವನ ಮೇಲೆ ರೂ. ೨-೮-೦ ಹೇರುವಾಗ ಇವನ ಮೇಲೆ ರೂ. ೧-೪-೦ ಮಾತ್ರ ಹೇರಿದರೆ ಒಂದು ರೀತಿಯಲ್ಲಿ ನ್ಯಾಯವಾದೀತೇನೋ. ಅಂತೂ ಪ್ರಥಮ ಸೂತ್ರದ ಪ್ರಕಾರ ಪ್ರಗತಿಶೀಲವಾದ ತೆರಿಗೆಗಳು ಸಾಧುವಲ್ಲವೆಂದೂ, ವರಮಾನದ ತೆರಿಗೆಯಲ್ಲಿ ಸರ್ವಸಾಮಾನ್ಯವಾಗಿರುವ ಮೆಟ್ಟಲುಗಳು—ವಿಧ ವಿಧವಾದ ವರಮಾನಗಳಿಗೆ ಭಿನ್ನ ಭಿನ್ನ ಅನುಪಾತದ ತೆರಿಗೆಗಳು—ಇರಬಾರ ದೆಂದೂ ಭಾಸವಾಗುವುದು. ಆದರೆ ಶ್ರೀಮಂತರು ತಮ್ಮ ವರಮಾನಕ್ಕೆ ಸಲುವ ಅನುಪಾತಕ್ಕಿಂತಲೂ ತುಸು ಹೆಚ್ಚಾಗಿ ತೆರಿಗೆ ಕೊಡುವುದು ಶ್ರೇಯ ಸ್ಕರವೆಂದುಹೇಳಿ ಸ್ಮಿಥ್ ಮಹಾಶಯನೇ ಪ್ರಗತಿಶೀಲ ತೆರಿಗೆಗಳನ್ನು ಆಶೀ ರ್ವದಿಸಿರುತ್ತಾನೆ.

(೨) ತೆರಿಗೆಯಲ್ಲಿ ಸಾಕಷ್ಟು ನಿಶ್ಚಿತತೆ ಇರಬೇಕು. ಎಷ್ಟು ತೆರಿಗೆ ಕೊಡಬೇಕು, ಯಾವಾಗ ಕೊಡಬೇಕು, ಯಾವ ರೂಪದಲ್ಲಿ ಸರಕಾರದ

ಯಾವ ವಿಭಾಗಕ್ಕೆ ಕೊಡಬೇಕು ಎಂಬ ವಿಷಯಗಳು ಪ್ರಜೆಗಳಿಗೆ ಸ್ಪಷ್ಟ ವಾಗಿ ತಿಳಿದಿರಬೇಕು. ಎಲ್ಲಿಯೂ ಅನಿಶ್ಚಯಕ್ಕೆ ಎಡೆಕೊಡಬಾರದು. ಈಗಿನ ಕಾಲದಲ್ಲಿ ತೆರಿಗೆಗಳು ಅನೇಕಾನೇಕ ಇರುವುದರಿಂದ ತಾವು ಸಲ್ಲಿಸ ಬೇಕಾದ ಪ್ರತಿಯೊಂದು ತೆರಿಗೆಯ ಕುರಿತೂ ಜನರ ಮನಸ್ಸಿನಲ್ಲಿ ನಿಶ್ಚಿತ ವಾದ ತಿಳಿವಳಿಕೆ ಇರಬೇಕಾದುದು ಅತ್ಯಂತ ಆವಶ್ಯಕವಾಗಿದೆ.

(೩) ತೆರಿಗೆಯನ್ನು ಕೊಡುವುದು ಸುಲಭವಾಗಿರಬೇಕು. ತೆರಿಗೆ ಹೊರಿ ಸುವ ಕ್ರಮವೂ, ಅದನ್ನು ವಸೂಲು ಮಾಡುವ ಸಮಯವೂ ಪ್ರಜೆಗಳ ಅನುಕೂಲತೆಯನ್ನು ಗಮನಿಸಿಕೊಂಡೇ ನಿರ್ಣಯಿಸಲ್ಪಡಬೇಕು. ಕರ್ನಾ ಟಕದ ಕರಾವಳಿ ಜಿಲ್ಲೆಗಳಲ್ಲಿ ರೈತನ ಮೇಲೆ ಮಳೆಗಾಲದಲ್ಲಿ ತೀರ್ವೆ ಹೇರು ವುದು ಯುಕ್ತವಲ್ಲ. ಪೈರು ಬೆಳೆದು ಮಾರಿಹೋಗುವ ಕಾಲದಲ್ಲಿ ರೈತನು ಸುಲಭದಲ್ಲಿ ತೀರ್ವೆ ಕೊಡಬಲ್ಲನು. ತೆರಿಗೆಯ ಒಟ್ಟು ಮೊತ್ತವನ್ನು ಒಮ್ಮೆಲೇ ವಸೂಲು ಮಾಡುವ ಅಗತ್ಯವೂ ಇಲ್ಲ. ಕಂತು ಪ್ರಕಾರ ತೆರಿಗೆ ಕಟ್ಟುವುದು ತೆರಿಗೆದಾರನಿಗೆ ತುಂಬ ಅನುಕೂಲ.

(೪) ಆದಷ್ಟು ಮಿತವ್ಯಯದಿಂದ ತೆರಿಗೆಯನ್ನು ವಸೂಲು ಮಾಡಬೇಕು. ಸಂಗ್ರಹವಾದ ತೆರಿಗೆಯ ಬಹುಭಾಗವು ಅದರ ವಸೂಲಿಗೇ ವ್ಯಯವಾಗುವ ಪಕ್ಷಕ್ಕೆ ಅಂಥ ತೆರಿಗೆಯನ್ನು ಬಿಟ್ಟುಬಿಡಬೇಕು. ಇಂಗ್ಲೆಂಡು ಮಿತವ್ಯಯಕ್ಕೆ ಆದರ್ಶವಾದ ದೇಶ. ಅಲ್ಲಿ £೧೦೦೦ ವರಮಾನದ ತೆರಿಗೆಯನ್ನು ವಸೂಲುಮಾಡಲು ಕೇವಲ £೧॥ ವೆಚ್ಚ ಹಿಡಿಯುತ್ತದಂತೆ. ನಮ್ಮ ದರಿದ್ರ ದೇಶದಲ್ಲಿ ತೆರಿಗೆದಾರರು ಬಲು ಪ್ರಯಾಸದಿಂದ ತೆರಿಗೆ ಕೊಡುವರಾದುದ ರಿಂದ ನಮ್ಮ ಸರಕಾರವು ಮಿತವ್ಯಯದ ಅಂಶವನ್ನು ಎಂದೆಂದೂ ಮರೆಯ ಕೂಡದು.

**ಶುಲ್ಕ ಅಥವಾ ಫೀಸು:**

ನ್ಯಾಯಾಲಯದಲ್ಲಿ ನ್ಯಾಯತೀರ್ಮಾನಕ್ಕೆ ಹೋಗುವಾಗಲೂ, ಸರ ಕಾರಿ ಶಿಕ್ಷಣಾಲಯಗಳಲ್ಲಿ ವಿದ್ಯಾರ್ಜನೆ ಮಾಡುತ್ತಿರುವಾಗಲೂ, ಕಚೇರಿ ಯಲ್ಲಿ ದಸ್ತಾವೇಜುಗಳನ್ನು ರಿಜಿಸ್ಟ್ರಿಮಾಡಿಸುವಾಗಲೂ, ಪ್ರಜೆಯು ತೆರುವ ಹಣಕ್ಕೆ ಶುಲ್ಕ ಅಥವಾ ಫೀಸು ಎನ್ನುತ್ತಾರೆ. ತೆರಿಗೆಗೂ ಶುಲ್ಕಕ್ಕೂ ಸ್ಪಷ್ಟ

ವಾದ ಭೇದವಿದೆ. ನಮ್ಮ ಮೇಲೆ ಬೀಳುವ ತೆರಿಗೆಯಿಂದ ನಮಗೆ ಪ್ರತ್ಯಕ್ಷ ಲಾಭವಿದ್ದರೂ ಇರದೆ ಹೋದರೂ ನಾವು ತೆರಿಗೆಯನ್ನು ತೆರಲೇಬೇಕು. ಶುಲ್ಕವಾದರೆ ಹೀಗಲ್ಲ. ನಮಗೆ ಬೇಕಾದಾಗ ಮಾತ್ರ ಕೊಡಬಹುದು.

**ವ್ಯಾವಸಾಯಿಕ ಆದಾಯ:**

ರೈಲ್ವೇ, ಅಂಚೆ ಇಲಾಖೆ, ನೀರಾವರಿ, ವಿದ್ಯುಚ್ಛಕ್ತಿ, ವಿವಿಧೋದ್ದೇಶದ ಯೋಜನೆಗಳು ಮುಂತಾದುವು ಸರಕಾರಕ್ಕೆ ಒದಗಿಸುವ ಸಂಪಾದನೆಗೆ ವ್ಯಾವಸಾಯಿಕ ಆದಾಯವೆಂದು ಹೆಸರು. ಸರಕಾರಕ್ಕೆ ಈ ಇಲಾಖೆಗಳಿಂದ ಅತಿಶಯವಾದ ಲಾಭವು ದೊರೆಯುವಂತಿದ್ದರೆ ಅದು ಸ್ವಹಿತಕ್ಕಾಗಿ ಮೊನೊಪಲಿ ಪರಿಸ್ಥಿತಿಯನ್ನುಪಯೋಗಿಸುತ್ತ ಪ್ರಜೆಗಳಿಂದ ನ್ಯಾಯೋಚಿತವಲ್ಲದ ಹಣವನ್ನು ಕಸಿದುಕೊಳ್ಳುತ್ತಿದೆ ಎಂದು ತಿಳಿಯಬೇಕು. ಭಾರತದ ರೈಲ್ವೇ ಇಲಾಖೆಯು ನಮಗೆ ಈ ವಿಷಯದಲ್ಲಿ ಒಂದು ಮಾದರಿಯಾಗಿದೆ. ರೈಲ್ವೇಗೆ ಬರುವ ಹೆಚ್ಚಿನ ಆದಾಯಕ್ಕೆ ಮೂರನೆಯ ವರ್ಗದ ಪ್ರವಾಸಿಗಳು ಕಾರಣರಾದರೂ ಅವರ ಪ್ರವಾಸ ಸೌಕರ್ಯದ ಕಡೆಗೆ ಸರಕಾರವು ವಿಶೇಷ ಗಮನವಿತ್ತಂತೆ ತೋರುವುದಿಲ್ಲ. ಬಾಯಿಹೇಳಿಕೆಗಳು ಬೇಕಾದಷ್ಟಿದ್ದರೂ ಪರಿಣಾಮವು ಇದುವರೆಗೆ ತೋರಿಬಂದಿಲ್ಲ. ಅಲ್ಲದೆ ರೈಲ್ವೇ ಆದಾಯವನ್ನು ಸಾಮಾನ್ಯ ಆದಾಯದ ತಖ್ತೆಗೆ ಸೇರಿಸುವ ಕ್ರಮವೂ ಅಷ್ಟೊಂದು ಸಾಧುವಲ್ಲ.

ಸರಕಾರದ ಸಂಪಾದನೆಯ ಬಾಬುಗಳನ್ನು ಒಟ್ಟಾಗಿ ಈ ಕೆಳಗೆ ಕಾಣಿಸಲಾಗಿದೆ.

| | |
|---|---|
| ೧. ವರಮಾನದ ತೆರಿಗೆ<br>೨. ತೀರ್ವೆ | ಪ್ರತ್ಯಕ್ಷ ತೆರಿಗೆ |
| ೩. ಆಮದು ರಫ್ತಿನ ಸುಂಕ<br>೪. ಅಬ್ಕಾರಿ ಸುಂಕ<br>೫. ಅಫೀಮು<br>೬. ಮನೋರಂಜನ ಕರ<br>೭. ವ್ಯಾಪಾರ ತೆರಿಗೆ | ಪರೋಕ್ಷ ತೆರಿಗೆ |

| | |
|---|---|
| ೮. ಸ್ಟಾಂಪು, ರಸೆ, ಹುಂಡಿ | ಶುಲ್ಕ |
| ೯. ರಿಜಿಸ್ಟ್ರಿ | |
| ೧೦. ಪೋಲೀಸು | |
| ೧೧ ನ್ಯಾಯ | |
| ೧೨. ಶಿಕ್ಷಣ | |
| ೧೩. ಆರೋಗ್ಯ ಮತ್ತು ಚಿಕಿತ್ಸೆ | |
| ೧೪. ನಿರ್ಮಾಣಕಾರ್ಯ | |
| ೧೫. ಟಂಕಸಾಲೆ | ವ್ಯಾವಸಾಯಿಕ ಆದಾಯ |
| ೧೬ ರೈಲ್ವೇ | |
| ೧೮. ಕಾಡು | |
| ೧೯. ನೀರಾವರಿ ಮತ್ತು ವಿದ್ಯುಚ್ಛಕ್ತಿಯ ಯೋಜನೆಗಳು | |
| ೨೦. ರಾಷ್ಟ್ರೀಕರಣವಾದ ಉದ್ಯಮಗಳು | |

೨೧. ನಗರಸಭೆ, ಜಿಲ್ಲಾ ಬೋರ್ಡು ರೈತರು ಮೊದಲಾದವರಿಗೆ ತೆತ್ತ ಸಾಲದ ಬಡ್ಡಿ.

೨೨. ಸೈನ್ಯದ ಇಲಾಖೆಯಿಂದ ಬರುವ ಆದಾಯ.

೨೩. ವಿವಿಧ–ಸ್ಟೇಶನರಿ, ಸರಕಾರಿ ವರದಿಗಳ ಮಾರಾಟ ಇತ್ಯಾದಿ.

**ಕರಭಾರದ ವಿತರಣೆ:**

ಸಾಮಾನ್ಯ ಸರಕುಗಳಂತೆ ಕರತೆರಿಗೆಗಳೂ ಧಾರಣೆಯ ತತ್ತ್ವಕ್ಕೆ ಒಳಗಾಗುತ್ತಿದ್ದರೆ ಪ್ರಜೆಯು ಪಡೆದುಕೊಳ್ಳುವ ಲಾಭಕ್ಕನುಗುಣವಾಗಿ ಅವನ ಮೇಲೆ ತೆರಿಗೆಯನ್ನು ವಿಧಿಸಬಹುದಾಗಿತ್ತು. ರಾಜಸ್ವದ ವಿಮರ್ಶೆ ಮಾಡುವಾಗ ರಾಷ್ಟ್ರವು ಒದಗಿಸುವ ಪ್ರಜಾಜೀವನದ ಸೌಕರ್ಯಗಳ ಅನುಕೂಲ್ಯವನ್ನು ಪ್ರತಿಯೊಬ್ಬನಿಗೂ ಇಂತಿಷ್ಟು ಎಂದು ಹಂಚಿ ಹಾಕುವುದು ಸಾಧ್ಯವಿಲ್ಲ. ಸರಕಾರವು ದೊರಕಿಸುವ ಸೇವೆಗಳೆಲ್ಲ ಅವಿಭಾಜ್ಯವಾಗಿರುವುದರಿಂದ ಅವುಗಳು ವ್ಯಕ್ತಿಗೆ ಮಾಡುವ ಒಟ್ಟು ಉಪಕಾರವನ್ನು ಅಳೆಯಲು ಬರುವುದಿಲ್ಲ. ಸರಕಾರವು ಮೊನೊಪಲಿ ಸನ್ನಿವೇಶದಲ್ಲಿ ಕೆಲಸ ಮಾಡುವುದರಿಂದ

ಸ್ವಲಾಭ ಪ್ರೇರಣೆಯಿಂದಲ್ಲವಾದರೂ ಇತರ ಕಾರಣಗಳಿಗೋಸ್ಕರವಾಗಿ ತನ್ನ ಸೇವೆಯನ್ನು ಬಡವರಿಗೂ ಶ್ರೀಮಂತರಿಗೂ ಬೇರೆ ಬೇರೆ ದರದಲ್ಲಿ ಮಾರಬಹುದು. ಒಂದು ರಾಜ್ಯದಲ್ಲಿ ವರಮಾನದ ತೆರಿಗೆಯೊಂದೇ ಇರುವುದೆಂದೂ, ಇದರ ಆದಾಯವನ್ನೆಲ್ಲ ಪೋಲೀಸು ಖಾತೆಗೇ ವೆಚ್ಚ ಮಾಡಲಾಗುವುದೆಂದೂ ಊಹಿಸೋಣ. ಆಗ ಏನೂ ಕೊಡದ ಬೈರಾಗಿಗಳು ಪೋಲೀಸು ಸಂರಕ್ಷಣೆಯ ಅರ್ಹತೆಯನ್ನು ಕಳೆದುಕೊಳ್ಳುವುದಿಲ್ಲ. ಸರಕಾರವು ಪೋಲೀಸು ಸೇವೆಯನ್ನು ಶ್ರೀಮಂತರಿಗೆ ಹೆಚ್ಚು ಬೆಲೆಗೂ, ಬಡಬೈರಾಗಿಗಳಿಗೆ ಶೂನ್ಯ ಬೆಲೆಗೂ ಮಾರಲಿಲ್ಲವೆ? ಪ್ರತಿ ರಾಜ್ಯದಲ್ಲಿಯೂ ಶ್ರೀಮಂತರ ತೆರಿಗೆಯ ದಾಮಾಶಯವೇ ಬೇರೆ; ಮಧ್ಯಮ ವರ್ಗದವರಿಗೆ ಬೇರೆ—ಅಂದರೆ ಕಡಮೆ—ಇರುವುದು ನಿಯಮ. ರಾಜ್ಯದ ಪೋಲೀಸು ಸಂರಕ್ಷಣೆ, ಆರೋಗ್ಯ ಸೌಕರ್ಯಗಳು ಮುಂತಾದುವು ಸಕಲರಿಗೂ ಸಮಾನವಾಗಿ ಲಭಿಸಿದರೂ ಪ್ರಜೆಗಳು ತೆರುವ ಧಾರಣೆಯಲ್ಲಿ, ತೆರಿಗೆಯ ದಾಮಾಶಯದಲ್ಲಿ, ಪಂಕ್ತಿಪರಿಭೇದವಿರುತ್ತದೆ.

ಅಂತೂ ಸರಕಾರದ ಸೇವೆಗಳಿಗೆ ಅನೇಕ ಧಾರಣೆಗಳಿರುವಂಥ ಸನ್ನಿವೇಶದಲ್ಲಿ ತೆರಿಗೆದಾರನ ಸಾಮರ್ಥ್ಯವನ್ನನುಲಕ್ಷಿಸಿಯೇ ತೆರಿಗೆಯನ್ನು ಹೊರಿಸಬೇಕೆಂಬುದು ನಿರ್ವಿವಾದ. ಆಧುನಿಕ ಸಮಾಜಗಳಲ್ಲಿ ವರಮಾನವು ಹಣದ ರೂಪದಲ್ಲಿ ಸಿಗುವುದರಿಂದ ತೆರಿಗೆಕೊಡುವ ಸಾಮರ್ಥ್ಯವನ್ನು ಸುಲಭದಲ್ಲಿ ಅಳೆಯಬಹುದಾದರೂ ಹಣಕ್ಕೆ ನಿಲುಕದ ಕೆಲವು ಸಂಗತಿಗಳನ್ನು ಸರಕಾರವು ಗಮನಿಸಬೇಕು. ಕಾರಖಾನೆಯ ಮಾಲಿಕನ ವರಮಾನದಲ್ಲಿ ಇಳಿಮಾನ, ಕೆಲಸಗಾರರ ತರಬೇತಿ ಮೊದಲಾದ ಆವಶ್ಯಕ ಖರ್ಚುಗಳನ್ನು ಕಳೆಯದಿರುವುದು ಅನುಚಿತ. ಅಪ್ಪ ಕೂಡಿಟ್ಟ ಆಸ್ತಿಯಿಂದ ಒಂದು ಸಾವಿರ ರುಪಾಯಿ ಸಂಪಾದನೆ ಉಳ್ಳವನಿಗೂ, ಅಷ್ಟೇ ವೇತನಬರುವ ವಿಶ್ವವಿದ್ಯಾಲಯದ ಪ್ರಾಧ್ಯಾಪಕನಿಗೂ ತೆರಿಗೆ ಕೊಡುವ ಸಾಮರ್ಥ್ಯವು ಸಮಾನವೆಂದು ಕಂಡರೂ, ಅವರಿಬ್ಬರೂ ಐವತ್ತು ರುಪಾಯಿ ತೆರಿಗೆ ಕೊಡುವಂತಾದರೆ ಸೋಮಾರಿತನಕ್ಕೆ ರಿಯಾಯಿತಿ ಮಾಡಿದಂತಾಗಲಿಲ್ಲವೆ? ವರಮಾನವು ಒಬ್ಬ ವ್ಯಕ್ತಿಗೆ ದೊರೆತರೂ ಅವನನ್ನು ಹೊಂದಿಕೊಂಡಿರುವ ಜನರೆಷ್ಟಿರುವರು ಎಂಬ ಕೌಟುಂಬಿಕ ಪರಿಸ್ಥಿತಿಯನ್ನೂ ಪರಿಶೀಲಿಸಬೇಕು. ಅವಿವಾ

ಹಿತನಿಗೂ, ನಾಲ್ಕು ಮಕ್ಕಳ ತಂದೆಗೂ ವರಮಾನವು ಸಮಾನವೆಂದು ಒಂದೇ ದಾಮಾಶಯದಲ್ಲಿ ತೆರಿಗೆ ವಿಧಿಸಿದರೆ ಗೃಹಸ್ಥನ ಮೇಲೆ ಅನ್ಯಾಯ ವಾಗುವುದು.

ನೂರು ರುಪಾಯಿ ವರಮಾನವುಳ್ಳ A ಎಂಬ ವ್ಯಕ್ತಿಯು ಸರಕಾರಕ್ಕೆ ೫ ರುಪಾಯಿ ತೆರಿಗೆ ಕೊಡುವಾಗ ತನ್ನ ವರಮಾನದ ೨೦%ನ್ನು ಕಳೆದು ಕೊಳ್ಳುತ್ತಾನೆ. ಅವನ ಈ ಐದು ರುಪಾಯಿಗಳಿಗೆ ೧೦೦೦ ರುಪಾಯಿ ವರಮಾನವುಳ್ಳ B ಯು ೫ ರುಪಾಯಿಗಳಿಗಿಂತ ಹೆಚ್ಚು ಮಹತ್ತ್ವವಿದೆ ಎಂಬು ದನ್ನು ಇಳಿಮುಖವಾದ ಪರಿಸರೋಪಯುಕ್ತತೆಯ ಸೂತ್ರವು ಸಾರುತ್ತ ದಲ್ಲವೆ? A ಯು ೫ ರುಪಾಯಿ ಕೊಡುವಾಗ ಮಾಡುವ ತ್ಯಾಗವು B ಯು ೨೦೦ ರುಪಾಯಿ ಕೊಡುವಾಗ ಮಾಡುವ ತ್ಯಾಗಕ್ಕಿಂತ ಹೆಚ್ಚಿನದು. ಆದುದರಿಂದ ಇಬ್ಬರ ತ್ಯಾಗವೂ ಸಮಾನವಾಗುವ ಹಾಗೆ ಅಥವಾ ಸಮಾಜದ ಒಟ್ಟು ತ್ಯಾಗವು ಕನಿಷ್ಠಾವಧಿಯ ಬಿಂದುವಿನಲ್ಲಿರುವ ಹಾಗೆ ಆಗಬೇಕಾದರೆ ತೆರಿಗೆಯ ಕ್ರಮವು ಪ್ರಗತಿಶೀಲವಾಗಿರಬೇಕು ಅಧಿಕ ವರಮಾನವಿರುವವ ರಿಂದ ಹೆಚ್ಚು ದಾಮಾಶಯದಲ್ಲಿಯೂ, ಕಡಿಮೆ ವರಮಾನದವರಿಂದ ಕಡಿಮೆ ದಾಮಾಶಯದಲ್ಲಿಯೂ ತೆರಿಗೆ ವಸೂಲು ಮಾಡಬೇಕು. ಇದಕ್ಕೆ ಪ್ರಗತಿಶೀಲವಾದ ತೆರಿಗೆಯ ಪದ್ಧತಿ ಎಂದು ಹೆಸರು ಈ ಪದ್ಧತಿಯನ್ನು ಬಂಡವಾಳಗಾರ ಸಮಾಜವು ಅಕ್ಷರಶಃ ಪಾಲಿಸಿದರೆ ದೇಶದಲ್ಲಿ ಉಳಿತಾ ಯಕ್ಕೂ ಇನ್ವೆಸ್ಟ್‌ಮೆಂಟಿಗೂ ನಿರುತ್ಸಾಹವುಂಟಾಗಿ ಬಂಡವಾಳದ ನಿರ್ಮಾಣವು ಹಿಂದೆಬಿದ್ದು ಆರ್ಥಿಕ ಪ್ರಗತಿಗೆ ಬಾಧಕವಾಗಬಹುದು ಎಂದು ಕೆಲವರು ಹೇಳುತ್ತಾರೆ. ಆದರೆ ವಸ್ತುತಃ ಹೀಗಾಗುವುದೆ ಎಂಬುದನ್ನು ವಿಮರ್ಶಿಸೋಣ. ಉತ್ಪಾದನೆಯ ಹಂದರವು ಯಾಂತ್ರಿಕ-ತಾಂತ್ರಿಕ ಪ್ರಗ ತಿಯ ಶಿಖರವನ್ನು ಮುಟ್ಟಿರುವ ಅಮೇರಿಕ, ಇಂಗ್ಲೆಂಡ್ ಮುಂತಾದ ದೇಶ ಗಳಲ್ಲಿ ಪ್ರಗತಿಶೀಲ ತೆರಿಗೆಯಿಂದ ಬಂಡವಾಳದ ಇನ್ವೆಸ್ಟ್‌ಮೆಂಟಿಗೆ ತೊಂದರೆ ಯಾಗಲಾರದು. ಯುದ್ಧಕಾಲದಲ್ಲಿ ಬ್ರಿಟನಿನ ಸರಕಾರವು ಪ್ರಜೆಗಳ ಆದಾ ಯದಲ್ಲಿ ಸೇಕಡ ೯೦ ರಷ್ಟನ್ನು ವಶಪಡಿಸಿಕೊಂಡರೂ ರಾಷ್ಟ್ರೀಯ ಉತ್ಪಾ ದನೆಯು ಏರುಮುಟ್ಟದಲ್ಲಿರಲಿಲ್ಲವೆ? ಆ ಮೇಲೆ ಬಂದ ಕೂಲಿಕಾರ ಸರ ಕಾರಕ್ಕೆ ರಾಷ್ಟ್ರೀಯ ಪುನರ್ನಿವೇಶನ ಕಾರ್ಯಕ್ಕೆ ಬೇಕಾದ ಬಂಡವಾಳವು

ಸಾಂಗವಾಗಿ ದೊರೆಯಲಿಲ್ಲವೆ? ಇದರಿಂದ ತೆರಿಗೆಯು ಪ್ರಗತಿಶೀಲವಾಗಿರುವುದು ಪ್ರಗತಿಶೀಲರಾಷ್ಟ್ರಗಳಿಗೆ ಹಿತಕರವೇ ಆಗಿದೆ ಹಿಂದುಳಿದ ದೇಶಗಳಲ್ಲಿ ಖಾಸಗಿ ಉಳಿತಾಯವು ಬಂಡವಾಳದ ಪೂರೈಕೆಯ ಪ್ರಧಾನ ಅಂಶವಾದುದರಿಂದ ಅಲ್ಲಿಯ ತೆರಿಗೆ ಮುಂಬರಿದ ರಾಷ್ಟ್ರಗಳಲ್ಲಿರುವಷ್ಟು ಪ್ರಗತಿಶೀಲವಾಗಿರಬಾರದು ಹೇಗಾದರೂ ಪ್ರಗತಿಶೀಲ ತೆರಿಗೆಯಿಂದ ಆದಷ್ಟು ಕಮ್ಮಿ ಆರ್ಥಿಕ ಪರಿಣಾಮವಾಗುವಂತೆ ನೋಡಿಕೊಳ್ಳುವುದು ಮುಖ್ಯ.

**ರಾಜಕೀಯದ ಹಲ್ಲೆ:**

ಅರ್ಥಶಾಸ್ತ್ರದ ಮೇಲೆ ರಾಜಕೀಯವು ಮಾಡುವ ಹಲ್ಲೆಯನ್ನು ಆನುಪಾತಿಕ ಮತ್ತು ಪ್ರಗತಿಶೀಲ ತೆರಿಗೆಗಳ ಉದಾಹರಣೆಯಿಂದ ವಿವರಿಸಬಹುದು ಫ್ರಾನ್ಸಿನ ರಕ್ತಮಯ ವಿಪ್ಲವದ ಪೂರ್ವದಲ್ಲಿ ತೆರಿಗೆಯ ಹೆಚ್ಚಿನ ಭಾರವನ್ನು ಶೋಷಿತ ರೈತ ಕಾರ್ಮಿಕರೇ ಹೊರಬೇಕಾಗಿದ್ದಿತು. ಪಾದರಿ, ಸಾಮಂತಗಾರ ಮತ್ತು ಶ್ರೀಮಂತ ವರ್ಗದ ವ್ಯಕ್ತಿಗಳು ತೆರಿಗೆ ಕೊಡುತ್ತಲೇ ಇರಲಿಲ್ಲ. ಇದರಿಂದಾಗಿ ಕೃಷಿ ಮತ್ತು ಉದ್ಯಮಗಳು ಪತನೋನ್ಮುಖವಾದುವು. ವಿಪ್ಲವಾನಂತರ ಪಟ್ಟಕ್ಕೆ ಬಂದ ಸರಕಾರವು 'ಸಮಾನತೆ' ಎಂಬ ಪದಕ್ಕೆ ತೀರ ಸಂಕುಚಿತವಾದ ಅರ್ಥವನ್ನು ಕಟ್ಟಿ ತೆರಿಗೆಯಲ್ಲಿಯೂ ಸಮಾನ ಅನುಪಾತದ ಪದ್ಧತಿಯನ್ನು ಉಪಕ್ರಮಿಸಿತು. ೧೮ ಮತ್ತು ೧೯ನೆಯ ಶತಮಾನಗಳಲ್ಲಿ ವಿತರಣೆಗಿಂತಲೂ ಉತ್ಪಾದನೆಗೆ ಹೆಚ್ಚು ಪ್ರಾಶಸ್ತ್ಯವಿದ್ದುದರಿಂದ ಈ ಬಗೆಯ ತೆರಿಗೆಯು ಬಂಡವಾಳ ಸಂಚಯನಕ್ಕೂ, ತನ್ಮೂಲಕ ಔದ್ಯಮಿಕ ಅಭ್ಯುದಯಕ್ಕೂ ಹೇತುವಾಯಿತು. ೧೯ನೆಯ ಶತಮಾನವು ಅಸ್ತಮಿಸುವ ಹೊತ್ತಿಗೆ ಕೂಲಿಕಾರ ಸಂಘಟನೆಯ ಮುಖಾಂತರವಾಗಿ ವಿತರಣೆಯ ಸಮಸ್ಯೆಯ ಕೋಲಾಹಲವು ಸರಕಾರದ ಕಿವಿಗೆ ಬಿದ್ದಿತು. ಬಂಡವಾಳಗಾರ ರಾಷ್ಟ್ರಗಳು ಅನಿವಾರ್ಯ ಪ್ರಸಂಗವೊಂದಕ್ಕೆ ಒಪ್ಪಿಸಿದ ಕಾಣಿಕೆಯೇ ಪ್ರಗತಿಶೀಲ ಕರಪದ್ಧತಿ. ಈಚೆಗೆ ಸಾಮಾಜಿಕ ವಿತರಣೆಯನ್ನು ಅದಲುಬದಲು ಮಾಡುವುದಕ್ಕೂ ಪ್ರಗತಿಶೀಲ ತೆರಿಗೆಯನ್ನು ಒಂದು ಸಾಧನವಾಗಿ ಉಪಯೋಗಿಸಲಾಗುತ್ತಿದೆ. ಆದರೆ ಪ್ರಗತಿಶೀಲ ತೆರಿಗೆಯ ಮೂಲಕವಾಗಿ ಎಲ್ಲ ವರಮಾನಗಳೂ ಸಮಾನವಾದರೆ ಆ ಮೇಲೆ ಪ್ರಗತಿ

ಶೀಲ ತೆರಿಗೆಗೆ ಆಸ್ಪದವೆಲ್ಲಿದೆ? ಆದುದರಿಂದ ಇದರ ಮಿತಿಯನ್ನು ನಾವು ತಿಳಿದಿರಬೇಕು.

## ಪ್ರತ್ಯಕ್ಷ ಮತ್ತು ಪರೋಕ್ಷ ಕರ:

ನಮ್ಮ ಮನೆಯ ಮೇಲೆ ನಗರಸಭೆಯ ಆಡಳಿತೆಯು ವಿಧಿಸುವ ತೆರಿಗೆಯನ್ನು ನಾವಲ್ಲದೆ ಅನ್ಯರೇಕೆ ಕೊಡುತ್ತಾರೆ? ಆದರೆ ಬಟ್ಟೆಯ ಮೇಲೆ ಕೇಂದ್ರ ಸರಕಾರವೂ, ವಿವಿಧ ರಾಜ್ಯಗಳ ಸರಕಾರಗಳೂ ತಂತಮ್ಮ ಶಕ್ತ್ಯನುಸಾರ ಸುಂಕವನ್ನು ಹೇರಿದರೂ ಅದನ್ನು ಕೊಡುವಾತ ಗಿರಣಿ ಮಾಲಕನೂ ಅಲ್ಲ, ವ್ಯಾಪಾರಿಯೂ ಅಲ್ಲ, ಗಿರಾಕಿ. ಮನೆಯ ತೆರಿಗೆ ಪ್ರತ್ಯಕ್ಷ ತೆರಿಗೆ. ಅದನ್ನು ಯಾರ ಮೇಲೆ ವಿಧಿಸಲಾಗುತ್ತದೋ ಆತನೇ ತೆರಬೇಕು. ಬಟ್ಟೆಯ ಸುಂಕವು ಪರೋಕ್ಷ ತೆರಿಗೆ. ಏಳೂವರೆ ರುಪಾಯಿ ಬೆಲೆಯ ಧೋತರವನ್ನು ಕೊಳ್ಳುವಾಗ ಆ ಮೊಬಲಗಿನಲ್ಲಿ ಸರಕಾರವು ವಿಧಿಸಿದ ನಾಲ್ಕೆಂಟಾಣೆ ತೆರಿಗೆಯು ಒಡಗೂಡಿದೆ. ಇದನ್ನು ಗಿರಣಿ ಮಾಲಕನು ದಳ್ಳಾಳಿಗೂ, ಆತನು ರಕಮು ವರ್ತಕನಿಗೂ, ವರ್ತಕನು ಚಿಲ್ಲರೆ ಅಂಗಡಿಯವನಿಗೂ ಒಬ್ಬರಿಗೊಬ್ಬರು ವರ್ಗಾಯಿಸಿಕೊಂಡು ಕಟ್ಟಕಡೆಗೆ ನಿರುಪದ್ರವಿ ಗಿರಾಕಿಯ ತಲೆಯ ಮೇಲೆ ಹೇರಿಬಿಡುತ್ತಾರೆ ಅಂಗಡಿಯ ಬೀಲನ್ನು ಓದುವ ಅಭ್ಯಾಸವಿಲ್ಲದ ಅಥವಾ ಓದಲು ಬಾರದ ಗಾಂಪನು ಬಟ್ಟೆಯ ಬೆಲೆಯೇ ಏಳೂವರೆ ರುಪಾಯಿ ಎಂದು ತಿಳಿಯುತ್ತಾನಲ್ಲದೆ ತಾನು ಸುಂಕಕೊಟ್ಟೆನೆಂಬುದನ್ನು ಮರೆಯುತ್ತಾನೆ. ನಾವು ಕಡ್ಡಿಪೊಟ್ಟಣಕ್ಕೆ ಕೊಡುವ ಒಂಭತ್ತು ಕಾಸಿನಲ್ಲಿ ಅರ್ಧಾಂಶಕ್ಕಿಂತಲೂ ಹೆಚ್ಚು ಸರಕಾರದ ಸುಂಕವೆಂಬುದು ಎಷ್ಟು ಮಂದಿ ಬುದ್ಧಿವಂತರಿಗೆ ಗೊತ್ತಿರಬಹುದು? ಅಥವಾ ಗೊತ್ತಾದರೂ ಅದನ್ನು ಯಾರು ಗಣನೆಗೆ ತಂದು ಗೊಣಗುವವರು? ಆದರೆ ಪರೋಕ್ಷ ತೆರಿಗೆಯು ಯಾವಾಗಲೂ ಈ ರೀತಿ ಪೂರ್ತಿಯಾಗಿ ಗಿರಾಕಿಯಿಂದಲೇ ವಸೂಲಾಗಬೇಕೆಂಬ ನಿಯಮವಿಲ್ಲ. ಗಿರಾಕಿ ಸ್ವಲ್ಪ, ವರ್ತಕ ಸ್ವಲ್ಪ, ಉತ್ಪಾದಕ ಸ್ವಲ್ಪ—ಹೀಗೆ ಹಂಚಿಕೊಳ್ಳುವುದೂ ಉಂಟು. ಸಾಮಾನ್ಯವಾಗಿ ಸಕ್ಕರೆ, ಪೆಟ್ರೋಲು, ಸೀಮೆಎಣ್ಣೆ, ಬಟ್ಟೆ ಮುಂತಾದ ಅನುಭೋಗ ಸಾಮಗ್ರಿಗಳ ಮೇಲೂ, ಮನೋರಂಜನೆ

ಇತ್ಯಾದಿ ವ್ಯವಹಾರಗಳ ಮೇಲೂ ಹೇರಲಾಗುವ ಕರಕ್ಕೆ ಪರೋಕ್ಷ ಕರವೆಂದೂ, ವ್ಯಕ್ತಿ ಮತ್ತು ಅವನ ಆಸ್ತಿಪಾಸ್ತಿಗಳ ಮೇಲೆ ಹೇರುವ ಕರಕ್ಕೆ ಪ್ರತ್ಯಕ್ಷ ಕರವೆಂದೂ ಕರೆಯುವುದು ರೂಢಿ. ಜನಸಂಖ್ಯೆಯೂ, ದಾರಿದ್ರ್ಯವೂ ಅಧಿಕವಾಗಿರುವ ದೇಶಗಳಲ್ಲಿ ಪರೋಕ್ಷಮಾರ್ಗವೇ ಲೇಸೆನಿಸಬಹುದು. ದೇಶವು ಆರ್ಥಿಕ ಪ್ರಗತಿಯನ್ನು ಸಾಧಿಸಿದಂತೆ ಪ್ರತ್ಯಕ್ಷ ತೆರಿಗೆಗಳೂ ರಂಗಸ್ಥಳಕ್ಕೆ ಬರಬಹುದು.

**ಆರ್ಥಿಕ ಮಂಡಲದ ಮೇಲಾಗುವ ಪರಿಣಾಮ:**

ತೆರಿಗೆಯಿಂದ ಉತ್ಪಾದನೆ, ಅನುಭೋಗ ಮುಂತಾದುವು ಯಾವ ರೀತಿ ವ್ಯತ್ಯಸ್ತವಾಗುವುವು ಎಂಬುದನ್ನು ಸ್ವಲ್ಪಮಟ್ಟಿಗೆ ಈಗಾಗಲೇ ವಿವೇಚಿಸಿರುವೆವು. ಈಗ ತೆರಿಗೆಗಳು ರಾಷ್ಟ್ರದ ಅವಯುವ ಸಂಯೋಜನೆಯ ವ್ಯವಸ್ಥೆಯಲ್ಲಿ ಮಾರ್ಪಾಟುಗಳನ್ನುಂಟುಮಾಡುವುವೆ? ಎಂಬುದನ್ನು ಪರಿಶೀಲಿಸಬೇಕು. ಬೇರೆ ಬೇರೆ ಉದ್ಯಮಗಳ ಮೇಲೆ ಬೇರೆ ಬೇರೆ ತೆರಿಗೆಗಳನ್ನು ವಿಧಿಸಿದರೆ ಬಂಡವಾಳವು ಕಮ್ಮಿ ತೆರಿಗೆಯ ಉದ್ಯಮವನ್ನೇ ಹುಡುಕಿಕೊಂಡು ಹೋಗುವುದು ಸ್ವಾಭಾವಿಕ, ಆದರೆ ಎಲ್ಲ ಉದ್ಯಮಗಳ ಮೇಲೆ ಒಂದೇ ವಿಧವಾಗಿ ತೆರಿಗೆ ಹೇರುವುದರಿಂದ ಪ್ರಯೋಜನವಿಲ್ಲ. ಏಕೆಂದರೆ ಒಂದೊಂದು ಉದ್ಯಮದ ಬೇಡಿಕೆ–ಪೂರೈಕೆಗಳ ಪರಿಸ್ಥಿತಿಯಲ್ಲೂ ಸ್ಥಿತಿಸ್ಥಾಪಕತ್ವವಿರುವುದರಿಂದ ಬಂಡವಾಳವು ಚಂಚಲವಾಗಿ ಅತ್ತಿಂದಿತ್ತ ಹರಿಯಲು ಬೇಕಾದಷ್ಟು ಉತ್ತೇಜನೆ ಇದ್ದೇ ಇರುವುದು. ಬಂಡವಾಳದಂತೆ ಭೂಮಿ, ಪರಿಶ್ರಮಗಳೂ ತೆರಿಗೆಯ ದೆಸೆಯಿಂದಾಗಿ ಚಂಚಲವಾಗುವ ಸಂದರ್ಭಗಳೂ ಇವೆ.

ವರಮಾನಗಳಲ್ಲಿರುವ ಅಸಮಾನತೆಯನ್ನು ಕಡಿಮೆಮಾಡುವ ತೆರಿಗೆಯ ಪದ್ಧತಿಯು ಆರ್ಥಿಕಮಂಡಲದ ಆರೋಗ್ಯವನ್ನು ಸೂಚಿಸುತ್ತದೆ. ಇಂಗ್ಲೆಂಡಿನಲ್ಲಿ ೧೯೩೫ರ ಹೊತ್ತಿಗಾಗಲೇ ವೃದ್ಧರ ಪೆನ್ಶನು, ಶಿಕ್ಷಣ, ಆರೋಗ್ಯ, ನಿರುದ್ಯೋಗ ವಿಮೆ ಮುಂತಾದ ಸಾರ್ವಜನಿಕ ಸಾಮಾಜಿಕ ಸೇವಾಕಾರ್ಯಗಳಿಗೆ ಕೇಂದ್ರ ಸರಕಾರವು ೧೧೩ ಮಿಲಿಯ ಪವನುಗಳನ್ನೂ, ಸ್ಥಾನಿಕ ಸಂಸ್ಥೆಗಳು ೭೯ ಮಿಲಿಯ ಪವನುಗಳನ್ನೂ ವೆಚ್ಚಮಾಡುತ್ತಿದ್ದುವಂತೆ.

೧೯೪೫ರಲ್ಲಿ ಆರೂಢವಾದ ಸಮಾಜವಾದಿ ಸರಕಾರವು ಜನರಿಗೆ ವೈದ್ಯಕೀಯ ಸಹಾಯವನ್ನು ಪುಕ್ಕಟೆಯಾಗಿ ಒದಗಿಸುವ ಯೋಜನೆಯನ್ನು ಕೆಲಗಾಲ ಕಾರ್ಯರೂಪಕ್ಕೆ ತಂದಿತು. ಇಂಥ ವ್ಯಯಗಳಿಗೆ ಬೇಕಾಗುವ ಹೆಚ್ಚಿನ ಪಾಲು ಹಣವು ಶ್ರೀಮಂತರ ಮೇಲೆ ವಿಧಿಸಲಾದ ತೆರಿಗೆಯಿಂದಲೇ ಬಂದುದು. ಬಡವರ ಹಣ ವರಮಾನವನ್ನು ಹೆಚ್ಚಿಸುವುದು ಒಮ್ಮಿಂದ್ದೊಮ್ಮೆ ಅಸಾಧ್ಯವಾದರೂ ಹಣವು ತರುವ ಸೌಕರ್ಯಗಳನ್ನು ಬೇರೆ ವಿಧವಾಗಿ ಒದಗಿಸುವುದರಿಂದ ಆರ್ಥಿಕ ಅಸಮಾನತೆಯನ್ನು ಅದೆಷ್ಟೋ ಕಡಿಮೆಮಾಡ ಬಹುದೆಂಬುದನ್ನು ಇಂಗ್ಲೆಂಡಿನ ಪ್ರಗತಿಯಿಂದ ನಾವು ತಿಳಿಯಬೇಕು. ಹೀಗಿದ್ದೂ ೧೯೩೮ರಲ್ಲಿ ಅಲ್ಲಿಯ ೧೧% ಜನರು ರಾಷ್ಟ್ರೀಯ ವರಮಾನದ ೪೩%ನ್ನು ಭುಂಜಿಸುವ ಭಾಗ್ಯವನ್ನು ಪಡೆದಿದ್ದು ಉಳಿದ ೫೭% ವರಮಾನವನ್ನು ೮೯% ಜನರು ಹಂಚಿಕೊಳ್ಳಬೇಕಾಯಿತು. ಅತ್ಯುಚ್ಚ ವರ್ಗದವರನ್ನು ತೆಗೆದುಕೊಂಡರೆ ಇಡಿ ಜನಾಂಗದ ೩·೧% ವಿಭಾಗವು ೨೭·೮% ರಾಷ್ಟ್ರೀಯ ವರಮಾನವನ್ನು ನುಂಗುವುದು ಹಗಲು ದರೋಡೆಯಲ್ಲದೆ ಬೇರೇನು? ಎಂದು ನಮಗನಿಸಬಹುದು. ಆದರೂ ೧೯೩೮ರ ಹೊತ್ತಿಗೆ ಪರಿಸ್ಥಿತಿಯು ಬಡವರಿಗೆ ಹಿತಕರವಾಗಿ ಎಷ್ಟೋ ಸುಧಾರಿಸಿದೆ ಎಂಬುದನ್ನೂ, ಹೀಗಾಗಲು ಪ್ರಗತಿಶೀಲ ತೆರಿಗೆಯು ಕಾರಣವೆಂಬುದನ್ನೂ, ನೆನೆದರೆ ಪ್ರಗತಿಶೀಲ ತೆರಿಗೆಗೆ ಯೋಗ್ಯ ಧನ್ಯವಾದವನ್ನು ಕೊಡಲೇ ಬೇಕು.

ಶಾ–ಖಂಬಟ್ಟರ ೧೯೨೪ರ ಅಂದಾಜಿನಂತೆ ಭಾರತದಲ್ಲಿ ೧% ಜನರು ರಾಷ್ಟ್ರೀಯ ವರಮಾನದ ಮೂರನೆಯ ಒಂದಂಶವನ್ನೂ, ೬೦% ಜನರು ಇನ್ನೊಂದಂಶವನ್ನೂ ಭುಂಜಿಸುವರಂತೆ. ಎಂಥ ಕುರುಡನಿಗೂ ಕಾಣಿಸಬೇಕಾದ ಅಸಮಾನತೆ ಇದು. ಕೇಂದ್ರ ಬ್ಯಾಂಕಿಂಗ್ ವಿಚಾರಣಾ ಸಮಿತಿಯು ನಮ್ಮ ಕೃಷಿಕನ ಸರಾಸರಿ ವಾರ್ಷಿಕ ವರಮಾನವು ೪೨ ರುಪಾಯಿ ಎಂದು ನಿರ್ಧರಿಸಿದೆ ಇನ್ನೊಂದು ಗಣನೆಯ ಪ್ರಕಾರ ೧೯೩೯ರಲ್ಲಿ ಭಾರತೀಯ ಕುಟುಂಬಗಳ ವರಮಾನದ ಗಾತ್ರವು ಹೀಗಿದ್ದಿತು:

| ವರಮಾನ (ರುಪಾಯಿ) | ಕುಟುಂಬಗಳ ಸಂಖ್ಯೆ |
|---|---|
| ೧,೦೦,೦೦೦ಕ್ಕೆ ಮೇಲ್ಪಟ್ಟು | ೬,೦೦೦ |

| | |
|---|---|
| ೫,೦೦೦ ಸರಾಸರಿ | ೨೭೦,೦೦೦ |
| ೧,೦೦೦ ಸರಾಸರಿ | ೨೫೦,೦೦೦ |
| ೨೦೦ ಸರಾಸರಿ | ೩,೫೦,೦೦೦,೦೦ |
| ೫೦ ಸರಾಸರಿ | ಉಳಿದ ಕೋಟ್ಯವಧಿ ಕುಟುಂಬಗಳು |

**ವರಮಾನದ ತೆರಿಗೆ:**

ವರಮಾನದ ತೆರಿಗೆಯು ಪ್ರತ್ಯಕ್ಷ ತೆರಿಗೆಗಳಲ್ಲೊಂದು. ಸರಕು ಸೇವೆಗಳಿಂದ ಮನುಷ್ಯನಿಗೆ ಲಭಿಸುವ ತೃಪ್ತಿಯನ್ನು ಅಳೆಯುವುದಸಾಧ್ಯವಾದುದರಿಂದ ವರಮಾನದ ನಿಜವಾದ ಅರ್ಥವು ನಮಗೆ ಹೊಳೆಯುವ ಹಾಗಿಲ್ಲ. ಆದರೂ ಹಣವರಮಾನವನ್ನೇ ನಾವು ಸಾಧಾರಣವಾಗಿ ವರಮಾನವೆಂದು ಸ್ವೀಕರಿಸಿರುವವು ಉಪಯೋಗಮಾತ್ರದಿಂದಲೇ ಬೆಲೆ ಇಳಿಯುವ ಕಟ್ಟಡ, ಯಂತ್ರ ಮೊದಲಾದುವುಗಳ ಮೇಲೆ ತೆರಿಗೆ ಹೊರಿಸುವಾಗ ಅವುಗಳ ಇಳಿಮಾನದ ಬಗ್ಗೆ ತಕ್ಕ ರಿಯಾಯಿತಿ ತೋರಿಸುವುದು ನ್ಯಾಯವಾಗಿದೆ. ವ್ಯಕ್ತಿಯ ವರಮಾನದ ನಿಷ್ಕರ್ಷೆಗೆ ಅವನ ನಿವ್ವಳ ಆದಾಯವನ್ನು ಕಂಡುಹಿಡಿಯಬೇಕು ಅದರ ಒಂದು ಅಂಶದ ಮೇಲೆ ಮಾತ್ರ ತೆರಿಗೆ ಹೊರಿಸಬೇಕು. ಜೀವವಿಮೆಗೆ ಕೊಡಲಾದ ಹಣವನ್ನು ವರಮಾನದ ತೆರಿಗೆಯ ಲೆಕ್ಕದಿಂದ ಹೊರಗಿಡಬೇಕು. ಕಡಿಮೆ ವರಮಾನವುಳ್ಳ ವರ್ಗದ ಮೇಲೆ ವರಮಾನದ ತೆರಿಗೆಯ ನೆರಳು ಸಹಿತ ಹಾಯಲಾಗದು. ಭಾರತದಲ್ಲಿ ೩೦೦೦ ರುಪಾಯಿಗಿಂತ ಹೆಚ್ಚು ವರಮಾನವುಳ್ಳವರು ಮಾತ್ರ ಈ ತೆರಿಗೆಯನ್ನು ಕೊಡುತಿದ್ದಾರೆ. ಇಂಗ್ಲೆಂಡಿನ ಸರಕಾರವು ಕೆಲವು ಜನವರ್ಗಗಳಿಂದ ಸೇಕಡ ೯೦ರಷ್ಟು ವರಮಾನವನ್ನೂ ಕಸಿದುಕೊಳ್ಳುತ್ತದೆ. ೧೯೩೫-೩೬ರಲ್ಲಿ ಈ ತೆರಿಗೆಯು ಬ್ರಿಟಿಷ ಖಜಾನೆಗೆ ೨೯೭ ಮಿಲಿಯ ಪವನುಗಳನ್ನೂ, ೧೯೪೧–೪೨ರಲ್ಲಿ ೭೭೦ ಮಿಲಿಯ ಪವನುಗಳನ್ನೂ ಒದಗಿಸಿಕೊಟ್ಟಿತು ಬ್ರಿಟನಿನ ಅಖಿಲ ರಾಜ್ಯಾದಾಯದ ಸುಮಾರು ೪೦% ನಷ್ಟು ಮೊತ್ತವು ಕೇವಲ ವರಮಾನದ ತೆರಿಗೆಯಿಂದಲೇ ಹುಟ್ಟುವುದು. ೧೯೩೯ರ ಭಾರತೀಯ ಶಾಸನದ ಪ್ರಕಾರ ನಮ್ಮ ದೇಶದಲ್ಲಿ ೨೦೦೦ದಿಂದ ೫೦೦೦ ರುಪಾಯಿಗಳ ವರೆಗಿನ ವರಮಾನವುಳ್ಳವರು ರುಪಾ

ಯಿಗೆ ೬ ಪೈಗಳಂತೆಯೂ, ೫೦೦೦ದಿಂದ ೧೦,೦೦೦ ವರಮಾನವುಳ್ಳವರು ೮ ಪೈಗಳಂತೆಯೂ, ೧೦೦,೦೦೦ದಿಂದ ೧,೫೦,೦೦೦ದ ವರೆಗಿನವರು ೧೦ ಪೈಗಳಂತೆಯೂ ತೆರಿಗೆ ಕೊಡಬೇಕು. ಈಗ ೩೦೦೦ಕ್ಕೆ ಹೆಚ್ಚು ವರಮಾನವುಳ್ಳವರಿಂದ ತೆರಿಗೆ ವಸೂಲುಮಾಡುವಾಗ ಅವರ ಮೊದಲ ೧೫೦೦ರ ಮೇಲೆ ಏನೂ ತೆರಿಗೆ ಇರುವುದಿಲ್ಲ ಮತ್ತಿನ ೩೫೦೦ ರುಪಾಯಿಗಳ ಮೇಲೆ ೯ ಪೈಯಂತೆಯೂ, ಅದಕ್ಕೆ ಮೇಲಿನ ೫೦೦೦ದ ಮೇಲೆ ರೂ ೦-೧-೯ ರಂತೆಯೂ, ಆ ಬಳಿಕ ಬರುವ ೫೦೦೦ದ ಮೇಲೆ ರೂ. ೦-೩-೦ರಂತೆಯೂ, ಅದಕ್ಕೂ ಹೆಚ್ಚಿನ ಹಣದ ಮೇಲೆ ರೂ. ೦-೪-೦ರಂತೆಯೂ ತೆರಿಗೆ ಹೊರಿಸಲಾಗುವುದು. ಈ ವಿವಿಧ ದರಗಳ ಮೇಲೆ ಅವುಗಳ $\frac{೧}{೨೦}$ ರಷ್ಟು ಸರ್‌ಛಾರ್ಜನ್ನು ಹೊರಿಸಬಹುದು. ಬ್ರಿಟನಿನ ಮತ್ತು ನಮ್ಮ ವರಮಾನದ ತೆರಿಗೆಗಳನ್ನು ಹೋಲಿಸಿದರೆ ನಮ್ಮಲ್ಲಿ ತೆರಿಗೆಯ ದಾಮಾಶಯವು ತೀರ ಕಡಿಮೆ ಎಂದು ಕಾಣುತ್ತದೆ ಇದನ್ನೂ ತಪ್ಪಿಸಿಕೊಳ್ಳಬೇಕೆಂದು ಬಗೆಯುವ ದೇಶದ್ರೋಹಿಗಳು ಇದ್ದಾರಲ್ಲಾ ಎಂಬುದು ಮತ್ತಷ್ಟು ಆಶ್ಚರ್ಯಜನಕ ವಿಷಯ. ಇಂಥವರನ್ನು ಸರಕಾರವು ಬಯಲಿಗೆಳೆಯಲು ನಾಚಿ ಅವರಿಗೆ ರಿಯಾಯಿತಿ, ಸವಲತ್ತು, ಸಮಯಗಳನ್ನೊದಗಿಸುವ ಮೃದುತ್ವ ಪ್ರದರ್ಶನವನ್ನು ಕಂಡು ನ್ಯಾಯದ ಕಣ್ಣು ಕೆರಳುತ್ತದೆ

ನಮ್ಮ ವರಮಾನದ ತೆರಿಗೆಯ ಕುರಿತು ಎರಡು ಸೂಚನೆಗಳನ್ನು ಕೊಡಬಹುದು. (೧) ಕೃಷಿಯಿಂದ ಬರುವ ವರಮಾನವನ್ನು ಈ ತೆರಿಗೆಯ ವ್ಯಾಪ್ತಿಯಿಂದ ಹೊರತು ಪಡಿಸಿದುದು ಅಕ್ಷಮ್ಯವಾದ ಒಂದು ದೋಷ ಕೃಷಿ ಉತ್ಪತ್ತಿಗಳಿಗೆ ಅತಿಶಯವಾದ ಬೆಲೆ ಬರುವ ಈ ಹತ್ತು ವರ್ಷಗಳಲ್ಲಿಯೂ ಕೃಷಿವರಮಾನವನ್ನು ಮುಟ್ಟಲು ನಮ್ಮ ಸರಕಾರವು ಏಕೆ ಹಿಂಜರಿಯುತ್ತಿದೆಯೋ ತಿಳಿಯದು. ವರ್ಷಕ್ಕೆ ನೂರಾರೆಕರೆ ಹೊಲಗಳ ಒಡೆತನದಿಂದ ಸಾವಿರಗಟ್ಟಲೆ ವರಮಾನವನ್ನು ದಕ್ಕಿಸುವ ಧನಿಯನ್ನು ಸರಕಾರದ ಆರ್ಥಿಕ ನ್ಯಾಯವು ಬೇಗನೇ ಸ್ಪರ್ಶಿಸುವಂತಾಗಬೇಕು.

(೨) ನಮ್ಮ ದೇಶದ ವರಮಾನದ ತೆರಿಗೆಯ ಆಡಳಿತೆಯಲ್ಲಿ ತುಂಬಾ ಸುಧಾರಣೆಗಳಾಗಬೇಕು. ತೆರಿಗೆಕಳ್ಳರನ್ನೂ ವಂಚಕರನ್ನೂ ಕೂಡಲೇ

ಶೋಧಿಸಬಲ್ಲ ನೌಕರರಿಗೆ ಭಕ್ತಿಯ ಆಸೆಯನ್ನು ತೋರಿಸಿಯಾದರೂ ರಾಷ್ಟ್ರ ವಂಚನೆಯ ಈ ಆಟವನ್ನು ನಿಲ್ಲಿಸಬೇಕು.

**ಆಸ್ತಿ ಹಕ್ಕುದಾರಿಯ ತೆರಿಗೆ:**

ಬ್ರಿಟನಿನಲ್ಲಿ ಇದಕ್ಕೆ 'ಡೆತ್ ಡ್ಯೂಟೀಸ್' ಎಂದು ಹೆಸರು. ಒಬ್ಬನಿಗೆ ವಂಶಾನುಗತವಾಗಿ ದೊರೆಯುವ ಆಸ್ತಿಪಾಸ್ತಿಗಳು ಅಕಸ್ಮಾತ್ ವರಮಾನದ ಸ್ವರೂಪದುವಾದ್ದರಿಂದಲೂ, ಹೀಗೆ ಆಸ್ತಿವಂತನಾದ ವಾರಸುದಾರನಿಗೆ ತನ್ನ ಮಕ್ಕಳು-ಮರಿಗಳ ಲಾಲನೆ-ಪಾಲನೆ, ಶಿಕ್ಷಣ ಮುಂತಾದ ವಿಷಯಗಳಲ್ಲಿ ವಿಶೇಷ ತರದ ಅನುಕೂಲತೆಯೊದಗುವುದರಿಂದಲೂ, ರಾಷ್ಟ್ರವು ಅವನ ವರಮಾನದಲ್ಲಿ ಒಂದು ಅಂಶವನ್ನು ಅಪೇಕ್ಷಿಸುತ್ತದೆ. ಏನಿದ್ದರೂ ಒಬ್ಬ ಆಸ್ತಿವಂತನ ಮರಣದಿಂದ ಅವನ ವಾರಸುದಾರನಲ್ಲಿ ತೆರಿಗೆ ಕೊಡುವ ಸಾಮರ್ಥ್ಯವು ಹೆಚ್ಚಾಗುವುದು ನಿಜವಷ್ಟೆ. ಯುರೋಪು, ಅಮೇರಿಕಾ ದೇಶಗಳಲ್ಲಿ ಈಗೆಷ್ಟೋ ದಶಕಗಳಿಂದ ಹಿಡಿದು ಅಂಥ ವಾರಸುದಾರನ ಮೇಲೆ ಭಾರವಾದ ತೆರಿಗೆಯನ್ನು ಹೇರುವ ಕ್ರಮವು ಜಾರಿಯಲ್ಲಿದೆ ಸಮಾಜವಾದಿಗಳು ಈ ತೆರಿಗೆಯ ಮುಖಾಂತರ ಖಾಸಗಿ ಒಡೆತನವನ್ನು ನಿರ್ನಾಮಗೊಳಿಸಬಹುದೆಂಬ ತೀರ್ಮಾನಕ್ಕೆ ಬಂದಿರುವರು. A, B, C, ಎಂಬ ಮೂರು ಜನ ಒಂದು ಆಸ್ತಿಯ ಹಕ್ಕುದಾರರೆಂದು ಭಾವಿಸುವ. ಆ ಆಸ್ತಿಯು Aಯ ಕೈಗೆ ಬರುವಾಗ ೧/೧೦ ಭಾಗವನ್ನೂ. Bಯ ಕೈಗೆ ಬರುವಾಗ ೧/೫ ಭಾಗವನ್ನೂ, ತದನಂತರ Cಯ ಕೈಗೆ ಬರುವಾಗ ೧/೪ ಭಾಗವನ್ನೂ ವಸೂಲು ಮಾಡುತ್ತ ಬಂದರೆ ಅಂತ್ಯತಃ ಇಡಿ ಆಸ್ತಿಯು ಸರಕಾರದ ವಶವಾಗಲೇಬೇಕು. ಆದರೆ ಆಸ್ತಿ ಹಕ್ಕುದಾರಿಯ ತೆರಿಗೆಯು ಆಸ್ತಿಯನ್ನು ಮಾಡಿಟ್ಟ ಮೃತನ ಮೇಲೆ ಬೀಳುತ್ತದೋ ಅಥವಾ ಹಕ್ಕುದಾರನ ಮೇಲೆ ಬೀಳುತ್ತದೋ ಎಂಬುದು ಒಂದು ಸಮಸ್ಯೆ. ತನ್ನ ಹಕ್ಕುದಾರನು ತೆರಿಗೆ ತೆತ್ತ ಮೇಲೂ ಆಸ್ತಿಯ ಬಹುಭಾಗ ಉಳಿಯಬೇಕೆಂಬ ಇರಾದೆಯಿಂದ ಮೃತನು ತನ್ನ ಜೀವಿತಕಾಲದಲ್ಲಿ ಮಿತವ್ಯಯವನ್ನು ಮಾಡುತ್ತ ಬಂದಿದ್ದರೆ, ಆಸ್ತಿ ಹಕ್ಕುದಾರಿಯ ತೆರಿಗೆಯು ಅವನ ಮೇಲೆಯೇ ಬೀಳುವುದೆಂದೂ, ಹಾಗಲ್ಲವಾದರೆ ಹಕ್ಕುದಾರನ ಮೇಲೆ ಬೀಳುವುದೆಂದೂ ಭಾವಿಸಬಹುದು.

ನಮ್ಮ ದೇಶದಲ್ಲಿ ಈ ತೆರಿಗೆಯು ಈ ತನಕ ಬಂದಿಲ್ಲವಾದರೂ, ಇದನ್ನು ಹೇರುವ ಅಭಿಪ್ರಾಯವು ೧೯೪೫ರ ಲಾಗಾಯಿತು ಬ್ರಿಟಿಷ ಸರಕಾರಕ್ಕೆ ಇದ್ದೇ ಇತ್ತು. ವಾಲ್ಟರ್ ಲೇಟನ್ ಅವರ ಶಿಫಾರಸಿನಲ್ಲಿ ಆಸ್ತಿ ಹಕ್ಕುದಾರಿಯ ತೆರಿಗೆಯನ್ನು ಕೇಂದ್ರ ಸರಕಾರವು ವಿಧಿಸಿ, ಸಂಗ್ರಹಿಸಿ, ಆ ಮೇಲೆ ಪ್ರಾಂತಗಳಿಗೆ ಹಂಚಿಕೊಡಬೇಕೆಂಬ ಯೋಗ್ಯ ಸಲಹೆ ಕೊಡಲಾಗಿದ್ದರೂ ಅದನ್ನು ಹೇರಲೇಬೇಕೆಂಬ ಒತ್ತಾಯವಿರಲಿಲ್ಲ. ೧೯೩೫ರ ಬ್ರಿಟಿಷ ಇಂಡಿಯಾ ಘಟನೆಯ ಪ್ರಕಾರ ಕೃಷಿಭೂಮಿಯ ಮೇಲಿನ ಹಕ್ಕುದಾರಿ ತೆರಿಗೆಯನ್ನು ಪ್ರಾಂತ ಸರಕಾರಗಳ ವಶಕ್ಕೂ, ಉಳಿದ ಆಸ್ತಿಗಳ ಮೇಲಿನದನ್ನು ಕೇಂದ್ರ ಸರಕಾರದ ವಿಧಿ ಮತ್ತು ವಿತರಣೆಗಳಿಗೂ ಬಿಟ್ಟುಗೊಡಲಾಗಿತ್ತು. ಆ ಬಳಿಕ ಅನೇಕ ಸಲ ಕೇಂದ್ರ ಶಾಸನಸಭೆಯು ಈ ತೆರಿಗೆಯ ಕುರಿತು ಚರ್ಚಿಸಿದರೂ ಯಾವ ಒಂದು ಮುಸೂದೆಯೂ ಈ ತನಕ ಹೊರಗೆ ಬರಲಿಲ್ಲ ಇನ್ನಾದರೂ ಆಸ್ತಿ ಹಕ್ಕುದಾರಿಯ ತೆರಿಗೆ ಬರಬೇಕಾದುದು ಅಗತ್ಯ. ಪ್ರತ್ಯಕ್ಷ ತೆರಿಗೆಗಳು ತೀರ ಕಡಿಮೆ ಇರುವ ನಮ್ಮ ದೇಶದಲ್ಲಿ ಆಸ್ತಿ ಹಕ್ಕುದಾರಿಯ ತೆರಿಗೆಯಂಥ ಪ್ರತ್ಯಕ್ಷ ತೆರಿಗೆಗಳು ಬಂದರೆ ಬಡವರ ಮೇಲಿನ ಕರಭಾರವು ಎಷ್ಟೋ ಮಟ್ಟಿಗೆ ಹಗುರವಾಗಬಹುದು. ನಮ್ಮ ತೆರಿಗೆಯ ಪದ್ಧತಿಯಲ್ಲಿ ಸಮತೋಲವುಂಟಾಗಬಹುದು. ದೇಶದ ಆರ್ಥಿಕ ಅಭಿವೃದ್ಧಿಯ ಯೋಜನೆಗಳಿಗೆ ಬೇಕಾದ ಬಂಡವಾಳವನ್ನು ಸರಕಾರವು ಈ ಬಗೆಯ ಪ್ರತ್ಯಕ್ಷ ತೆರಿಗೆಗಳಿಂದ ಪಡೆದುಕೊಳ್ಳಬೇಕಲ್ಲದೆ ಗಾಯಕ್ಕೆ ಉಪ್ಪೆರೆಯುವ ಪರೋಕ್ಷ ತೆರಿಗೆಗಳ ಜಾಲವನ್ನು ಹರಡಬಾರದು.

**ಅಧಿಕ ಲಾಭದ ತೆರಿಗೆ:**

ಯುದ್ಧವೇ ಮೊದಲಾದ ಅಕಸ್ಮಾತ್ ಪ್ರಸಂಗಗಳ ದೆಸೆಯಿಂದ ಒಂದು ದೇಶದ ಪ್ರಜೆಗಳಿಗೆ, ಮುಖ್ಯವಾಗಿ ಉದ್ದಿಮೆದಾರರಿಗೆ ಹೇರಳ ಲಾಭವು ಗಳಿಕೆಯಾಗುವ ಚಿಹ್ನೆ ತೋರಿದರೆ ಆ ದೇಶದ ಸರಕಾರವು ಅಧಿಕ ಲಾಭದ ತೆರಿಗೆಯನ್ನು ವಿಧಿಸಿ ನಿರಾಯಾಸವಾಗಿ ಬಂದಿರುವ ಲಾಭದಲ್ಲಿ ತನಗೂ ಪಾಲನ್ನು ಬೇಡುವುದು. ದ್ವಿತೀಯ ಮಹಾಯುದ್ಧದ ಸಮಯ ಉದ್ದಿಮೆದಾರರ ಆದಾಯದ ಬಹ್ವಂಶವು ವರಮಾನದ ತೆರಿಗೆ ಮತ್ತು ಅಧಿಕ

ಲಾಭದ ತೆರಿಗೆಯು ಮೂಲಕ ನರಕಾರದ ಬೊಕ್ಕಸಕ್ಕೆ ಪ್ರವಹಿಸಿತ್ತು. ಪ್ರಥಮ ಮಹಾಯುದ್ಧದ ಕಾಲದಲ್ಲಿ ಈ ತೆರಿಗೆಯು ಬ್ರಿಟನಿನ ರಾಜ್ಯಾದಾಯದ ೩೦% ಉತ್ಪನ್ನವನ್ನು ತಂದಿತ್ತು. ಎರಡನೆಯ ಮಹಾಯುದ್ಧವನ್ನು ವರ್ಷಗಟ್ಟಲೆ ನಡೆಯಿಸುವುದಕ್ಕೆ ಅಧಿಕ ಲಾಭದ ತೆರಿಗೆಯು ಮಾಡಿದ ಉಪಕಾರವು ಅಲ್ಪವಲ್ಲ.

**ಆಮದು ರಫ್ತುಗಳ ಸುಂಕ:**

ಪ್ರತಿದೇಶದಲ್ಲಿಯೂ ಬಹಳ ಕಾಲದಿಂದ ಬಳಕೆಯಲ್ಲಿರುವ ಮತ್ತು ರಾಷ್ಟ್ರಕ್ಕೆ ತುಂಬ ಆದಾಯವನ್ನು ತರುವ ಪರೋಕ್ಷ ತೆರಿಗೆ ಎಂದರೆ ಇದು. ಇತ್ತೀಚೆಗೆ ಅಂತರರಾಷ್ಟ್ರೀಯ ವ್ಯಾಪಾರವು ವಿಶಾಲವಾಗಿ ಹರಡಿರುವುದರಿಂದಲೂ, ದೇಶಗಳು ಆರ್ಥಿಕ ಪ್ರಗತಿಯ ಮಾರ್ಗದಲ್ಲಿ ನಡೆಯುತ್ತಿರುವುದರಿಂದಲೂ ಆಮದು ರಫ್ತಿನ ಸುಂಕವು ರಾಷ್ಟ್ರಕ್ಕೆ ಇನ್ನಷ್ಟು ಆದಾಯವನ್ನು ತರಬಲ್ಲುದು. ಈ ಸುಂಕವನ್ನು ಎರಡು ಉದ್ದೇಶಗಳಿಗಾಗಿ ವಿಧಿಸುವರು. (೧) ಪರದೇಶದಿಂದ ಬರುವ ಸರಕುಗಳ ಮೇಲೆ ಕೇವಲ ಆದಾಯದ ಸಲುವಾಗಿ ಹೇರುವ ಸುಂಕ. ಹಿಂದಿನ ಕಾಲದಲ್ಲಿ ಈ ಸುಂಕಕ್ಕೆ ಪ್ರೇರಕವಾದ ಕಾರಣವು ಬಹುಶಃ ಇಂದೊಂದೇ (೨) ಸ್ವದೇಶದ ಕೃಷಿ ಉತ್ಪನ್ನಗಳನ್ನೂ, ಔದ್ಯಮಿಕ ಸರಕುಗಳನ್ನೂ ಪರದೇಶಗಳ ಸ್ಪರ್ಧೆಯಿಂದ ರಕ್ಷಿಸುವುದಕ್ಕೋಸ್ಕರ ಆಮದಾಗುವ ವಿದೇಶೀಯ ಸರಕುಗಳ ಮೇಲೆ ಸುಂಕಗಳನ್ನು ವಿಧಿಸುವರು. ಈ ಸುಂಕಗಳನ್ನು ಒಟ್ಟಾಗಿ 'ಟಾರೀಫು' ಎಂದು ಕರೆಯುವರು. ಯಾವ ಯಾವ ವಿದೇಶೀಯ ಸರಕುಗಳ ಮೇಲೆ ಈ ಸುಂಕವನ್ನು ವಿಧಿಸಬೇಕೆಂಬುದನ್ನು ನಿರ್ಧರಿಸುವ ಬಗ್ಗೆ ಭಾರತದಲ್ಲಿ ಒಂದು 'ಟಾರೀಫು ಮಂಡಳಿ'ಯನ್ನು ನೇಮಕ ಮಾಡಿದ್ದಾರೆ. ಜಪಾನಿನಿಂದ ಬರುವ ರೇಶಿಮೆ, ಜಾವಾದಿಂದ ಬರುವ ಸಕ್ಕರೆ, ವಿಲಾಯತಿಯ ಬಟ್ಟೆ ಆಮದು ಸುಂಕವನ್ನು ತೆತ್ತೇ ನಮ್ಮ ದೇಶದ ಸರಹದ್ದಿನೊಳಗೆ ಪ್ರವೇಶಿಸಬೇಕು. ವಿದೇಶೀಯ ಸರಕುಗಳ ಬೆಲೆಯು ಸುಂಕದ ಮೊಬಲಗಿನಷ್ಟಾದರೂ ಹೆಚ್ಚುವುದು ಸ್ವಾಭಾವಿಕವಾದುದರಿಂದ ಸ್ವದೇಶದ ಸರಕುಗಳಿಗೆ ಅವುಗಳೊಡನೆ ಸ್ಪರ್ಧಿಸುವ ಶಕ್ತಿಯುಂಟಾಗುವುದು. ನಮ್ಮ ಉದ್ಯಮಗಳಿಗೆ ಪ್ರೋತ್ಸಾಹ ಸಿಗುವುದು.

ಟಾರೀಫಿನ ಉದ್ದೇಶವು ಸಾಧಿಸುವುದು. ನಮ್ಮ ದೇಶದ ಸರಕುಗಳು ರಫ
ಗುವಾಗಲೂ ರಫ್ತು ಸುಂಕವನ್ನು ತೆರಬೇಕಾಗಿ ಬರಬಹುದು. ಇಲ್ಲಿಯ
ಆದಾಯವೊಂದೇ ಮುಖ್ಯ ಉದ್ದೇಶವಾಗಿರಬೇಕಾಗಿಲ್ಲ. ಏಕೆಂದರೆ, ನವ
ದೇಶದೊಳಗಿನ ಉದ್ಯಮಗಳು ಬೆಳೆದು ನಮ್ಮಲ್ಲಿ ತಯಾರಾಗುವ ಸಣಬಿ
ಚೀಲಗಳು ನಮಗೇ ಹೆಚ್ಚಾಗಿ ಬೇಕಾಗುವ ಸಂದರ್ಭದಲ್ಲಿ ಸಣಬಿನ ಸರ
ಗಳು ರಫ್ತಾಗುವುದನ್ನು ತಡೆಯುವ ಹಾಗೆಯೂ ರಫ್ತು ಸುಂಕವನ್ನು ಹೇ
ಸಬಹುದು. ಸರಕುಗಳ ಬೆಲೆಯಲ್ಲಿ ಇಷ್ಟೆಂದೂ ಅಥವಾ ಪರಿಮಾಣದ
ಇಷ್ಟು ಅಂಶವೆಂದೂ ಆಮದುರಫ್ತಿನ ಸುಂಕವನ್ನು ಎರಡು ಬಗೆಯಾ
ವಿಧಿಸುವರು.

**ಅಬ್ಕಾರಿ ಸುಂಕ:**

ಪ್ರಜೆಗಳ ಆರೋಗ್ಯವನ್ನು ಹಾಳುಮಾಡುವ ಹೆಂಡ, ಸರಾಯಿ
ಬ್ರಾಂದಿ, ಅಫೀಮು, ಗಾಂಜಾ ಮುಂತಾದ ಮಾದಕ ದ್ರವ್ಯಗಳ ಮೇ
ಹೇರುವ ಸುಂಕಕ್ಕೆ ಅಬ್ಕಾರಿ ಸುಂಕವೆನ್ನುತ್ತಾರೆ. ಬಟ್ಟೆ, ಕಡ್ಡಿಪೊಟ್ಟ
ಸಕ್ಕರೆ, ಹೊಗೆಸೊಪ್ಪು ಮೊದಲಾದ ಕೆಲವು ಪದಾರ್ಥಗಳ ಮೇಲೆ ಆದಾ
ವನ್ನು ಹೆಚ್ಚಿಸಿಕೊಳ್ಳುವ ಉದ್ದೇಶದಿಂದಲೂ ಅಬ್ಕಾರಿ ಸುಂಕವನ್ನು ವಿ
ಸುವುದುಂಟು. ಸಕ್ಕರೆಯ ಮೇಲಿನ ಟಾರೀಫು ಚೆನ್ನಾಗಿ ಕೆಲಸಮಾ
ಪರದೇಶದಿಂದ ಸಕ್ಕರೆ ಬರುವುದು ತೀರ ಕಡಿಮೆಯಾಗಿ ಅಥವಾ ನಿಂತ
ಹೋದರೆ ಸರಕಾರದ ಆಯವು ಕಮ್ಮಿಯಾಗುವುದಿಲ್ಲವೆ? ಇದನ್ನು ಭರ
ಮಾಡಿಕೊಳ್ಳಲು ಸ್ವದೇಶದ ಸಕ್ಕರೆಯ ಮೇಲೆ ಅಬ್ಕಾರಿ ಸುಂಕವನ್ನು ಹೇ
ದರೆ ತಪ್ಪಿಲ್ಲ. ಏಕೆಂದರೆ ಟಾರೀಫಿನ ಉಪಕಾರ ಸ್ಮರಣೆಯನ್ನು ಸಕ್ಕರೆಯ
ಉದ್ಯಮವು ಕಾರ್ಯತಃ ತೋರಿಸಿ ಕೊಡಲೇಬೇಕು.

**ಅಂಗಡಿ ತೆರಿಗೆ:**

ಅಂಗಡಿ ತೆರಿಗೆ ಅಥವಾ ವ್ಯಾಪಾರ ತೆರಿಗೆಯು ಅನಾದಿಕಾಲದಿಂದಲ
ಇರುವ ಇನ್ನೊಂದು ತೆರಿಗೆ. ಪ್ರಾಚೀನ ಗ್ರೀಸ, ಐಗುಪ್ತ ಮತ್ತು ಮೌ
ಭಾರತಗಳಲ್ಲಿ ಪ್ರಚಲಿತವಾಗಿದ್ದ ಈ ತೆರಿಗೆಯನ್ನು ೧೯೧೬ರಲ್ಲಿ ಜರ್ಮನರ
ಪುನರುಜ್ಜೀವಿಸಿದರು. ಹಣದ ಅಡಚಣೆ ಇರುವ ಎಲ್ಲ ದೇಶಗಳೂ ಯು

ಕಾಲ ಶಾಂತಿಕಾಲ ಎಂಬ ಭೇದವಿಲ್ಲದೆ ಅಂಗಡಿ ತೆರಿಗೆಯನ್ನು ತಮ್ಮ ರಾಜಸ್ವದಲ್ಲಿ ಶಾಶ್ವತವಾಗಿ ಉಳಿಸಿಕೊಂಡಿವೆ. ಬ್ರಿಟಿಷ ಭಾರತದಲ್ಲಿ ಮಧ್ಯೆ ಪ್ರದೇಶದ ಸರಕಾರವು ಪೆಟ್ರೋಲ್ ಮತ್ತು ಲುಬ್ರಿಕೇಷನ್ ಎಣ್ಣೆಗಳ ಮೇಲೆ ಈ ತೆರಿಗೆಯನ್ನು ಹೇರಿದಾಗ ಕೇಂದ್ರ ಸರಕಾರವು ತನ್ನ ವಿರೋಧ ವನ್ನು ಸೂಚಿಸಿತು ಫೆಡರಲ್ ಕೋರ್ಟು ಮಧ್ಯಪ್ರದೇಶಕ್ಕೆ ಅನುಕೂಲ ವಾದ ತೀರ್ಮಾನವನ್ನು ಕೊಟ್ಟುದರಿಂದ ಆ ಮೇಲೆ ಮದರಾಸು, ಮುಂ ಬಯಿ ಹೀಗೆ ಅನೇಕ ರಾಜ್ಯಗಳಲ್ಲಿ ಅಂಗಡಿ ತೆರಿಗೆಯು ಪ್ರಚಾರಕ್ಕೆ ಬರಲು ಸುಲಭವಾಯಿತು. ಜನರು ತೀರಾ ದ್ವೇಷಿಸುವ ತೆರಿಗೆ ಎಂದರೆ ಇದು. ಏಕೆಂದರೆ, ಈ ತೆರಿಗೆ ಜೀವನಾವಶ್ಯಕವಾದ ಪದಾರ್ಥಗಳ ಮೇಲೆ ಹೆಚ್ಚಾಗಿ ಬೀಳುವುದು ಮಾತ್ರವಲ್ಲ ಅತಿ ಪ್ರಸರಣದ ಈ ಕಾಲದಲ್ಲಿ ಒಂದಕ್ಕೆ ನಾಲ್ಕು, ಆರು ಪಟ್ಟು ಬೆಲೆ ಕೊಟ್ಟು ಸರಕುಗಳನ್ನು ಕೊಳ್ಳುವಾಗ ಅದೇ ಪ್ರಮಾಣದಲ್ಲಿ ರುಪಾಯಿಗೊಂದೆರಡು ಬಿಡಿಕಾಸು ಬೇರೆ ವಸೂಲು ಮಾಡುವ ಸರಕಾರವನ್ನು ಪ್ರಜೆಗಳು ನಿಷ್ಕರುಣಿ ಎಂದು ಭಾವಿಸುವುದು ಸಹಜ. ಆದರೆ ಪಾನಪ್ರತಿಬಂಧದ ಉನ್ನತ ಸಾಮಾಜಿಕ ಶಾಸನದಿಂದ ಕೋಟ್ಯಂತರ ರುಪಾಯಿಗಳನ್ನು ರಾಜಸ್ವಕ್ಕೆ ನಷ್ಟ ಮಾಡಿಕೊಂಡ ಯಾವ ಸರಕಾರವೂ ಅಂಗಡಿ ತೆರಿಗೆಯನ್ನು ಬಿಟ್ಟು ಬದುಕುವಂತಿಲ್ಲ. ಒಂದೇ ಸರ ಕಿನ ಮೇಲೆ ಮೂರು ನಾಲ್ಕು ಸಲ ವ್ಯಾಪಾರ ತೆರಿಗೆಯು ಹೇರಲ್ಪಟ್ಟು ಕೊನೆಯ ಗಿರಾಕಿಯು ಎಲ್ಲ ದಂಡವನ್ನೂ ಸೇರಿಸಿ ತೆರಬೇಕಾದ ಸಂದರ್ಭ ವಿರುವುದರಿಂದ ಈ ತೆರಿಗೆಯ ಅನ್ಯಾಯವು ಇಮ್ಮಡಿಸುವುದು.

**ಭಾರತೀಯ ರಾಜಸ್ವದ ಲಕ್ಷಣಗಳು:**

ಭಾರತೀಯ ರಾಜಸ್ವದ ಆಯದ ಪಾರ್ಶ್ವವನ್ನು ನೋಡಿದರೆ ಕೆಳಗೆ ಕಂಡ ಲಕ್ಷಣಗಳು ಕಾಣಿಸುವುವು:— (೧) ತೆರಿಗೆಯ ಪದ್ಧತಿಯನ್ನು ಒಟ್ಟಾಗಿ ಗ್ರಹಿಸುವಾಗ ಅದು ಪ್ರತಿಗಾಮಿಯಾಗಿರುವುದು ಗೋಚರವಾಗು ತ್ತದೆ. ಪ್ರಗತಿಶೀಲವಾದ ವರಮಾನದ ತೆರಿಗೆ, ಸುಪರ್ ಟ್ಯಾಕ್ಸ್ ಮತ್ತು ಅಧಿಕಲಾಭದ ತೆರಿಗೆಗಳು ಆಯದಲ್ಲಿ ಕೇವಲ ಸ್ವಲ್ಪಾಂಶವಾಗಿರುವುವು. ಆಸ್ತಿಗಳ ಮೇಲಿನ ತೆರಿಗೆಯಿಂದ ಆಯದ ೧೮% ದೊರೆಯುವುದು. ಇದರಲ್ಲಿ

೧೨% ಭೂಕಂದಾಯದಿಂದ ವಸೂಲಾಗುವುದು. (೨) ಕೇಂದ್ರದ ಆದಾಯವು ಮುಖ್ಯವಾಗಿ ಸುಂಕಗಳಿಂದಲೂ (೩೫%) ರೈಲ್ವೇಯಿಂದಲೂ (೨೭%) ಬರುವುದು. ವರಮಾನದ ತೆರಿಗೆ ೬%, ಉಪ್ಪು ೮% (ಸ್ವಾತಂತ್ರ್ಯಪೂರ್ವದಲ್ಲಿ) ಅಬ್ಕಾರಿ ೬%, ಇತರ ೧೩% — ಈ ಅಂಕೆಗಳನ್ನು ಪರಿಶೀಲಿಸುವಾಗ ಕೇಂದ್ರ ಸರಕಾರವು ಮುಖ್ಯವಾಗಿ ಪರೋಕ್ಷ ತೆರಿಗೆಗಳನ್ನು ನಂಬಿದೆ ಎಂದು ತಿಳಿಯುವುದು. ರೈಲ್ವೇಯಿಂದ ಬರುವ ಆದಾಯದ ಒಂದಂಶವನ್ನು ಸಾಮಾನ್ಯ ಆದಾಯ ಖಾತೆಗೆ ಸೇರಿಸುವ ಕ್ರಮವು ೧೯೨೪ರಿಂದ ರೂಢಿಯಲ್ಲಿದೆ. (೩) ಪ್ರಾಂತಿಕ ಅಥವಾ ರಾಜ್ಯಗಳ ಆದಾಯಕ್ಕೆ ಆಸ್ತಿ ತೆರಿಗೆಯೂ (೩೬%) ಅಬ್ಕಾರಿ ಸುಂಕವೂ (೧೭%) ಸ್ಟಾಂಪುಗಳೂ (೧೨%) ನೀರಾವರಿಯೂ (೧೧%) ಸಣಬಿನ ನಿರ್ಯಾತಕರದ ಪಾಲೂ (೩%) ವರಮಾನದ ತೆರಿಗೆಯಲ್ಲಿ ರಾಜ್ಯಗಳಿಗೆ ಕೇಂದ್ರವು ಕೊಡುವ ಪಾಲೂ (೧%), ಇತರ (೧೬%), ಕೇಂದ್ರದಿಂದ ಸಿಗುವ ಸಹಾಯಧನವೂ (೪%) ಕಾರಣವಾಗಿವೆ. (೪) ಸ್ಥಾನಿಕ ಸಂಸ್ಥೆಗಳ ಆದಾಯದಲ್ಲಿ $\frac{1}{2}$ ಭಾಗವು ಆಸ್ತಿಗಳಿಂದಲೂ, ಮತ್ತು $\frac{1}{4}$ ಅಂಶವು ಅನುಭೋಗದ ಸರಕುಗಳ ಮೇಲಿನ ತೆರಿಗೆಯಿಂದಲೂ ಬರುವುವು.

**ಕೇಂದ್ರ ಸರಕಾರದ ಆಯವ್ಯಯ:**

೧೯೪೯ನೆಯ ಮಾರ್ಚ ೩೧ಕ್ಕೆ ಅಂತ್ಯವಾಗುವ ಆರ್ಥಿಕ ವರ್ಷದಲ್ಲಿ ಭಾರತ ಸರಕಾರವು ಹೆಚ್ಚು ಉತ್ಪಾದನೆಗೆ ಪ್ರೋತ್ಸಾಹ ಕೊಡಬೇಕೆಂದೂ, ಅತಿ ಪ್ರಸರಣವನ್ನು ಪ್ರತಿಭಟಿಸಬೇಕೆಂದೂ, ಜನರ ವ್ಯಯ ಶಕ್ತಿಯನ್ನು ಕುಗ್ಗಿಸಬೇಕೆಂದೂ, ಅಲ್ಲದೆ ಅನಗತ್ಯ ಸರಕುಗಳ ಆಯಾತವನ್ನು ಕುಗ್ಗಿಸಿ ಅಗತ್ಯವಾದುವನ್ನು ಹಿಗ್ಗಿಸಬೇಕೆಂದೂ ಬಯಸಿ, ಈ ಉದ್ದೇಶಗಳಿಗೆ ತಕ್ಕುದಾದ ಧೋರಣೆಯನ್ನು ಹಾಕಿಕೊಂಡಿತು. ಸರಾಯಿ, ಹೊಗೆಸೊಪ್ಪು, ಮೋಟಾರು, ರೇಶಿಮೆ, ಕೃತಗ ರೇಶಿಮೆಗಳ ಮೇಲಿನ ಸುಂಕವನ್ನು ಏರಿಸಿ, ಉಚ್ಚ ತರದ ಬಟ್ಟೆಯ ಮೇಲೆ ಅಬ್ಕಾರಿಯನ್ನು ವಿಧಿಸಿತು. ಯಂತ್ರ ಮತ್ತು ಔದ್ಯಮಿಕ ಕಚ್ಚಾ ಮಾಲುಗಳನ್ನು ಆಮದು ಮಾಡುವಾಗ ಕೊಡಬೇಕಾಗಿದ್ದ ಕರವನ್ನು ರದ್ದು ಮಾಡಿತು. ಹಿಂದಿನ ವರ್ಷದ ಆದಾಯದ ಮೇಲೆ ವರಮಾನದ ತೆರಿಗೆ ವಿಧಿಸುವ ಕ್ರಮವನ್ನು ತ್ಯಜಿಸಿ, ಚಾಲ್ತಿ ವರ್ಷದ

ನಿರೀಕ್ಷಿತ ವರಮಾನದ ಮೇಲೆ ತೆರಿಗೆ ನಿಷ್ಕರ್ಷೆಮಾಡುವ ಪದ್ಧತಿಯನ್ನು ಜಾರಿ ಮಾಡಿತು ಕಂಪೆನಿಗಳು ಷೆಯರುದಾರರಿಗೆ ಕೊಡುವ ಲಾಭಾಂಶಕ್ಕೆ ಒಂದು ಮಿತಿಯನ್ನು ನಿರ್ಣಯಿಸಿತು. ಉದ್ದಿಮೆಗಳ ಮೇಲಿನ ಹಲವಾರು ತೆರಿಗೆಗಳನ್ನಿಳಿಸಿ ಅವುಗಳಿಗೆ ಉತ್ತೇಜನೆ ಕೊಡುವ ಯತ್ನ ನಡೆಯಿಸಿತು.

(ಕೋಟಿ ರುಪಾಯಿ)

| | ೧೯೪೮-೪೯ | ೧೯೪೯-೫೦ | ೧೯೫೦-೫೧ |
|---|---|---|---|
| **A. ವ್ಯಯ** | | | |
| ೧. ರೆವಿನ್ಯೂ ವಹಿಯ ವ್ಯಯ: | | | |
| ಸಂರಕ್ಷಣೆ (ನಿವ್ವಳ) | ೧೪೬.೦೫ | ೧೭೦.೦೬ | ೧೬೮.೦೧ |
| ಸಾಲ (ಒಟ್ಟು) | ೬೩.೦೨ | ೬೩.೪೬ | ೬೫.೧೮ |
| ಸರ್ವಜನೋಪಯೋಗಿ ಸಂಸ್ಥೆಗಳಿಂದಲೂ, ರಾಜ್ಯಗಳಿಂದಲೂ ವರ್ಗಾಯಿಸಲ್ಪಟ್ಟ ಮೊಬಲಗನ್ನು ಕಳೆದರೆ .. | −೨೫.೪೯ | −೨೯.೬೨ | −೩೩.೬೮ |
| ಸಾಲದ ಬಡ್ಡಿ (ನಿವ್ವಳ) | ೩೭.೫೩ | ೩೩.೮೧ | ೫೧.೫೦ |
| ಸಾಮಾಜಿಕ ಕಾರ್ಯಗಳು | ೩.೨೭ | ೩.೩೧ | ೪.೧೮ |
| ವಿಭಜನಾಪೂರ್ವದ ಪಾವತಿಗಳು | ೧೮.೮೩ | ೬ ೬೦ | ೨.೦೦ |
| ಸಾಲ ಪರಿಹಾರಕ್ಕೆ | ೫.೦೦ | ೫.೦೦ | ೫.೦೦ |
| ಇತರ | ೧೧೨.೧೮ | ೧೧೭.೩೨ | ೧೨೮.೧೯ |
| ೨. ಬಂಡವಾಳ ವ್ಯಯ: | | | |
| (a) ಬಂಡವಾಳ ವೆಚ್ಚಗಳು | | | |
| (1) ನಿಜವಾದ ಬಂಡವಾಳ ವೆಚ್ಚಗಳು | | | |
| ಔದ್ಯಮಿಕ ಅಭಿವೃದ್ಧಿ | ೭.೩೩ | ೧೩.೧೫ | ೯.೬ |
| ಪಬ್ಲಿಕವರ್ಕ್ಸ ಮತ್ತು ನೀರಾವರಿ | ೩.೯೮ | ೬.೮೦ | ೭.೫ |
| ರಾಜ್ಯಗಳಿಗೆ ಕೊಟ್ಟ ಸಹಾಯ ಧನ: | | | |
| ಅಭಿವೃದ್ಧಿ ಯೋಜನೆಗಳಿಗೋಸ್ಕರ | ೧೪.೭೬ | ೨೪.೧೨ | ೯.೫ |

| | | | |
|---|---|---|---|
| ರಾಷ್ಟ್ರವೇ ವ್ಯಾಪಾರ ಮಾಡುವ ಯೋಜನೆಗಳಿಗೆ | ೧೫ · ೨೧ | ೬ · ೩೩ | ೭ · ೩೭ |
| ಇತರ (ಮುಖ್ಯವಾಗಿ ಸಾರ್ವಜನಿಕ ಕಾರ್ಯಕಲಾಪಗಳಿಗೆ) | ೪೪ · ೯೬ | ೨೯ · ೫೬ | ೩೩ · ೦೪ |
| | ೫೫ · ೮೨ | ೭೯ · ೯೬ | ೬೭ · ೨೨ |
| (ii) ಸ್ಟರ್ಲಿಂಗ ಪೆನ್ಶನುಗಳ ಮೇಲಿನ ಬಂಡವಾಳ ವೆಚ್ಚ | ೨೧೪ · ೫೦ | —೭ · ೪೨ | —೭ · ೩೭ |
| (iii) ಸಂರಕ್ಷಣೆಗೆ | ೨೮ · ೮೮ | ೧೨ ೦೦ | ೮ · ೧೫ |
| (iv) ಮಿಕ್ಕುಳಿದ ಯುದ್ಧ ವಸ್ತು ಗಳನ್ನು ಕೊಂಡದ್ದು/ಮಾರಿದ್ದು | ೧೩೩ · ೩೩ | | |
| | —೨೯ · ೫೨ | —೯ · ೬೦ | —೬ · ೦೦ |
| (v) ನಾಣ್ಯ ನೋಟುಗಳ ಮೇಲಿನ ಬಂಡವಾಳ ವ್ಯಯ | ೫ · ೯೩ | ೭೯ · ೧೨ | .... |
| ಒಟ್ಟು ಬಂಡವಾಳ ವ್ಯಯ | ೪೦೮ · ೯೯ | ೧೫೪ · ೦೬ | ೬೨ · ೦೦ |
| (b) ಸಾಲ ಮತ್ತು ಮುಂಗಡ (ನಿವ್ವಳ) | ೨೮ · ೬೬ | ೫೮ · ೦೩ | ೨೮ · ೨೫ |
| ಒಟ್ಟು ಜುಮ್ಲಾ .... | ೪೩೭ · ೬೫ | ೨೧೨ · ೦೯ | ೯೦ · ೨೫ |

## B. ಆಯ

೧. ಪ್ರತ್ಯಕ್ಷ ತೆರಿಗೆಗಳು:

| | | | |
|---|---|---|---|
| ವರಮಾನಗಳ ಮೇಲಿನ ತೆರಿಗೆಗಳಿಂದ | ೭೭ · ೭೧ | ೬೨ · ೬೬ | ೮೧ · ೭೬ |
| ಕೊರ್ಪೊರೇಷನ್ ತೆರಿಗೆಗಳಿಂದ | ೬೨ · ೨೬ | ೪೦ · ೬೦ | ೩೮ · ೧೦ |
| ಒಟ್ಟು ಪ್ರತ್ಯಕ್ಷ ತೆರಿಗೆಗಳಿಂದ .... | ೧೩೯ · ೯೭ | ೧೦೩ · ೨೬ | ೧೭೯ · ೫೫ |

೨. ಪರೋಕ್ಷ ತೆರಿಗೆಗಳು

| | | | |
|---|---|---|---|
| ಸುಂಕಗಳು | ೧೨೬ · ೧೬ | ೧೨೦ · ೪೩ | ೧೦೬ · ೫೪ |
| ಇತರ | ೫೫ · ೩೭ | ೭೫ · ೧೮ | ೮೦ · ೦೭ |
| ಒಟ್ಟು ಪರೋಕ್ಷ ತೆರಿಗೆಗಳು .... | ೧೮೧ · ೫೩ | ೧೯೫ · ೬೧ | ೧೮೬ · ೬೧ |

| | | | |
|---|---|---|---|
| ತೆರಿಗೆಗಳಿಂದ ಬಂದ ಒಟ್ಟು ಆದಾಯ | ೩೨೧·೫೦ | ೨೯೮·೮೭ | ೩೦೬·೧೬ |
| ರೈಲ್ವೇ, ಅಂಚೆ, ತಂತಿ(ನಿವ್ವಳ) | ೯·೭೦ | ೧೦·೭೭ | ೧೦·೮೫ |
| ಇತರ ಆದಾಯ | ೪೦·೫೦ | ೨೨·೭೩ | ೨೨.೧೮ |
| | ೩೭೧·೭೦ | ೩೩೨·೩೪ | ೩೩೯·೧೯ |

## ರಾಜ್ಯ ಸರಕಾರದ ಆಯುವ್ಯಯು:

ಮದರಾಸು ರಾಜ್ಯದ ರೆವಿನ್ಯೂ ಎಕೌಂಟಿನ ಮೇಲಿನ ಆಯು:

(ಲಕ್ಷ ರುಪಾಯಿ)

| ಶೀರ್ಷಿಕೆ | ೧೯೪೯ – ೫೦ | ೧೯೫೦ – ೫೧ |
|---|---|---|
| ಕಾರ್ಪೊರೇಷನ್ ತೆರಿಗೆಯಲ್ಲದ ಇತರ ಆದಾಯ ತೆರಿಗೆ | ೮೨೦ . ೦೦ | ೮೨೦ · ೦೦ |
| ಭೂಕಂದಾಯ | ೫೦೯ · ೮೩ | ೫೭೨ · ೫೦ |
| ಸ್ಟ್ಯಾಂಪುಗಳು | ೪೨೬ · ೩೩ | ೪೨೬ · ೯೦ |
| ಪ್ರಾಂತೀಯ ಅಬ್ಕಾರಿ | ೪೬ · ೪೨ | ೩೨ · ೦೯ |
| ಅಡಿವೆಗಳು | ೧೭೪ · ೭೦ | ೧೭೫ · ೦೦ |
| ರಿಜಿಸ್ಟ್ರೇಷನು | ೮೯ · ೩೬ | ೮೯ · ೮೮ |
| ಮೋಟಾರು ಗಾಡಿಗಳ ಚಟ್ಟದಿಂದ ಬರುವ ಆದಾಯ | ೨೭೫ · ೦೦ | ೨೯೫ · ೦೦ |
| ಮಿಕ್ಕ ತೆರಿಗೆ ಮತ್ತು ಸುಂಕಗಳು | ೧೮೨೯ · ೭೯ | ೧೭೭೯ · ೦೨ |
| ನೀರಿನ ಸರಬರಾಯಿ | ೧೮೧ · ೭೮ | ೧೯೬ · ೩೧ |
| ಮಿಕ್ಕ ಎಕೌಂಟ್ ಶೀರ್ಷಿಕೆ | ೩೬೦ · ೪೭ | ೩೮೨ · ೮೯ |
| ಪರಿಶ್ರಮಗಳು | ೯೩ · ೯೩ | ೧೩೨ · ೮೩ |
| ಸಿವಿಲ್ ವರ್ಕ್ಸ್ | ೪೧ · ೨೪ | ೯೪ · ೪೯ |
| ವಿವಿಧ ಶಾಖೆಗಳು | ೨೨ · ೨೪ | ೨೧ · ೦೪ |
| ವಿದ್ಯುದ್ಯೋಜನೆಗಳು | ೧೨೪ · ೭೦ | ೧೫೮ · ೦೮ |
| ವಿವಿಧ ಆದಾಯಗಳು | ೧೨೩ · ೧೪ | ೧೨೦ · ೬೬ |

| | | |
|---|---|---|
| ವಿಶೇಷ ಆದಾಯಗಳು | ೫೩೨·೩೭ | ೨೨೪·೫೬ |
| | ೫೬೯೧·೩೦ | ೫೫೨೧·೨೫ |

## ವ್ಯಯ:

(ಲಕ್ಷ ರುಪಾಯಿ)

| ಶೀರ್ಷಿಕೆ | ೧೯೪೮–೪೯ | ೧೯೪೯–೫೦ |
|---|---|---|
| ಮೋಟಾರು ಗಾಡಿಗಳ ಚಟ್ಟದ ದೆಸೆಯಿಂದ ಒದಗಿದ ಛಾರ್ಜುಗಳು | ೧೦೧·೬೭ | ೯೬.೨೬ |
| ಇತರ ತೆರಿಗೆ ಮತ್ತು ಸುಂಕಗಳು | ೧೧೯·೪೭ | ೧೩೮·೦೩ |
| ನೀರಿನ ಸರಬರಾಯಿ | ೨೫೧·೭೯ | ೩೨೧·೧೦ |
| ಋಣನಿವಾರಣೆಗಾಗಿ ಅಥವಾ ಸಾಲಗಳನ್ನು ತಗ್ಗಿಸುವ ನಿಮಿತ್ತ ಬೇರೆಯಿಟ್ಟ ಹಣ | ೬೯·೬೮ | ೭೫·೫೦ |
| ಪರಿಪಾಲನೆ | ೫೮೨·೦೫ | ೫೮೯·೪೧ |
| ನ್ಯಾಯ ಪರಿಪಾಲನ | ೧೫೦·೦೩ | ೧೫೩·೦೭ |
| ಜೈಲುಗಳು ಮತ್ತು ಶಿಕ್ಷಿಸಲ್ಪಟ್ಟವರಿಗಾಗಿ ಕೆಲಸಗಳು | ೧೧೦·೨೨ | ೧೧೨·೨೦ |
| ಪೋಲೀಸ್ | ೬೫೧·೯೭ | ೬೨೭.೪೨ |
| ವಿದ್ಯೆ | ೮೮೫·೯೩ | ೯೫೧·೬೧ |
| ವೈದ್ಯಕೀಯ | ೨೭೬.೫೪ | ೨೭೯·೫೪ |
| ಆರೋಗ್ಯ | ೯೦·೫೪ | ೧೦೬·೫೬ |
| ವ್ಯವಸಾಯ | ೧೨೬·೭೪ | ೨೪೦·೮೯ |
| ವೆಟರಿನರಿ | ೪೦·೫೮ | ೪೭·೩೬ |
| ಸಹಕಾರ | ೫೩·೪೧ | ೭೮·೭೭ |
| ಪರಿಶ್ರಮಗಳು ಮತ್ತು ಸರಬರಾಯಿ | ೧೨೦·೩೬ | ೧೫೮·೦೬ |
| ವಿವಿಧ ಶಾಖೆಗಳು | ೧೧೫·೫೫ | ೧೩೪·೪೩ |

| | | |
|---|---|---|
| ಪ್ರಜೋಪಯೋಗಿ ಕಾರ್ಯಗಳು | ೫೭೮ · ೮೪ | ೭೪೦ · ೨೬ |
| ವಿದ್ಯುದ್ಯೋಜನೆಗಳ ಖರ್ಚು | ೬೭ · ೦೩ | ೮೯ · ೦೮ |
| ಸೂಪರಾನ್ಯುವೇಷನ್ ಅಲೊವೆನ್ಸ್ ಮತ್ತು ಪೆನ್ಶನ್‌ಗಳು | ೧೬೦ · ೭೩ | ೧೬೭ · ೩೧ |
| ಸ್ಟೇಷನರಿ ಸಾಮಾನುಗಳು ಮತ್ತು ಮುದ್ರಣ | ೭೧ · ೯೮ | ೯೩ · ೫೩ |
| ವಿಶೇಷ ತರಗತಿಯ ಛಾರ್ಜುಗಳು | ೨೮೨ · ೨೪ | ೧೦೭ · ೨೩ |
| ಪುರಜನ ರಕ್ಷಣೆ | ೧ · ೧೭ | · ೮೧ |
| ಮಿಕ್ಕ ಶೀರ್ಷಿಕೆಗಳಲ್ಲಿಯ ಲೆಕ್ಕ | ೪೧೪ · ೯೦ | ೨೩೯ · ೮೪ |
| ಒಟ್ಟು | ೫೮೩೩ · ೪೨ | ೫೬೩೮ · ೧೭ |

# ಸಮಾಜವಾದಿ ಅರ್ಥಮಂಡಲ

## ಉದಾರವಾದದ ಅಂತ್ಯ:

೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಉದಾರವಾದದ ತತ್ತ್ವದ ಕುರಿತೂ, ಅದರ ವಾಸ್ತವಿಕ ಕಾರ್ಯಕ್ರಮದ ಕುರಿತೂ ಬಹು ದೀರ್ಘ ಚರ್ಚೆ ನಡೆಯಿತು. ೧೮೪೮ರಿಂದ ವಿಲಾಯತಿಯಲ್ಲಿ ಶ್ರಮಜೀವಿಗಳು ಪ್ರಾಬಲ್ಯಕ್ಕೆ ಬಂದರು. ಅವರ ಜತೆಗೆ ಮಾರ್ಕ್ಸ್‌ವಾದವು ತಲೆ ಎತ್ತಿತು. "ಬಹುಮತದ ಬಹುಹಿತ"ವನ್ನು ಸಾಧಿಸುವ ಪ್ರತಿಜ್ಞೆಯನ್ನು ತೊಟ್ಟ ಉದಾರವಾದದ ಮೇಲೆ ಬಂಡವಾಳಗಾರರ ಜಾಲದಲ್ಲಿ ಹೊಯ್ದಾಡುತ್ತಿದ್ದ ಶ್ರಮಜೀವಿಗಳ ತಂಡವು ಜುಗುಪ್ಸೆಪಟ್ಟು, ಬಂಡವಾಳಶಾಹಿಯಿಂದ ತಮ್ಮನ್ನು ಮುಕ್ತಗೊಳಿಸುವ ಆಸೆ ಹುಟ್ಟಿಸಿದ ಮಾರ್ಕ್ಸ್‌ವಾದದ ಬೆನ್ನು ಹಿಡಿದು ನಡೆಯಲುಪಕ್ರಮಿಸಿತು. ಬೆಂಥಾಮ, ಮಿಲ್, ಸ್ಪೆನ್ಸರ್ ಮುಂತಾದ ತಾತ್ತ್ವಿಕರ ಆದರ್ಶಗಳೂ, ಸಮಾಜ ರಚನೆಯ ಸಿದ್ಧಾಂತಗಳೂ ಹಳಸಿಹೋದುದರಿಂದ ಯುರೋಪಿನ ಔದ್ಯಮಿಕ ಜನಾಂಗಗಳು ಹೊಸ ದಾರಿಯನ್ನು ತುಳಿಯಬೇಕಾಯಿತು. ರೂಢಮೂಲವಾದ ಸಂಪ್ರದಾಯವಾದದ ಕಡೆಗೂ ಒಲಿಯದೆ, ಸಮಾಜವಾದದ ಕಡೆಗೂ ಸುಳಿಯದೆ ನಡುವೆ ಸ್ಥಾಪನೆಯಾಗಲು ಎಳಸಿದ ಉದಾರವಾದವು ಈ ರೀತಿ ತ್ರಿಶಂಕುವಾಯಿತು.

## ಮಾರ್ಕ್ಸ್‌ವಾದದ ಸ್ಫೂರ್ತಿ:

ಸಮಾಜವಾದಿ ಅರ್ಥಶಾಸ್ತ್ರಕ್ಕೆ ಮಾರ್ಕ್ಸ್‌ನ ತತ್ತ್ವಗಳು ಬುನಾದಿಯಾದರೆ ಮಾರ್ಕ್ಸ್‌ವಾದಕ್ಕೆ ಐತಿಹಾಸಿಕ ಪ್ರೇರಣೆಯೇ ಮೂಲವೆನ್ನಬೇಕು. ಮಾರ್ಕ್ಸ್‌ವಾದದಲ್ಲಿ ಇತಿಹಾಸದ ಅವಲೋಕನವನ್ನೂ, ಅರ್ಥಮಂಡಲದ ವಿಶ್ಲೇಷಣೆಯನ್ನೂ ಬೇರ್ಪಡಿಸುವುದು ಕಷ್ಟ. ೧೮ನೆಯ ಶತಮಾನದ ಫ್ರೆಂಚ ರಾಜ್ಯಕ್ರಾಂತಿಯು ಮಧ್ಯಮವರ್ಗವನ್ನುದ್ಧರಿಸಿತೆಂದೂ, ಆದರೆ

ಕಾಲಕ್ರಮೇಣ ಈ ಮಧ್ಯಮವರ್ಗದ ಬೂರ್ಜುವಾ ಸಮಾಜವು ಔದ್ಯಮಿಕ ಪ್ರಗತಿಯ ಪಥದಲ್ಲಿ ನಡೆದುಕೊಂಡು ಬಂಡವಾಳವನ್ನು ಸಂಚಯನಮಾಡಿ ಅಪಾರವಾಗಿ ಬೆಳೆಯುತ್ತಿದ್ದ ಶ್ರಮಜೀವಿಗಳ ಕೋಟಲೆಯಾಗಿ ಪರಿಣಮಿಸಿ ತೆಂದೂ ಮಾರ್ಕ್ಸ್ ಹೇಳುತ್ತಾನೆ. ಅಂದು ನಡೆದ ಬೂರ್ಜುವಾ ಕ್ರಾಂತಿಯಂತೆ ಇಂದು ಶ್ರಮಜೀವಿಗಳು ಬಂಡವಾಳಗಾರರ ಮೇಲೆ ಬಂಡಾಯವೇಳುವುದು ಸ್ವತಃ ಸಿದ್ಧವೆಂದು ಹೇಳಿ ಮಾರ್ಕ್ಸ್‌ನು ವರ್ಗಕಲಹದ ಸೂಚನೆಯನ್ನು ಕೊಟ್ಟಿರುತ್ತಾನೆ. ಹೀಗೆ ಇತಿಹಾಸವನ್ನೂ ಅರ್ಥಶಾಸ್ತ್ರವನ್ನೂ ಸಮನ್ವಯಗೊಳಿಸಿ ಮಾರ್ಕ್ಸ್‌ನು ೧೯ನೆಯ ಶತಮಾನದ ಸಮಾಜಶಾಸ್ತ್ರಜ್ಞರಲ್ಲಿ ಅಗ್ರಗಣ್ಯನಾದನು. ಅವನು ಇತಿಹಾಸದಲ್ಲಿ ಅರ್ಥಶಾಸ್ತ್ರಕ್ಕಿರುವ ಮಹತ್ತ್ವವನ್ನು ಕೊಂಚ ಅತಿರೇಕವಾಗಿ ಬಣ್ಣಿಸಿದರೂ ಅದು ನಮಗೆ ಮುಖ್ಯವಲ್ಲ. ತಂತ್ರನೈಪುಣ್ಯ, ಸಂಚಾರಸಾರಿಗೆಯ ಸೌಕರ್ಯ, ಕಚ್ಚಾಮಾಲಿನ ಪೂರೈಕೆ, ಸಂಪತ್ತಿನ ವಿತರಣೆ, ಹಣಕಾಸಿನ ರಚನೆ, ಸಮಾಜದಲ್ಲಿ ವರ್ಗಗಳ ಸೃಷ್ಟಿ, ಇದರಿಂದ ಪ್ರಚೋದಿತವಾಗುವ ಶಾಸನ, ನೀತಿ, ಸಮಾಜದ ಕುರಿತ ಆದರ್ಶಗಳು ಮುಂತಾದ ಆರ್ಥಿಕ ಶಕ್ತಿವಿಶೇಷಗಳನ್ನು ಬೆಳಕಿಗೆ ತಂದು ಮಾರ್ಕ್ಸ್‌ನು ಪ್ರಪಂಚಕ್ಕೆ ಧಾರಾಳ ಉಪಕಾರಮಾಡಿರುವನು. ನಿಯತಕಾಲಿಕವಾಗಿ ಪ್ರಕಟವಾಗುವ ವ್ಯಾಪಾರದ ದುಃಸ್ಥಿತಿ, ಆರ್ಥಿಕ ಅಭ್ಯುದಯಕಾಲದಲ್ಲೂ ಜನಾಂಗದಲ್ಲಿರುವ ತಾಂತ್ರಿಕ ನಿರುದ್ಯೋಗ, ಯಂತ್ರ ಪ್ರಾಬಲ್ಯದ ದೆಸೆಯಿಂದ ಗುಡಿಕೈಗಾರಿಕೆ ಮತ್ತು ಕುಶಲ ಕಲೆಗಳ ವಿನಾಶ, ನಿಪುಣರಾದ ಕೂಲಿಕಾರರ ಬದಲು ಯಂತ್ರಸಮಾನವಾದ ಕೂಲಿಕಾರವರ್ಗದ ನಿರ್ಮಾಣ, ಕೆಟ್ಟ ವಾತಾವರಣದಲ್ಲಿ ಬದುಕಿ ಬಾಳುವ ಕೂಲಿಕಾರ ಸಮುದಾಯದ ಆರೋಗ್ಯಹನನ—ಇವು ಬಂಡವಾಳಶಾಹಿಯ ಭಾರೀ ದೋಷಗಳಾಗಿದ್ದು ಮಾನವ ಸಮಾಜದ ಜೀವಸತ್ತ್ವವನ್ನು ಕಬಳಿಸಲು ಒಂದೊಂದೇ ಸಾಕೆಂಬ ತೀರ್ಮಾನಕ್ಕೂ, ಇಡಿ ಜನಾಂಗದ ಹಿತಸಾಧನೆಗಾಗಿ ಪರೋಪಜೀವಿ ಬಂಡವಾಳಗಾರ ವರ್ಗದ ಕೈಯಿಂದ ಆರ್ಥಿಕ ಶಕ್ತಿಯನ್ನು ಸೂರೆಮಾಡದೆ ಶ್ರಮಜೀವಿವರ್ಗ ಮತ್ತು ತನ್ಮೂಲಕ ಮಾನವ ಜನಾಂಗಕ್ಕೆ ಉದ್ಧಾರವಿಲ್ಲ ಎಂಬ ನೆಲೆಗೂ ಮಾರ್ಕ್ಸ್‌ವಾದವು ನಮ್ಮನ್ನು ಒಯ್ದು ನಿಲ್ಲಿಸುತ್ತದೆ.

**ಮಾರ್ಕ್ಸ ಮತ್ತು ಮೌಲ್ಯ:**

ನಾವು ಈ ಹಿಂದಿನ ೧೪ ಅಧ್ಯಾಯಗಳಲ್ಲಿ ಚರ್ಚಿಸಿದ ಮೇಲಾಟದ ಸಮಾಜದಲ್ಲಿ ಬೇಡಿಕೆಗೂ ಧಾರಣೆಗೂ ಇರುವ ಮಹತ್ತ್ವವನ್ನು ಸದ್ಯ ಬಿಟ್ಟುಕೊಡಬೇಕು. ಮಾರ್ಕ್ಸನ ಮೌಲ್ಯಸಿದ್ಧಾಂತವು ಧಾರಣೆಯ ಸಿದ್ಧಾಂತವಲ್ಲ, ಬಂಡವಾಳಗಾರರ ದರೋಡೆಯ ಕ್ರಮದ ವಿಶ್ಲೇಷಣೆಯಾಗಿರುತ್ತದೆ. ಆದುದರಿಂದ ಅದು ಬಂಡವಾಳಗಾರ ಸಮಾಜಕ್ಕೆ ಮಾತ್ರ ಅನ್ವಯಿಸುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಇದರಿಂದ ಮಾರ್ಕ್ಸವಾದಕ್ಕೆ ಹೀನಾಯವಿಲ್ಲ. ಪ್ರತಿಯೊಂದು ಆರ್ಥಿಕ ತತ್ತ್ವವೂ ವಸ್ತುಪರವಾದ ಸನ್ನಿವೇಶಗಳನ್ನು ಬಿಟ್ಟಿರಲಾರದು ಎಂಬುದು ಮಾರ್ಕ್ಸನ ಅಭಿಪ್ರಾಯವಾಗಿದೆ. ಅವನ ಮೌಲ್ಯ ಸಿದ್ಧಾಂತಕ್ಕೆ ಒಂದು ಮಿತಿ ಇದೆ. ಮೌಲ್ಯವೆಂದರೆ ಒಂದು ವಸ್ತುವಿಗೆ ಮಾರ್ಕೆಟಿನಲ್ಲಿ ಹಣದ ರೂಪವಾಗಿ ಸಿಗುವ ಧಾರಣೆಯಲ್ಲ. ರಿಕಾರ್ಡೊ ಹೇಳುವ ಹಾಗೆ ಮಾರ್ಕ್ಸನೂ ಸರಕಿನ ಮೌಲ್ಯವು ಅದರಲ್ಲಿ ಅಡಕವಾಗಿರುವ ಪರಿಶ್ರಮದ ಪರಿಮಾಣದಿಂದ ನಿರ್ಣೀತವಾಗುತ್ತದೆ ಎನ್ನುತ್ತಾನೆ. ಸರಕುಗಳಲ್ಲಿ ಹುದುಗಿರುವ ಪರಿಶ್ರಮದ ದೆಸೆಯಿಂದ ಬರುವ ಮೌಲ್ಯವನ್ನು ಅವಕ್ಕೆ ಮಾರ್ಕೆಟಿನಲ್ಲಿ ದೊರೆಯಬಹುದಾದ ಧಾರಣೆಯಿಂದ ಬೇರ್ಪಡಿಸಿ ನಿರೂಪಿಸುತ್ತಾನೆ. ಸಮಾಜದಲ್ಲಿ ಮನುಷ್ಯರು, ನೈಸರ್ಗಿಕ ಪದಾರ್ಥಗಳು ಎಂಬ ಎರಡು ಉತ್ಪಾದಕ ಶಕ್ತಿಗಳಿವೆ. ಜನರು ಉಪಯೋಗಿಸುವ ಪದಾರ್ಥಗಳು ಅವರ ಹಿಂದಿನವರ ಪರಿಶ್ರಮದ ಫಲ: ನೈಸರ್ಗಿಕ ಒಡವೆಗಳ ಮೇಲೆ ಮನುಷ್ಯನ ಶ್ರಮವು ಬೆರೆತುದರಿಂದ ಬಂದ ಫಲ. ಈ ದೃಷ್ಟಿಯಲ್ಲಿ ಬಂಡವಾಳವು ಮಾನವ ಪರಿಶ್ರಮದ ಒಂದು ಸಾಕಾರರೂಪ. ಬರೇ ನೈಸರ್ಗಿಕ ಸಂಪತ್ತಿಗೆ ಬೆಲೆ ಇಲ್ಲ; ಅದು ಮನುಷ್ಯನ ಪರಿಶ್ರಮದೊಡನೆ ಸೇರಿದರೆ ಮಾತ್ರವೇ ಅದಕ್ಕೆ ಬೆಲೆ. ಮಾರ್ಕ್ಸನ ವಾದದಲ್ಲಿ 'ಮೌಲ್ಯವು' 'ಧಾರಣೆ' ಅಲ್ಲವಾದ್ದರಿಂದ ವಿರಳ ಸಾಧನಗಳಿಗೆ ಬೆಲೆ ಇಲ್ಲವೆ? ಎಂದು ಕೇಳುವ ಪ್ರಸಂಗವೇ ಇಲ್ಲ. ಆದರೂ ಮಾರ್ಕ್ಸನ ಮೌಲ್ಯವು ಪ್ರಯೋಜನ ಮೌಲ್ಯವೇ, ವಿನಿಮಯ ಮೌಲ್ಯವೇ ಎಂದು ಕೇಳಬಹುದು. ಒಂದು ವಸ್ತುವಿನ ಉಪಯುಕ್ತತೆಯನ್ನು ಇನ್ನೊಂದರೊಡನೆ ಹೋಲಿಸುವುದು ಎಷ್ಟು ಕಷ್ಟದ ಕೆಲಸವಾದರೂ ದಿನಂಪ್ರತಿ ನಾವು

ಇದನ್ನೇ ಮಾಡುತ್ತಿರುತ್ತೇವೆ. ನಮ್ಮ ವೈಯಕ್ತಿಕ ಮೌಲ್ಯ ನಿರ್ಣಯದ ಮೊತ್ತಕ್ಕೇ ಮಾರ್ಕೆಟು ಧಾರಣೆ ಎಂಬ ಹೆಸರು ಬೀಳುತ್ತದೆ ಎಂಬಂಶವನ್ನು ನಾವು ಈಗಾಗಲೇ ಸ್ಪಷ್ಟಪಡಿಸಿಕೊಂಡಿರುವೆವು. ವಿನಿಮಯ ಮೌಲ್ಯ = ವಸ್ತುಗತ ಪ್ರಯೋಜನ ಮೌಲ್ಯ = ಧಾರಣೆ ಎಂಬ ಮೇಲಾಟದ ಸಮಾಜದ ಸಮೀಕರಣಕ್ಕೆ ಮಾರ್ಕ್ಸ್‌ವಾದದಲ್ಲಿ ಅವಕಾಶವಿಲ್ಲ. ಪ್ರಾಚೀನ ಪಂಥದವರು ತಟಸ್ಥಧಾರಣೆಗೆ ಪೂರೈಕೆಯ ಪರಿಸ್ಥಿತಿಯೇ ಮುಖ್ಯ ಅವಲಂಬನೆ ಎನ್ನುತ್ತಿದ್ದರು. ಮಾರ್ಕ್ಸ್‌ನ ಪರಿಶ್ರಮ ಶಬ್ದಕ್ಕೆ ವಿಶಿಷ್ಟಾರ್ಥವಿದೆ: ಪರಿಶ್ರಮವೆಂದರೆ 'ಸಾಮಾಜಿಕವಾಗಿ ಅವಶ್ಯವಾಗುವ ಪರಿಶ್ರಮ' ಈ ಪದಸಮುಚ್ಚಯದಲ್ಲಿ ಬೇಡಿಕೆಯ ಪಾರ್ಶ್ವಕ್ಕೆ ಪೂರೈಕೆಯಷ್ಟೇ ಮಹತ್ತ್ವವು ದೊರೆತಂತಾಯಿತು. ಹೇಗೆಂದರೆ, ಬೇಡಿಕೆ ಇಲ್ಲದ ಸರಕಿನ ಮೇಲೆ ಪರಿಶ್ರಮವು ವರ್ತಿಸಿದರೆ ಅಂಥ ಪರಿಶ್ರಮವು ಸಾಮಾಜಿಕವಾಗಿ ಆವಶ್ಯಕವಾದ ಪರಿಶ್ರಮವೆಂದು ಕರೆಯಲ್ಪಡುವುದಿಲ್ಲ. ಬೇಡಿಕೆ ಇರುವ ವಸ್ತುವನ್ನು ಸೃಷ್ಟಿಸುವಾಗ ಉಪಯೋಗಿಸಲಾಗುವ ಪರಿಶ್ರಮವು ಮಾತ್ರ ಮೌಲ್ಯವನ್ನು ನಿರ್ಣಯಿಸುವುದು, ಎಂಬ ಮಾತು ಇಲ್ಲಿ ಖಚಿತವಾಗುವುದು. ಬಂಡವಾಳಗಾರ ಸಮಾಜದಲ್ಲಿ ದೇಶದ ನೈಸರ್ಗಿಕ ಸಂಪತ್ತನ್ನು ವಿವಿಧ ಉದ್ಯಮಗಳಿಗೆ ವಿತರಣೆಮಾಡುವ ಸಮಸ್ಯೆಯನ್ನು ಧಾರಣೆಯ ಒರೆಗಲ್ಲಿನಿಂದ ಬಗೆಹರಿಸಲಾಗುತ್ತದೆ. ಒಟ್ಟು ಹಣ-ಮೌಲ್ಯವನ್ನು ಅತ್ಯಧಿಕವಾಗಿ ವೃದ್ಧಿಗೊಳಿಸುವ ಹಂಬಲನ್ನು ಅಲ್ಲಿ ನಾವು ಕಾಣುತ್ತೇವೆ. ಆದರೆ ಮಾರ್ಕ್ಸ್‌ನು ಹಣದ ಪರದೆಯನ್ನು ಒಸರಿಸಿ ಮೌಲ್ಯವನ್ನು ಸೃಷ್ಟಿಮಾಡುವ ನಿಜವಾದ ಶಕ್ತಿಯನ್ನು ಶೋಧಿಸುತ್ತಾನೆ. ಆ ಶಕ್ತಿಯು ಮನುಷ್ಯಶಕ್ತಿಯ ಹೊರತು ಬೇರಾವುದೂ ಅಲ್ಲವೆಂದು ನಿರ್ಣಯಿಸಿ ಮನುಷ್ಯನ ಪರಿಶ್ರಮವೊಂದೇ ಮೌಲ್ಯವನ್ನು ಸೃಷ್ಟಿಸುವುದೆಂದು ಘೋಷಿಸುತ್ತಾನೆ. ಉತ್ಪಾದಕ ಸಾಮಗ್ರಿಗಳು ಸಮಾಜದ ವಿವಿಧ ಭಾಗಗಳಲ್ಲಿ ಹೇಗೆ ಹಂಚಿಹೋಗಿವೆ ಎಂಬುದನ್ನು ತನ್ನ ಮೌಲ್ಯಸಿದ್ಧಾಂತದ ಮೂಲಕ ವಿವರಿಸುತ್ತಾನೆ.

**ಮಿಗುತೆ ಮೌಲ್ಯ:**

ಇಷ್ಟಾದರೂ ಬಂಡವಾಳಗಾರ ಸಮಾಜದಲ್ಲಿ ಪರಿಶ್ರಮವು ಎಷ್ಟು

ಮೌಲ್ಯವನ್ನು ಸೃಷ್ಟಿ ಮಾಡುತ್ತದೋ ಅಷ್ಟು ಧಾರಣೆಯು ಅದಕ್ಕೆ ದೊರೆಯುವುದಿಲ್ಲ ಎಂಬುದು ಸ್ವಯಂವೇದ್ಯವಲ್ಲವೆ? ಉತ್ಪಾದಕ ಸಾಮಗ್ರಿಗಳ ಒಡೆತನವನ್ನು ಪಡೆದ ಬಂಡವಾಳಗಾರರು ಮುನಾಫೆ, ಗೇಣಿ, ಬಡ್ಡಿ ಮುಂತಾದ ರೂಪದಲ್ಲಿ ಮೌಲ್ಯದ ಒಂದಂಶವನ್ನು ಕೊಳ್ಳೆ ಹೊಡೆಯುವರು. ಈ ಅಂಶಕ್ಕೆ ಮಾರ್ಕ್ಸನು ಮಿಗುತೆ ಮೌಲ್ಯವೆಂದು ಹೆಸರಿಟ್ಟಿದ್ದಾನೆ. ಪರಿಶ್ರಮಕ್ಕೆ ದೊರೆವ ಕೂಲಿಗೂ, ಅದು ಸೃಷ್ಟಿಸುವ ಮೌಲ್ಯಕ್ಕೂ ಇರುವ ಅಂತರವೇ 'ಮಿಗುತೆ ಮೌಲ್ಯ' ಎನಿಸುವುದು. ಈ ಮಿಗುತೆ ಮೌಲ್ಯವು ಯಾರಾದರೂ ಒಬ್ಬ ಬಂಡವಾಳಗಾರನ ಸೊತ್ತಾಗುವುದಿಲ್ಲ. ಅದನ್ನು ಹಂಚಿಕೊಳ್ಳಲು ಅವರೊಳಗೆ ಪೈಪೋಟಿ ನಡೆಯುತ್ತದೆ. ಧಾರಣೆವಾಸಿಯ ಮೇಲಿಂದ ಪ್ರತಿಯೊಬ್ಬ ಬಂಡವಾಳಗಾರನೂ ತನ್ನಿಂದಾದಷ್ಟು ಯತ್ನ ಮಾಡಿ ಮಿಗುತೆ ಮೌಲ್ಯದ ಅಧಿಕಾಧಿಕ ಅಂಶವನ್ನು ಪಡೆಯಲು ಹವಣಿಸುತ್ತಾನೆ. ಆದರೆ ಸಮಾಜದ ಒಟ್ಟು ಸರಕು ಸೇವೆಗಳೂ ಅವುಗಳ ಜುಮಲಾ ಹಣಮೌಲ್ಯವೂ ಒಂದೇ ಆಗಿರಬೇಡವೆ? ಎಂದು ಕೇಳುವುದು ಸೂಕ್ತವಾಗಿದೆ ಸಮಗ್ರ ಮೌಲ್ಯವು ಸಮಗ್ರ ಧಾರಣೆಯಲ್ಲವೆ? ಏಕೆಂದರೆ ಸಮಗ್ರ ಧಾರಣೆಯು ಸಮಗ್ರ ಮೌಲ್ಯಕ್ಕಿಂತ ಭಿನ್ನವಾಗುವುದು ಸಾಧ್ಯವಿಲ್ಲ. ಅಂದರೆ ಯಾವ ಸರಕಿಗೂ ಅದರ ಮೌಲ್ಯಕ್ಕಿಂತ ಹೆಚ್ಚು ಧಾರಣೆ ಇಡುವುದು ಸಾಧ್ಯವಿಲ್ಲ ಎಂಬುದು ಖಂಡಿತ. ಹಾಗಾದರೆ ಬಂಡವಾಳಗಾರರಿಗೆ ಮುನಾಫೆ ಹೇಗೆ ಬರಬೇಕು? ಈ ಪ್ರಶ್ನೆಗೆ ಉತ್ತರ ಹೇಳುವ ಮೊದಲು ಮಾರ್ಕ್ಸನ 'ಪರಿಶ್ರಮ' ಮತ್ತು 'ಪರಿಶ್ರಮ ಶಕ್ತಿ' ಇವುಗಳಿಗಿರುವ ವ್ಯತ್ಯಾಸವನ್ನು ಮನವರಿಕೆ ಮಾಡಿಕೊಳ್ಳಬೇಕು. ಪರಿಶ್ರಮ ಅಥವಾ ಕೂಲಿಕಾರರು ಮಾರುವ ಸರಕಿಗೆ 'ಪರಿಶ್ರಮ ಶಕ್ತಿ' ಎಂದು ಹೆಸರು. ಪರಿಶ್ರಮ ಶಕ್ತಿಯಿಂದ ಉಂಟಾಗುವ ಸರಕಿನ ಮೌಲ್ಯ ಬೇರೆ; ಅದೇ ಪರಿಶ್ರಮ ಶಕ್ತಿಗೆ ಬಂಡವಾಳಗಾರರು ತೆರುವ ಕೂಲಿ ಬೇರೆ. ಒಬ್ಬ ಸಾಮಾನ್ಯ ಕೂಲಿಕಾರನು ತನ್ನ ಜೀವನ ನಿರ್ವಾಹಕ್ಕೆ ಬೇಕಾಗುವುದಕ್ಕಿಂತ ಹೆಚ್ಚು ಸರಕನ್ನು ಉತ್ಪಾದಿಸುತ್ತಾನೆ; ಆದರೆ ಅವನಿಗೆ ದೊರೆಯುವ ಕೂಲಿ ಆವನ ಉತ್ಪಾದನೆಗಿಂತ ಕಡಿಮೆಯಾಗಿರುತ್ತದೆ. ಮುನಾಫೆ, ಗೇಣಿ, ಬಡ್ಡಿಗಳು ಹುಟ್ಟುವುದು ಈ ಅಂತರದಲ್ಲಿ. ಇದೇ ಮಿಗುತೆ ಮೌಲ್ಯ.

**ಫಲಕಾರಿ ಬೇಡಿಕೆ:**

ನಮಗೆ ಅಗಣಿತವಾದ ಇಚ್ಛೆಗಳಿದ್ದರೂ ಅವು ಫಲಕಾರಿಯಾಗಿ ಬೇಡಿಕೆ ಎನಿಸಬೇಕಾದರೆ ಇಚ್ಛೆಯ ಜೆನ್ನಿಗೆ ಗ್ರಾಹಕಶಕ್ತಿಯೂ ಇರಬೇಕೆಂಬುದನ್ನು ನಾವು ಬಲ್ಲೆವು. ಸರಕುಗಳ ಮೌಲ್ಯಕ್ಕೆ ಅವುಗಳ ಉತ್ಪಾದನೆಯ ವೆಚ್ಚವು ಕಾರಣವಲ್ಲ; ಜನ ಅವುಗಳನ್ನು ಬಯಸುವುದು ಕಾರಣ ಎಂದು ಇದರಿಂದ ತಿಳಿಯಬಹುದು. ಯಾವ ಸರಕು ಅತಿ ಆವಶ್ಯಕ ವಾಗಿದೆಯೋ ಅದನ್ನು ಮೊದಲಾಗಿ ತಯಾರಿಸುವುದು ಅರ್ಥವತ್ತಾದ ಅರ್ಥ ಶಾಸ್ತ್ರದ ಗುರಿಯಷ್ಟೆ. 'ಆವಶ್ಯಕ' ಎಂಬ ಪದಕ್ಕೆ ಸ್ವತಂತ್ರ ಅರ್ಥವಿರುವು ದಿಲ್ಲ. ಒಂದೊಂದು ಸಮಾಜ ರಚನೆಯಲ್ಲಿ ಇದರರ್ಥವು ಒಂದೊಂದು ಬಗೆ ಯಾಗಿರಬಹುದು. ಪಾನಪ್ರತಿಬಂಧವು ಶಾಸನವಾಗಿರುವ ರಾಜ್ಯಗಳಲ್ಲಿ ಜನರಿಗೆ ಕುಡಿತದ ಮೋಹ ತೊಲಗಿಲ್ಲವೆಂದೂ, ಅವರ ಆವಶ್ಯಕತೆ ಇದ್ದ ಕ್ಕಿದ್ದಂತಿದೆ ಎಂದೂ ಯಾರಿಗೆ ಗೊತ್ತಿಲ್ಲ? ಆದರೆ ಸರಕಾರದ ದೃಷ್ಟಿಗೆ ಬೇರಾ ವುದೋ ವಿಷಯವು ಹೆಚ್ಚು ಆವಶ್ಯಕವೆಂದು ಕಂಡು, ಕಡಿಮೆ ಆವಶ್ಯಕತೆ ಯುಳ್ಳ ಪೇಯಗಳನ್ನು ಅವರು ಪ್ರತಿಬಂಧಿಸಿರುವರು. ಹಾಗೆಯೇ ಬಂಡ ವಾಳಗಾರ ಸಮಾಜದಲ್ಲಿ ಆವಶ್ಯಕತೆಯನ್ನೂ ಫಲಕಾರಿ ಬೇಡಿಕೆಯನ್ನೂ ಒಂದೇ ಎಂದು ತಿಳಿಯುವುದರಿಂದ ಹಣವುಳ್ಳವರ ಆವಶ್ಯಕತೆಯೇ ಅಲ್ಲಿ ಪಾವನವಾಗುವುದು. ಬಡವನ ಹತ್ತಿರ ಹಣ ಇಲ್ಲವಾದರೆ ಅವನ ಆವಶ್ಯ ಕತೆಗೆ ಸಮಾಜವು ಗಮನವೀಯುವುದಿಲ್ಲ. ಅವನ ಇಚ್ಛೆಯು ಫಲಕಾರಿ ಬೇಡಿಕೆಯಲ್ಲ. ಮೌಲ್ಯವನ್ನು ಫಲಕಾರಿ ಬೇಡಿಕೆಯು ನಿರ್ಣಯಿಸುವು ದಲ್ಲದೆ ಒಂದು ಸರಕನ್ನು ತಯಾರಿಸುವ ವೆಚ್ಚವಲ್ಲ ಎಂಬುದು ಆಧುನಿಕ ಅರ್ಥಶಾಸ್ತ್ರಿಗಳ ವಾದ. ಹಣವಂತರು ಕೊಡುವ ಹಣವು ಬೇರೆ ಬೇರೆ ಸರಕುಗಳ ಸಾಪೇಕ್ಷ ಮೌಲ್ಯವನ್ನು ಅಳೆಯುವ ಸಾಧನವಾಗುವುದರಿಂದ ಪ್ರತಿಯೊಂದು ಸರಕನ್ನು ಇನ್ನೊಂದು ಸರಕಿನೊಡನೆ ತೂಗಿನೋಡುವುದು ಸುಲಭವಾಗುತ್ತದೆ. ಸರಕುಗಳನ್ನು ಕೊಳ್ಳಲು ಎಲ್ಲರ ಹತ್ತಿರವೂ ಹಣ ವರಮಾನವಿರುತ್ತದೆಂಬುದನ್ನು ಬಂಡವಾಳಗಾರ ಸಮಾಜವು ಪ್ರಮಾಣ ರಹಿತವಾಗಿ ಅಂಗೀಕರಿಸಿದೆ. ವಾಸ್ತವವಾಗಿ ಅಂಥ ಸಮಾಜಗಳಲ್ಲಿ ಎಲ್ಲ ರಿಗೂ ಹೆಚ್ಚು ಕಡಿಮೆ ಹಣ ವರಮಾನವಿದ್ದೇ ಇರುತ್ತದೆ. ಆದರೆ ಹಣ ವರ

ಮಾನವೆಂದರೆ ಉತ್ಪಾದಕ ಅವಯುವಗಳಿಗಿರುವ 'ಕೇಳಿಕೆ'ಯ ಸೂಚಿಯಷ್ಟೆ. ಅಂದರೆ ಹಣವರಮಾನವೂ ಒಂದು ಧಾರಣೆ ಎಂದಾಯಿತು. ಧಾರಣೆಯು ಧಾರಣೆಯನ್ನು ವಿಶದಪಡಿಸುವುದು ಹೇಗೆ? ಎಂಬ ಸಮಸ್ಯೆ ಆಗ ನಮ್ಮ ಮುಂದೇಳುತ್ತದೆ. ಫಲಕಾರಿ ಬೇಡಿಕೆಯ ಅಸಾಮರ್ಥ್ಯವು ಸ್ಪಷ್ಟವಾಗುತ್ತದೆ.

**ವಿಫಲವಾದ 'ಫಲಕಾರಿ ಬೇಡಿಕೆ':**

ಬಂಡವಾಳಗಾರ ಸಮಾಜದ ನಿಜವಾದ ವಿಮರ್ಶೆ ಮಾಡಬೇಕಾದರೆ ನಾವು ಫಲಕಾರಿ ಬೇಡಿಕೆಯ ಸೀಮಿತ ಕ್ಷೇತ್ರದಿಂದ ಹೊರಗೆ ವಿಚಾರದೃಷ್ಟಿಯನ್ನು ಬೀರಬೇಕು. ಬೇರೆಯೇ ಒಂದು ಅಳತೆಗೋಲನ್ನು ಒಪ್ಪಿಕೊಳ್ಳಬೇಕು. (೧) ಫಲಕಾರಿ ಬೇಡಿಕೆಯನ್ನು ಸಂಪೂರ್ಣವಾಗಿ ಪರಿತ್ಯಜಿಸಿ ಅದರ ಸ್ಥಾನದಲ್ಲಿ ಮಾನವ ಆವಶ್ಯಕತೆಗಳ ಬಗ್ಗೆ ಇರುವ ಸಾಮೂಹಿಕ ಅಂದಾಜನ್ನು ಒಪ್ಪಿಕೊಂಡರೆ ಏನಾಗುವುದೆಂದು ನೋಡುವ. ಸಾಮೂಹಿಕ ಗಣನೆಯನ್ನು ಸ್ವೀಕರಿಸುವ ಮೊದಲು ಸಮಾಜದ ಸರ್ವ ಸಾಧನ ಸಂಪತ್ತೂ ಸಾಮೂಹಿಕ ಒಡೆತನಕ್ಕೆ ಒಳಗಾಗಬೇಕಾದುದೂ, ಸಮಾಜವೇ ಉತ್ಪಾದನೆ ಮತ್ತು ವಿತರಣೆಯ ಪ್ರಶ್ನೆಯನ್ನು ಬಗೆಹರಿಸಬೇಕಾದುದೂ, ಅನಿವಾರ್ಯ. ಅಂಥ ಸಮಾಜದಲ್ಲಿ ಕೆಲವು ಸರಕುಗಳನ್ನು ಧರ್ಮಾರ್ಥವಾಗಿ ಸರಬರಾಯಿ ಮಾಡುವ ಕ್ರಮವೂ, ಉಳಿದುವನ್ನು 'ರೇಶನ್' ಪದ್ಧತಿಯ ಮೇಲಿಂದ ವಿತರಣೆಮಾಡುವ ಕ್ರಮವೂ ರೂಢಿಯಲ್ಲಿ ಬರುವುದು. ಆ ಅರ್ಥಮಂಡಲದಲ್ಲಿ ಪ್ರತಿಯೊಬ್ಬನಿಗೂ ಅವನ ಆವಶ್ಯಕತೆಯಷ್ಟು ಸರಕುಗಳು ದೊರೆಯುವುವು. ಆದರೆ ಈ ಆವಶ್ಯಕತೆಗಳನ್ನು ಯಾರೊಬ್ಬನೂ ಅಥವಾ ಯಾವ ಒಂದು ಗುಂಪೂ ನಿರ್ಣಯಿಸದೆ ಇಡಿಯ ಸಮಾಜವೇ ನಿರ್ಣಯಿಸುವುದರಿಂದ 'ಆವಶ್ಯಕತೆ' ಎಂದರೆ 'ಸಾಮಾಜಿಕವಾಗಿ ನಿರ್ಣಯಿಸಲ್ಪಟ್ಟ ಆವಶ್ಯಕತೆ' ಎಂಬುದಾಗಿ ತಿಳಿಯಬೇಕು. (೨) ಎರಡನೆಯ ಮಾರ್ಗದಲ್ಲಿ ಫಲಕಾರಿ ಬೇಡಿಕೆಯನ್ನು ಸರಕುಸೇವೆಗಳ ವಿತರಣೆಯ ಒರೆಗಲ್ಲಾಗಿ ಇರಿಸಿಕೊಂಡರೂ, ಅದನ್ನು ಸ್ವಸಂಪೂರ್ಣವಾದ ಮಾನದಂಡವೆಂದು ತಿಳಿಯದೆ ವರಮಾನದ ವಿತರಣೆಯ ನಿಯಂತ್ರಣದ ಮೂಲಕವಾಗಿ

ಫಲಕಾರಿ ಬೇಡಿಕೆಯನ್ನೇ ಬೇಕಾದ ರೀತಿಯಲ್ಲಿ ಪರಿವರ್ತಿಸಿಕೊಳ್ಳುವ ಯತ್ನಮಾಡಲಾಗುತ್ತದೆ. ಸಮಾಜದ ಎಲ್ಲ ನಾಗರಿಕರ ವರಮಾನದ ಮೇಲೂ ಪೂರ್ತಿ ನಿಯಂತ್ರಣವು ಜರಗುವುದೂ, ಆ ಮೇಲೆ ಯಾವ ಸರಕನ್ನು ತಯಾರಿಸಬೇಕೆಂಬ ನಿರ್ಣಯವನ್ನು ಗ್ರಾಹಕರ ಒಲವಿಗೆ ಬಿಟ್ಟು ಬಿಡುವುದೂ, ಈ ಮಾರ್ಗದ ತತ್ತ್ವವಾಗುವುದು. ಪ್ರತ್ಯೇಕವಾದ ಸರಕುಗಳಿಗೆ ಬೇಡಿಕೆಯು ಏರುತ್ತ ಇಳಿಯುತ್ತ ಇದ್ದರೆ ಚಿಂತಿಲ್ಲ. ಸರಕುಗಳ ಧರ್ಮಾರ್ಥ ವಿತರಣೆಯಾಗಲಿ, ಹಸುಗೆಯಾಗಲೀ ಈ ಬಗೆಯ ಸಮಾಜದಲ್ಲಿ ರಬೇಕಾಗಿಲ್ಲ. ಹಣದ ವಿವರ್ತನೆಯೂ ಅಳಿಯಬೇಕಾದ್ದಿಲ್ಲ.

ಈ ಎರಡು ದಾರಿಗಳನ್ನನುಸರಿಸಿದರೂ ಸ್ವಾರ್ಥಪೂರಿತ ವ್ಯಕ್ತಿಯು ಸಾಮಾಜಿಕ ವ್ಯಕ್ತಿಯಾಗುವುದನ್ನು ನಾವು ಕಾಣುವುದರಿಂದ ಇವನ್ನು ಸಮಾಜವಾದಿ ಮಾರ್ಗಗಳೆಂದು ಕರೆಯಬಹುದು. ಎರಡರ ಉದ್ದೇಶಗಳೂ, ತತ್ತ್ವಗಳೂ ಸಮಾನವಾಗಿವೆ. ಎರಡರಲ್ಲೂ ಶ್ರಮಜೀವಿಗಳ ಜನ್ಮಸಿದ್ಧ ಹಕ್ಕನ್ನು ಪರಿಗಣಿಸಲಾಗಿದೆ. ಎರಡು ವಿಧಾನಗಳಲ್ಲಿಯೂ ಕೂಲಿಕಾರವರ್ಗದ ಬಗ್ಗೆ ಸಮಾಜದಲ್ಲಿರುವ ನೀಚಭಾವನೆಯು ಮಾಯವಾಗಬೇಕೆಂಬ ಉತ್ಸಾಹವು ಒಡೆದು ಕಾಣುತ್ತದೆ.

**ವರ್ಗರಹಿತ ಸಮಾಜ:**

ವರ್ಗರಹಿತವಾದ ಸಮಾಜದ ರಚನೆಗೆ ಬೇಕಾದ ಮೌಲ್ಯದ ಮಾನದಂಡವು ಜನತೆಯ ನಿಜವಾದ ಇಚ್ಛೆ, ಬಯಕೆ, ಬೇಡಿಕೆಗಳನ್ನು ಹೊಂದಿರುತ್ತದೆ. ಆಗ ಮೌಲ್ಯವು ಒಂದು ಸಾಮಾಜಿಕ ಕಲ್ಪನೆಯಾಗುತ್ತದೆ. ಯಾವುದನ್ನು ಉತ್ಪಾದಿಸಬೇಕು ಎಂಬ ಪ್ರತ್ಯಕ್ಷ ಪ್ರಶ್ನೆಯನ್ನೂ, ಯಾವ ರೀತಿಯಾಗಿ ವರಮಾನವನ್ನು ಹಂಚಬೇಕು ಎಂಬ ಪರೋಕ್ಷ ಸವಾಲನ್ನೂ, ಮೌಲ್ಯದ ಸಾಮಾಜಿಕ ಕಲ್ಪನೆಯು ಸಮಾಧಾನಕರವಾಗಿ ಉತ್ತರಿಸುತ್ತದೆ. ಸಾಮಾಜಿಕ ಉಪಯೋಗದ ಸಲುವಾಗಿ ಹಲವು ಸಾಮಗ್ರಿಗಳು ತಯಾರಾಗುವುವು. ಕೆಲವನ್ನು ಸಮಾಜದಲ್ಲಿ ಧರ್ಮಾರ್ಥವಾಗಿ ಹಂಚುವ ಏರ್ಪಾಡು ನಡೆಯುವುದು. ಅಂಥ ಸರಕುಗಳನ್ನು ತಯಾರಿಸುವ ನಿರ್ಧಾರವನ್ನು ಸಮಾಜವು ಕೈಗೊಂಡರೆ ಎರಡು ರೀತಿಯಲ್ಲಿ ಆ ನಿರ್ಣಯವು ಸಾಧುವೆನಿಸು

ವುದು. ಆ ಸರಕುಗಳ ಉತ್ಪಾದನೆಗೆ ಪರಿಶ್ರಮಪಟ್ಟುದು ಸಾರ್ಥಕವಾಯಿತು ಎಂಬುದೊಂದು; ತಯಾರಿಸದಿರುವ ವಸ್ತುಗಳಿಗಿಂತ ಇವನ್ನು ತಯಾರಿಸಿದುದು ಸಮಾಜಕ್ಕೆ ಹಿತತರವೆಂಬುದಿನ್ನೊಂದು. ಜನಶಕ್ತಿ, ಕಚ್ಚಾಮಾಲು, ಯಂತ್ರ ಮುಂತಾದ ಉತ್ಪಾದಕ ಅವಯವಗಳು ವಿರಳವಾಗಿರುವುದರಿಂದ ಅವುಗಳನ್ನು ವಿತರಣೆಮಾಡುವ ಕ್ರಮವು ಯೋಜನಾಬದ್ಧವಾಗಿರಲೇ ಬೇಕು. ಸಮಾಜವಾದಿ ಅರ್ಥಮಂಡಲವು ಸ್ವಭಾವತಃ ಯೋಜನಾತ್ಮಕವಾದ ಅರ್ಥಮಂಡಲವಾಗಿರುತ್ತದೆ. ಅಲ್ಲಿ ಪ್ರತಿಯೊಂದು ಅವಯುವದ ಪ್ರಸ್ತುತ ಧಾರಣೆಯು ಮಾತ್ರ ಮುಖ್ಯವೆಂದೆಣಿಸಲ್ಪಡುವುದಿಲ್ಲ. ಪ್ರತಿ ಅವಯುವವು ಇನ್ನು ಮುಂದೆ ಉತ್ಪಾದಿಸುವ ಸರಕಿನ ಮೇಲಿಂದ ನಿರ್ಣಯಿಸಲ್ಪಡುವ ನಿರೀಕ್ಷಿತ ಮೌಲ್ಯವು ಮುಖ್ಯ.

## ಯೋಜನಾಬದ್ಧ ಅರ್ಥಮಂಡಲ:

ರಾಷ್ಟ್ರದ ಅರ್ಥಮಂಡಲವನ್ನು ವಿಚಾರಪೂರಿತವಾಗಿ ಕೇಂದ್ರೀಕರಿಸಿ ನಿಯಂತ್ರಿಸುವುದು ಯೋಜನೆಯ ಮೂಲತತ್ತ್ವವಾಗಿದೆ. ಇಂಥ ಕೇಂದ್ರೀಕರಣ ಮತ್ತು ನಿಯಂತ್ರಣಗಳನ್ನು ಮಾಡಲು ಒಂದು ಅಥವಾ ಹಲವು ಕೇಂದ್ರ ಮಂಡಲಿಗಳು ಇರುತ್ತವೆ. ಇಡಿಯ ಆರ್ಥಿಕ ಮಂಡಲವನ್ನೇ ನಿಯಂತ್ರಿಸುವ ಉದ್ದೇಶವನ್ನಿಟ್ಟುಕೊಂಡಿರುವುದರಿಂದ ಮಾರ್ಕೆಟಿನ ಪ್ರಾಧಾನ್ಯವು ಕಡಿಮೆಯಾಗುತ್ತದೆ. ಅಂದರೆ, ಯೋಜನಾತೀತ ಸಮಾಜವು ಸರಕುಗಳ ಧಾರಣೆ ಮತ್ತು ಉತ್ಪಾದನೆಯ ಗಾತ್ರವನ್ನು ಇಂತಿಷ್ಟು ಎಂದು ಸ್ಥಿರಗೊಳಿಸುವುದು. ಮಾರ್ಕೆಟಿನ ಕೆಲಸವು ಯೋಜನಾ ಸಮಿತಿಗಳ ಪಾಲಾಗುವುದು. ಯೋಜನಾ ಸಮಿತಿಗಳು ಉತ್ಪಾದನೆ-ಅನುಭೋಗ, ಆಮದು-ರಫ್ತು, ಉಳಿತಾಯ-ಇನ್ವೆಸ್ಟ್‌ಮೆಂಟು ಇವುಗಳ ಪರಸ್ಪರ ಪ್ರಮಾಣವನ್ನು ನಿರ್ಧರಿಸುವುವು. ಕೇಂದ್ರ ಯೋಜನಾ ಸಮಿತಿಗೆ (೧) ಉತ್ಪಾದನೆಯ ನಿರ್ಧಾರ (೨) ವೃತ್ತಿ ಉಪವೃತ್ತಿಗಳ ನಿರ್ಣಯ (೩) ವಿನಿಮಯದ ಷರತ್ತು (೪) ಉಳಿತಾಯ ಇನ್ವೆಸ್ಟ್‌ಮೆಂಟಿನ ದಾಮಾಶಯ (೫) ಅನುಭೋಗದ ಪ್ರವೃತ್ತಿ-ಎಲ್ಲವನ್ನೂ ನಿಯಂತ್ರಿಸುವ ಹಿರಿಯ ಅಧಿಕಾರವು ಹಸ್ತಗತವಾಗುತ್ತದೆ. ಇಂಥ ಕೇಂದ್ರ ನಿಯಂತ್ರಣದಿಂದ ಬರುವ ಲಾಭಗಳೇನೆಂದರೆ

(೧) ಜಾಹೀರಾತು ಮುಂತಾದ ಮೇಲಾಟದ ಸಮಾಜದಲ್ಲಿನ ಅಪ ವ್ಯಯವನ್ನು ತಡೆಯುವುದು.

(೨) ಪರಿಶ್ರಮ, ಬಂಡವಾಳ ಮುಂತಾದ ಅವಯವಗಳಿಗೆ ನಿರು ದ್ಯೋಗವು ತಟ್ಟದಂತೆ ನೋಡಿಕೊಳ್ಳುವುದು.

(೩) ಬೃಹತ್-ಉತ್ಪಾದನೆಯಿಂದ ಬರುವ ಮಿತವ್ಯಯಗಳು.

(೪) ಶ್ರಮ ವಿಭಾಗಕ್ಕೆ ಹೆಚ್ಚಿನ ಪ್ರೋತ್ಸಾಹವು ದೊರೆಯುವುದು.

ದೋಷ:—(೧) ಮೆನೇಜರುಗಳಿಗೆ ಅತಿ ಹೆಚ್ಚು ಪ್ರಾಶಸ್ತ್ಯವು ದೊರೆ ಯುವುದೆ ಒಂದು ಅಪಾಯವೇ. ಬರ್ನ್‌ಹ್ಯಾಂ ಹೇಳುವಂತೆ ಬಂಡವಾಳ ಗಾರ ಸಮಾಜವನ್ನು ಸ್ಥಾನಭ್ರಷ್ಟವಾಗಿ ಮಾಡಲು ಮೆನೇಜರುಗಳೇ ಮುಂದಾಗಬಹುದು.

(೨) ಹಲವಾರು ಸಂಚಾಲಕರಿರುವಾಗ ಒಬ್ಬನು ಮಾಡಿದ ದೋಷವು ಅವನ ಉದ್ಯಮವನ್ನಷ್ಟೇ ಹಾಳುಗೆಡವೀತು. ಕೇಂದ್ರ ಯೋಜನಾ ಸಮಿ ತಿಯು ಕಾಲು ಜಾರಿದರೆ ಆನೆ ಜಾರಿದಂತೆಯೇ ಸರಿ. ಆರ್ಥಿಕಮಂಡಲವು ಇಂಥ ಆಘಾತದಿಂದ ಚೇತರಿಸಿಕೊಳ್ಳಲು ಮತ್ತೆ ಹಲವು ವರ್ಷಗಳೇ ಬೇಕಾದಾವು.

(೩) ಮೆನೇಜರುಗಳ ಬುದ್ಧಿಶಕ್ತಿ, ಸಂಘಟನಾ ಶಕ್ತಿ ಮುಂತಾದುವು ಕೂಡ ದೀರ್ಘಕಾಲದ ಕೇಂದ್ರ ನಿಯಂತ್ರಣದಿಂದ ಹ್ರಾಸವಾಗುವುವು.

(೪) ಆರ್ಥಿಕ ಜೀವನದಲ್ಲಿ ವೈವಿಧ್ಯವು ಮಾಯವಾಗಿ ಬೇಸರವು ಅಂಕುರಿಸಬಹುದು.

## ನಮ್ಮ ಆಯ್ಕೆ ಯಾವುದು?

ಅರ್ವಾಚೀನ ಜಗತ್ತಿನಲ್ಲಿ ಯಾವ ದೇಶವೂ ತಾನು ಸಂಪೂರ್ಣ ಸ್ವತಂತ್ರ ಆರ್ಥಿಕ ರಾಷ್ಟ್ರವೆಂದಾಗಲಿ, ಸಮಾಜವಾದಿ ರಾಷ್ಟ್ರವೆಂದಾಗಲಿ ಹೇಳಿಕೊಳ್ಳುವಂತಿಲ್ಲ. ಸರ್ವತಂತ್ರ ಸ್ವತಂತ್ರ ಸಮಾಜಗಳಲ್ಲಿ ತಲೆದೋ ರಿದ ಮೊನೊಪಲಿಯು ಒಂದು ಬಗೆಯ ಸಾಮೂಹಿಕ ನಿಯಂತ್ರಣವೆಂಬು ದನ್ನು ನಾವು ತಿಳಿದೆವು. ಯೋಜನಾತ್ಮಕ ಸಮಾಜದ ಗುಣದೋಷಗಳನ್ನು

ನಾವು ಅರಿತೆವು. "ಉತ್ಪಾದನೆಯನ್ನು ಯೋಜನಾಬದ್ಧವಾಗಿ ನಡೆಸುವುದೂ, ಮನುಷ್ಯ ಜೀವನವನ್ನು ಪಂಜರಬದ್ಧವಾಗಿ ಮಾಡುವುದೂ ಒಂದೇ" ಎಂಬವರ ಸಾಲಿಗೆ ನಾವು ಸೇರಬೇಕೋ ಅಥವಾ ಜನಶಕ್ತಿಯ ಹೊರತು ಉಳಿದ ಭೂಮಿ, ಬಂಡವಾಳ, ಸಾಹಸಿ ಎಂಬ ವಿರಳ ಅವಯುವಗಳನ್ನು ಆದಷ್ಟು ಮಿತವ್ಯಯವಾಗಿ, ಸಮಾಜದ ಸಾಮೂಹಿಕ ಹಿತಕ್ಕಾಗಿ ಬಳಸಿಕೊಳ್ಳುವಂಥ ಯೋಜನಾತ್ಮಕ ಪದ್ಧತಿಯನ್ನು ಒಲಿಯುಬೇಕೋ? ನಮ್ಮ ಆಯ್ಕೆಯ ಮೇಲೆ ನಮ್ಮ ದೇಶದ ಪುನರ್‌ರಚನೆಯು ನಡೆಯುಬೇಕು. ಯೋಜನಾತ್ಮಕ ಸಮಾಜದಲ್ಲಿ ವೈಶೇಷಿಕ ವ್ಯಕ್ತಿತ್ವವು ಕುಂಠಿತವಾಗುವುದು ನಿಜವಾದರೂ ಪ್ರಕೃತ ಪಶುಜೀವನವನ್ನು ನಡೆಸುತ್ತಿರುವ ಜನಕೋಟಿಯನ್ನು ಯಾವ ರೀತಿಯಿಂದಲಾದರೂ ಶೀಘ್ರವಾಗಿ ಆರ್ಥಿಕ ಉನ್ನತಿಯ ದಾರಿಯಲ್ಲಿ ನಡೆಸುವ ಮಾರ್ಗವನ್ನು ನಾವು ಆರಿಸಬೇಕು ಎಂಬುದರಲ್ಲಿ ಯಾರಿಗೂ ಆಕ್ಷೇಪವಿರಲಾರದು. ಮುಂಬರಿದ ದೇಶಗಳ ಉದಾಹರಣೆಯೂ ಅನುಭವವೂ ನಮಗಿರುವಾಗ, ಅವರ ದೋಷಗಳನ್ನು ತಿದ್ದಿಕೊಳ್ಳುವ ಅವಕಾಶವಿರುವಾಗ, ಸಂಕೋಚಕ್ಕೆ ಸರ್ವಥಾ ಎಡೆ ಇಲ್ಲ. ಯೋಜನೆಯಿಂದಲೇ ನಮ್ಮ ಮುಕ್ತಿ ಎಂದ ಮೇಲೆ ಯೋಜನಾತ್ಮಕ ಅರ್ಥಮಂಡಲಕ್ಕೆ ಸಂಪೂರ್ಣ ಸದವಕಾಶವನ್ನು ಕಲ್ಪಿಸುವ ಸಮಾಜವಾದಿ ರಾಜನೈತಿಕ ಹಾಗೂ ಆರ್ಥಿಕ ವ್ಯವಸ್ಥೆಗೆ ನಮ್ಮ ಹಾರ್ದಿಕ ಸ್ವಾಗತ ಇರಬಾರದೆ?

# ಹದಿನೆಂಟನೆಯ ಅಧ್ಯಾಯ

# ಮುಂದೇನು?

## ರಾಷ್ಟ್ರೀಯ ಆರ್ಥಿಕ ವ್ಯವಸ್ಥೆಯು ಸಾಕೆ?

ಪ್ರತಿಯೊಂದು ದೇಶವೂ ತನ್ನ ಎಲ್ಲೆಯೊಳಗಿರುವ ಜನರ ಯೋಗ ಕ್ಷೇಮಕ್ಕೆ ಜವಾಬುದಾರಿಯಾಗಿದೆ. ಬಂಡವಾಳವನ್ನು ಹೆಚ್ಚಿಸಿ, ಉದ್ಯಮ ಗಳನ್ನು ವಿರಚಿಸಿ, ಜನರಿಗೆ ಉದ್ಯೋಗವನ್ನು ಕಲ್ಪಿಸಿಕೊಟ್ಟು, ಅವರ ಜೀವನದ ಮಟ್ಟವು ಉನ್ನತವಾಗುವಂತೆ ಯತ್ನಿಸುವುದು ರಾಷ್ಟ್ರೀಯ ಸರ ಕಾರದ ಕರ್ತವ್ಯವಾಗಿರುತ್ತದೆ. ಇಡಿಯ ಆರ್ಥಿಕ ವ್ಯವಸ್ಥೆಯು ನಡೆಯಲು ಬೇಕಾದ ಹಂದರವನ್ನು—ಪೋಲೀಸು, ಸೈನ್ಯ, ಆರೋಗ್ಯಖಾತೆ, ರಾಜಸ್ವ ಮೊದಲಾದುವನ್ನು — ನಿರ್ಮಿಸುವ ಕೆಲಸವು ರಾಷ್ಟ್ರದ್ದು. ಹತ್ತೊಂಭತ್ತ ನೆಯ ಶತಮಾನದಲ್ಲಿ ರಾಷ್ಟ್ರಗಳು ಔದ್ಯಮಿಕ ರಂಗದಲ್ಲಿ ಹಸ್ತಕ್ಷೇಪ ಮಾಡು ತ್ತಿರಲಿಲ್ಲ. ಸ್ವತಂತ್ರ ವ್ಯಾಪಾರದ ಸಿದ್ಧಾಂತವು ಸಾರ್ವತ್ರಿಕವಾಗಿ ಹರಡಿದ್ದ ಆ ಕಾಲದಲ್ಲಿ ರಾಷ್ಟ್ರದ ಕೆಲಸವು ತೀರ ಪರಿಮಿತವಾಗಿತ್ತು. ಇಪ್ಪತ್ತನೆಯ ಶತಮಾನದಲ್ಲಿ ಆಗಾಗ ತಲೆದೋರಿದ ವ್ಯಾಪಾರಾವರ್ತಗಳ ದೆಸೆಯಿಂದಲೂ, ಅಲ್ಲಿಂದ ಜನಿಸಿದ ಆರ್ಥಿಕ ಮುಗ್ಗಟ್ಟಿನ ದೆಸೆಯಿಂದಲೂ ಸ್ವತಂತ್ರ ವ್ಯಾಪಾ ರದ ಮೇಲುಮಾಳಿಗೆಯು ಕುಸಿದುಬಿದ್ದುದರಿಂದ ರಾಷ್ಟ್ರವು ತಾನಾಗಿ ಮುಂದೆ ಬಂದು ಜನರಿಗೆ ಉದ್ಯೋಗ ಕೊಡುವ ಯೋಜನಾತ್ಮಕ ಕಾರ್ಯ ಕ್ರಮಗಳನ್ನು ಎಲ್ಲ ದೇಶಗಳೂ ಸ್ವೀಕರಿಸಬೇಕಾಯಿತು. ಸರ್ವತಂತ್ರ ಸ್ವತಂತ್ರ ರಾಷ್ಟ್ರಗಳ ಹಿರಿಹುದ್ದರಿಯಾದ ಅಮೇರಿಕದ ಸಂಯುಕ್ತ ರಾಷ್ಟ್ರವು ಕೂಡ ಟೆನಸಿ ಕಂದರದ ಯೊಜನೆಗಳಂಥ ಸಾರ್ವತ್ರಿಕ ಅಭ್ಯುದಯದ ಕಾರ್ಯಕ್ರಮಗಳನ್ನು ೧೯೩೦ರಲ್ಲಿ ಕೈಗೊಳ್ಳದೆ ಉಪಾಯವಿರಲಿಲ್ಲ.

ಪಾಶ್ಚಾತ್ಯ ದೇಶಗಳು ೧೯ನೆಯ ಶತಮಾನದಲ್ಲಿ ತಮ್ಮ ಔದ್ಯೋಗೀ ಕರಣವನ್ನು ಯಶಸ್ವಿಯಾಗಿ ಸಾಧಿಸಿಕೊಳ್ಳಲು ಪ್ರಪಂಚದ ಬಡ ದೇಶಗಳು —ಚೀನ, ಭಾರತ ಮುಂತಾದುವು—ಅದೆಷ್ಟು ಸಹಾಯವಾದುವೆಂಬುದನ್ನು

ಇಲ್ಲಿ ವಿವರಿಸುವ ಅಗತ್ಯವಿಲ್ಲ. ಹಿಂದುಳಿದ ಏಶಿಯದ ಮಾರ್ಕೆಟು ದೊರೆಯದಿರುತ್ತಿದ್ದರೆ ವ್ಯಾಂಚೆಸ್ಟರ ಬಟ್ಟೆಯು ಅಲ್ಲೇ ಕೊಳೆತು ನಾರಬೇಕಾಗಿತ್ತು. ಇಂಗ್ಲೆಂಡಿನ ಮೈಮೇಲೆಲ್ಲ ರೈಲು ಹಾದಿ ಹಾಕಿದ ಮೇಲೆ ಎಷ್ಟು ರೈಲುಯಂತ್ರಗಳನ್ನು ಅದರ ಮೇಲೆ ಓಡಿಸಿದರೂ ಇನ್ನೂ ಹೆಚ್ಚೆನಿಸುವ ಯಂತ್ರಗಳನ್ನು ಅಟಲಾಂಟಿಕ ಸಾಗರದಲ್ಲಿ ಮುಳುಗಿಸಲಾಗುತ್ತದೆಯೇ? ಅವನ್ನೇ ಹಡಗಿನಲ್ಲಿ ಹಾಕಿ ಭಾರತಕ್ಕೂ, ಚೀನಕ್ಕೂ ಕಳಿಸಿದುದರಿಂದ ಇಂಗ್ಲೆಂಡಿನ ಉತ್ಪಾದಕ ಸರಕುಗಳಿಗೆ ಅಂತರರಾಷ್ಟ್ರೀಯ ಬೇಡಿಕೆಯುಂಟಾಯಿತು. ಹೊಸ ಹೊಸ, ದೊಡ್ಡ ದೊಡ್ಡ ಕಾರ್ಖಾನೆಗಳು ತೆರೆದು ವಿಲಾಯತಿಯು 'ಪ್ರಪಂಚದ ಕಾರ್ಖಾನೆ' ಎಂದು ಮೆರೆಯಿತು. ಆದರೆ ಪ್ರಪಂಚದ ಉತ್ಪಾದನೆಯು ಏರಿದುದರ ಫಲವನ್ನು ಬರಿಯ ಔದ್ಯಮಿಕ ರಾಷ್ಟ್ರಗಳಷ್ಟೇ ಉಂಡು ತಿಂದು ಸುಖಸಂತೋಷದಲ್ಲಿರುತ್ತಿದ್ದುವು. ಇತ್ತಕಡೆ ಹಿಂದುಳಿದ ದೇಶಗಳು ಅತ್ಯಂತ ದರಿದ್ರಾವಸ್ಥೆಯಲ್ಲಿ ಕಾಲಯಾಪನೆ ಮಾಡಬೇಕಾಯಿತು.

ಇದೀಗ ಇಪ್ಪತ್ತನೆಯ ಶತಮಾನದ ಪೂರ್ವಾರ್ಧವು ಸಂದಿದೆಯಷ್ಟೆ. ಈ ಐವತ್ತು ವರ್ಷಗಳ ಆರ್ಥಿಕ ಏರಿಳಿತದ ಅನುಭವದಿಂದ ಪಡುವಣದ ಔದ್ಯಮಿಕ ರಾಷ್ಟ್ರಗಳು ಒಳ್ಳೆಯ ಪಾಠವನ್ನು ಕಲಿತಹಾಗಿದೆ. "ಪ್ರಪಂಚದಲ್ಲಿ ಬಡತನವು ಎಲ್ಲಿದ್ದರೂ ಅದು ನಿನ್ನ ಶ್ರೀಮಂತಿಕೆಗೆ ಅಪಾಯವೆಂದು ತಿಳಿ ಎಂದು ಅಂತರರಾಷ್ಟ್ರೀಯ ಶ್ರಮಜೀವಿ ಸಂಘವು ೨೫ವರುಷಗಳ ಕೆಳಗೆ ಕೊಟ್ಟ ಎಚ್ಚರಿಕೆಯ ಸತ್ಯಾರ್ಥವು ಎಲ್ಲ ದೇಶಗಳಿಗೆ ತಿಳಿದ ಮೇಲೆ ಅಮೇರಿಕದ ಸಂಯುಕ್ತ ರಾಷ್ಟ್ರದಂಥ ಬಲಾಢ್ಯ ದೇಶಗಳು ಪಾಯಿಂಟ್ ೪ ರ ಯೋಜನೆಯ ಮುಖಾಂತರ ಹಿಂದುಳಿದ ದೇಶಗಳಿಗೆ ಮಿಲಿಯಗಟ್ಟಲೆ ಡಾಲರುಗಳನ್ನು ಒದಗಿಸುವ ವಾಗ್ದಾನ ಮಾಡಿರುತ್ತವೆ. ಯುಕ್ತರಾಷ್ಟ್ರ ಸಂಘದ ಆಶ್ರಯದಲ್ಲಿ ನಡೆಯುತ್ತಿರುವ ಆರ್ಥಿಕ ಕೌನ್ಸಿಲು ತನ್ನ ಅಂಗೋಪಾಂಗಗಳ ಮುಖಾಂತರವಾಗಿ ಬಲಹೀನ ರಾಷ್ಟ್ರಗಳಿಗೆ ಸಾಲಕೊಟ್ಟು ಅವುಗಳ ಔದ್ಯೋಗೀಕರಣಕ್ಕೆ ನೆರವಾಗುತ್ತಿದೆ. ಜಗತ್ತಿನ ಆರ್ಥಿಕ ವ್ಯವಸ್ಥೆಯನ್ನು ಜಾಗತಿಕ ಪ್ರಮಾಣದಲ್ಲಿಯೇ ಸಂಘಟಿಸಬೇಕು ಎಂಬುದು ಮಾನವ ಜನಾಂಗವು ಈ ಐವತ್ತು ವರ್ಷಗಳಲ್ಲಿ ಕಲಿತ, ಎಂದೂ ಮರೆಯಲಾಗದ ಪಾಠ.

**ಆರ್ಥಿಕ ಬೆಳವಣಿಗೆ ಎಂದರೇನು?**

ಜನರ ಉತ್ಪಾದನೆಯ ಶಕ್ತಿಯೂ, ಆ ಮೂಲಕ ಅನುಭೋಗದ ಸಾಮರ್ಥ್ಯವೂ ಬೆಳೆಯುವ ಹಲವು ವಿಧಾನಗಳನ್ನು ಸಂಯೋಜಿಸುವುದಕ್ಕೆ 'ಆರ್ಥಿಕ ಬೆಳವಣಿಗೆ' ಎನ್ನುವರು. ಉತ್ತಮತರವಾದ ತಾಂತ್ರಿಕ ವಿಧಾನಗಳನ್ನು ಬೆಳಕಿಗೆ ತರುವುದು; ಹೆಚ್ಚು ಹಾಗೂ ಉತ್ತಮ ದರ್ಜೆಯ ಬಂಡವಾಳ ಸಾಮಗ್ರಿಗಳನ್ನು ಉಪಯೋಗಿಸುವುದು; ಪರಿಶ್ರಮ (ಕೂಲಿಕಾರರು)ಕ್ಕೂ ವ್ಯವಸ್ಥಾಪಕರಿಗೂ ಶ್ರೇಷ್ಠವಾದ ಶಿಕ್ಷಣ ಕೊಡಿಸುವುದು; ಪ್ರಾವೀಣ್ಯದ ಪರಮಾವಧಿಲಾಭ ಪಡೆಯಲನುಕೂಲವಾಗುವಂತೆ ದೇಶದೊಳಗಿನ ವ್ಯಾಪಾರ ವ್ಯವಸಾಯವನ್ನೂ, ಅಂತರರಾಷ್ಟ್ರೀಯ ವಾಣಿಜ್ಯವಹಿವಾಟನ್ನೂ ಬೆಳೆಯಿಸುವುದು—ಇವು ಆರ್ಥಿಕ ಬೆಳವಣಿಗೆಯ ಕೆಲವು ಲಕ್ಷಣಗಳು. ಆರ್ಥಿಕ ಬೆಳವಣಿಗೆಯು ಔದ್ಯೋಗೀಕರಣಕ್ಕಿಂತ ವಿಶಾಲವಾದ ಅರ್ಥವ್ಯಾಪ್ತಿಯುಳ್ಳುದು. ಉದ್ಯಮಗಳನ್ನು ಸ್ಥಾಪಿಸಿ, ಸರಕುಗಳನ್ನು ಕ್ಷಿಪ್ರವಾಗಿಯೂ ದೊಡ್ಡ ಪ್ರಮಾಣದಲ್ಲಿಯೂ ಒದಗಿಸುವುದು ಔದ್ಯೋಗೀಕರಣ ಎಂಬ ಪದದ ಅರ್ಥವಾದರೆ ಆರ್ಥಿಕ ಬೆಳವಣಿಗೆಯು ರಾಷ್ಟ್ರದ ಸರ್ವತೋಮುಖವಾದ ಅಭಿವೃದ್ಧಿಯನ್ನು ದೃಷ್ಟಿಯಲ್ಲಿರಿಸಿಕೊಳ್ಳುವುದು. ಮುಖ್ಯವಾಗಿ ಹಿಂದುಳಿದ ದೇಶಗಳಲ್ಲಿ ಕೃಷಿ–ಉದ್ಯಮದ ನವೀಕರಣಕ್ಕೂ ಉತ್ತಮಿಕೆಗೂ ಔದ್ಯೋಗೀಕರಣದಷ್ಟೇ ಅಂದರೆ, ಉದ್ಯಮಗಳಿಗೆ ಸಲುವಷ್ಟೇ ಮಹತ್ತ್ವವನ್ನೂ ಶ್ರದ್ಧೆಯನ್ನೂ ಕೊಡಬೇಕು ಎಂಬುದಾಗಿ ಕೃಷಿಯ ಅವನತಿಯನ್ನು ಅವಲೋಕಿಸಿದ ಕೃಷಿ–ಅರ್ಥಶಾಸ್ತ್ರಿಗಳು ಅಭಿಪ್ರಾಯಪಟ್ಟಿದ್ದಾರೆ. ಆದುದರಿಂದ ಹಿಂದುಳಿದ ದೇಶಗಳಲ್ಲಿ ಕೃಷಿವಿಧಾನದ ಕ್ರಾಂತಿಯೂ ಔದ್ಯಮಿಕ ಕ್ರಾಂತಿಯೂ ಏಕಕಾಲದಲ್ಲಿ ಒಂದಕ್ಕೊಂದು ಪೂರಕವಾಗಿ ಜರಗಬೇಕಾಗಿದೆ.

**ಮುಂದುವರಿದ ರಾಷ್ಟ್ರಗಳ ಕರ್ತವ್ಯ:**

ಪ್ರಪಂಚದ ಆರ್ಥಿಕ ಬೆಳವಣಿಗೆಯು ಸಮತೂಕವಾಗಿ ಜರಗಲು ಹಿಂದುಳಿದ ದೇಶಗಳಿಗೆ ಆರ್ಥಿಕೋನ್ನತಿಯಲ್ಲಿ ಮುಂದಾದ ದೇಶಗಳು ನೆರವಿನ ಕೈಯನ್ನು ನೀಡಬೇಕು. ಹೀಗೆ ಪ್ರಾಪಂಚಿಕ ಅಸಮಾನತೆ

ಯನ್ನು ಹೋಗಲಾಡಿಸುವುದರಿಂದ ಮುಂಬರಿದ ರಾಷ್ಟ್ರಗಳಿಗೂ ಹಿತವಾಗುತ್ತದೆ. ೧೯೪೪ರಲ್ಲಿ ರೂಸ್‌ವೆಲ್ಟ್ ಮಹಾಶಯನು ಮಾಡಿದ ಭಾಷಣವು ಈ ತತ್ತ್ವವನ್ನೇ ಚಿತ್ರಿಸುವುದು.

"ಬೇರೆ ರಾಷ್ಟ್ರಗಳ ಜೀವನದ ಮಟ್ಟವನ್ನು ಬೆಳೆಯಿಸುವುದಕ್ಕೆ ನೆರವಾದರೆ ನಮ್ಮ ಜೀವನದ ಮಟ್ಟವು ಇಳಿಯುವುದೆಂಬ ಕುಶಂಕೆಯನ್ನೂ ಭಯವನ್ನೂ ಪ್ರಚಾರಮಾಡುವುದು ಶುದ್ಧ ಅವಿವೇಕತನ. ಒಂದು ದೇಶದ ಜೀವನದ ಮಟ್ಟವು ಮೇಲೇರುತ್ತಿರುವ ಹಾಗೆ ಅದರ ಗ್ರಾಹಕ ಶಕ್ತಿಯೂ ಹೆಚ್ಚುವುದರಿಂದ ಅದರ ನೆರೆನಾಡಿನಲ್ಲಿ ಅಂತರ ರಾಷ್ಟ್ರೀಯ ವ್ಯಾಪಾರ ವಹಿವಾಟಿನ ದೆಸೆಯಿಂದ ಜೀವನದ ಮಟ್ಟವು ಅಭಿವೃದ್ಧಿಗೊಳ್ಳುವುದರಲ್ಲಿ ಸಂದೇಹವಿಲ್ಲ."

೧೯೪೩ರಲ್ಲಿ ಅಮೇರಿಕದ ಸಂಯುಕ್ತ ರಾಜ್ಯದ ಅರ್ಥಸಚಿವರಾದ ಶ್ರೀ। ಮೊರ್ಗೆಂಥೋ ಅವರು,

"ಬಂಡವಾಳದ ಆವಶ್ಯಕತೆಯುಳ್ಳ ದೇಶಗಳಿಗೆ ನಾವು ಬಂಡವಾಳವನ್ನು ಒದಗಿಸುವುದರಿಂದ, ಆ ದೇಶಗಳು ಕಡಮೆ ವೆಚ್ಚದಲ್ಲಿ ಪ್ರಪಂಚಕ್ಕೆ ಬೇಕಾಗಿರುವ ಸರಕನ್ನು ಉತ್ಪಾದಿಸುವುವು; ಮಾತ್ರವಲ್ಲದೆ ಪ್ರಪಂಚದ ಸರಕುಗಳಿಗೂ ಆ ದೇಶಗಳಲ್ಲಿ ಒಳ್ಳೆಯ ಮಾರ್ಕೆಟು ದೊರೆಯುವುದು ಸಾಲಿಗ ದೇಶವು ಸಾಲಗಾರ ದೇಶದಷ್ಟೇ ಲಾಭವನ್ನು ಪಡೆಯಬಲ್ಲುದು. ಎಲ್ಲೆಡೆಯೂ ಅಂತರರಾಷ್ಟ್ರೀಯ ವ್ಯಾಪಾರವು ಹೆಚ್ಚುವುದು ಪ್ರಪಂಚವು ಅನುಭೋಗಿಸುವ ಸರಕುಗಳ ವಾಸ್ತವಿಕ ವೆಚ್ಚವು ಇಳಿಯುವುದು; ಸಾಲಕೊಡುವ ದೇಶವೂ ಸಾಲಕೊಳ್ಳುವ ದೇಶವೂ ಪರಸ್ಪರ ಪ್ರಯೋಜನಗಳನ್ನು ಪಡೆಯುವುವು."

ಎಂದು ಹೇಳಿರುವನು. ಅಲ್ಲಿಂದ ಬಳಿಕ ಅಮೇರಿಕದಂತೆ ಬಂಡವಾಳದ ಆಧಿಕ್ಯವುಳ್ಳ ಇತರ ರಾಷ್ಟ್ರಗಳೂ ಹಿಂದುಳಿದ ದೇಶಗಳಲ್ಲಿ ಬಂಡವಾಳವನ್ನು ಪ್ರಯೋಜಕ ಕಾರ್ಯಕ್ರಮಗಳಲ್ಲಿ ಹೂಡಲು ಒಪ್ಪಿಕೊಂಡಿವೆ. ಅಂತರರಾಷ್ಟ್ರೀಯ ಬ್ಯಾಂಕು ಪಂಕ್ತಿಪರಿಭೇದವನ್ನು ಮಾಡದೆ ಉತ್ಪಾದಕ ಯೋಜನೆಗಳನ್ನು ಕೈಗೊಳ್ಳುವ ಎಲ್ಲ ದೇಶಗಳಿಗೂ ನೆರವು ನೀಡುತ್ತಿದೆ.

**ಬೆಳ್ಳಿಯಂಚು:**

ಒಂದಾನೊಂದು ಕಾಲದಲ್ಲಿ ಒಂದು ದೇಶದಿಂದ ಇನ್ನೊಂದಕ್ಕೆ ಬಂಡವಾಳವು ಬರೇ ಬಡ್ಡಿಯ ಆಕರ್ಷಣೆಯಿಂದ ಚಲಿಸುತ್ತಿದ್ದಿತು. ಆಗ ಬಂಡವಾಳದ ಉಪಯೋಗದ ಕಡೆಗೆ ಸಾಲಿಗನ ದೃಷ್ಟಿ ಇರಲಿಲ್ಲ. ಈಗಲಾದರೋ ಸಾಲವು ಪ್ರಯೋಜಕ ಯೋಜನೆಗಳಲ್ಲಿ ಕೆಲಸಮಾಡಿ ಫಲಿಸಬೇಕು ಎಂಬ ಆಕಾಂಕ್ಷೆ ಸಾಲಿಗರಿಗೂ ಸಾಲಗಾರರಿಗೂ ಇರುವುದರಿಂದ ಬಂಡವಾಳದ ಇನ್ವೆಸ್ಟ್‌ಮೆಂಟನಲ್ಲಿ ಒಂದು ಹೊಸ ಅಧ್ಯಾಯವನ್ನು ತೆರೆದಂತಾಗಿದೆ. ಬಂಡವಾಳದ ಹೆಚ್ಚಳವು ಮಿತಿಮೀರಿ, ಉತ್ಪಾದನೆಯ ಪರಿಷ್ಕಬಿಂದುವು ಸಮೀಪಿಸಿದ ರಾಷ್ಟ್ರಗಳಿಗೆ ಹಿಂದುಳಿದ ದೇಶಗಳ ಇರವು ಕಾರ್ಮೋಡದ ಕರೆಯ ಬೆಳ್ಳಿಯುಂಚಿನಂತಾಗಿದೆ. ಇದರಿಂದ ಹಿಂದುಳಿದ ದೇಶಗಳಿಗೂ ಲಾಭವಿದೆ ಎಂಬುದನ್ನು ನಾವು ಮೊದಲೇ ಮನಗಂಡಿರುವೆವು

**ಮುಂದೇನು?**

ತಾಂತ್ರಿಕ ಪ್ರಗತಿಯು ಭರದಿಂದ ಸಾಗುತ್ತಿರುವ ಅರ್ವಾಚೀನ ಕಾಲದಲ್ಲಿ ಪ್ರತಿಯೊಂದು ದೇಶವೂ ಉದ್ಧಾರವಾಗಲಿಕ್ಕೆ ಬೇಕಾದಷ್ಟು ಪ್ರಚ್ಛನ್ನ ಶಕ್ತಿ ಪ್ರಪಂಚದಲ್ಲಿದೆ. ಭಾರತದೇಶವನ್ನೇ ತೆಗೆದುಕೊಂಡರೆ ನಮ್ಮ ಜಲಶಕ್ತಿಯೂ, ಮೂಲಸಾಮಗ್ರಿಗಳ ಉತ್ಪಾದಕ ಶಕ್ತಿಯೂ, ಜನಶಕ್ತಿಯೂ ನಾಲ್ಕನೆಯದಾದ ಬಂಡವಾಳದೊಡನೆ ಸಂಗಮಿಸಿದರೆ ಇನ್ನು ಇಪ್ಪತ್ತೈದು ವರ್ಷಗಳಲ್ಲಿ ನಮ್ಮ ಜೀವನದ ಮಟ್ಟದಲ್ಲಿ ಎಷ್ಟೋ ಸುಧಾರಣೆ ಆಗಲು ಸಾಧ್ಯವಿದೆ. ಅಷ್ಟುಹೊತ್ತಿಗೆ ಅಂತರರಾಷ್ಟ್ರೀಯ ವ್ಯಾಪಾರದ ತೊಡಕು ತೊಂದರೆಗಳು—ಡಾಲರು ಕೊರತೆ, ಟಾರೀಫು ಪೌಳಿ, ಮಾರುಪೇದರ ಇಳಿಸುವುದರಲ್ಲಿ ಪೈಪೋಟಿ ಮುಂತಾದುವು– ಅಂತರರಾಷ್ಟ್ರೀಯ ಸಂಘ, ಸಂಘಟನೆಗಳಿಂದ ಬಗೆಹರಿಸಲ್ಪಟ್ಟರೆ, ನಮ್ಮ ದೇಶದ ಆರ್ಥಿಕ ಅಭ್ಯುದಯದಿಂದ ಪ್ರಪಂಚದ ಕಲ್ಯಾಣವೂ ನೆರವೇರುವುದು.

ಒಂದು ದೇಶದ ಉದ್ಯಮಗಳು ಹೇಗೆ ಬೆಳೆಯಬಲ್ಲುವು, ಹಣಪ್ರಪಂಚವು ಹೇಗೆ ವಿಸ್ತಾರವಾಗುವುದು, ಜನಸಂಖ್ಯೆಯು ಎಷ್ಟಿದ್ದರೆ ಒಳಿತು, ಸಂಚಾಲಕರಿಗೆಷ್ಟು ಮುನಾಫೆ ಬಿಡೋಣ, ಕೂಲಿಯ ಸಮಸ್ಯೆಗಳೇನು,

ಅವಯವ ಸಂಯೋಜನೆಯ ಮುಖ್ಯ ಪ್ರಶ್ನೆಯನ್ನೆಂತು ಇದಿರಿಸೋಣ, ಅಂತರ ರಾಷ್ಟ್ರೀಯ ವ್ಯಾಪಾರದ ಪರಮಾವಧಿ ಲಾಭ ಪಡೆಯುವುದು ಹೇಗೆ. ನಿರುದ್ಯೋಗವನ್ನು ನಿವಾರಿಸಿ ಪೂರ್ಣೋದ್ಯೋಗವನ್ನು ಶಾಶ್ವತವಾಗಿ ನಿಲ್ಲಿಸಲು ರಾಷ್ಟ್ರೀಯ ಸರಕಾರವು ಏನು ಮಾಡಬೇಕು, ಮುಂಬರಿದ ರಾಷ್ಟ್ರಗಳ ಕರ್ತವ್ಯವೇನು, ಅಂತರ ರಾಷ್ಟ್ರೀಯರಂಗದಲ್ಲಿ ಏನೆಲ್ಲ ಪರಿಹಾರಗಳು ನಡೆಯತಕ್ಕುದು, ನವಸಮಾಜದ ರಚನೆಗೆ ಯೋಗ್ಯವಾದ ಆರ್ಥಿಕ ತತ್ತ್ವವು ಯಾವುದು? ಮೊದಲಾದ ಹಲವಾರು ಪ್ರಶ್ನೆಗಳನ್ನು ದೇಶದ ಜನ ತಮ್ಮ ಸ್ವಂತ ತಿಳುವಳಿಕೆಯಿಂದ ಉತ್ತರಿಸಲು ಕಲಿಯಬೇಕು. ಈ ಕೆಲಸಕ್ಕೆ ನಮ್ಮ ಕೈಪಿಡಿಯು ನೆರವಾಗಲಿ.

**ತಮಾಮ್ ಶುದ್**

# ಶಬ್ದಕೋಶ ಮತ್ತು ಅಕಾರಾದಿ ಸೂಚಿ

[**ತಿದ್ದುಪಡಿ:**– ೨೭ನೆಯ ಪುಟದ ೧೧–೧೨ನೆಯ ಸಾಲಿನಲ್ಲಿ 'ಗಿರಾಕಿಗೆ ಮಾರುವ ಸ್ವಾತಂತ್ರ್ಯವಿದ್ದರೆ' ಎಂದೂ, ೮೧ನೆಯ ಪುಟದ ೧೩ನೆಯ ಸಾಲಿನಲ್ಲಿ 'ಒಂದನೆಯ' ಎಂಬುದರ ಬದಲು 'ಆ' ಎಂದೂ, ೨೫೧ನೆಯ ಪುಟದ ರಾಜಸ್ವವೆಂಬ ಅಧ್ಯಾಯವನ್ನು ಹದಿನೇಳನೆಯ ಅಧ್ಯಾಯ ಎಂದೂ, ಸಮಾಜವಾದಿ ಅರ್ಥಮಂಡಲವನ್ನು ಹದಿನೆಂಟನೆಯ ಅಧ್ಯಾಯವೆಂದೂ, ಕೊನೆಯ ಅಧ್ಯಾಯವನ್ನು ಹತ್ತೊಂಭತ್ತೆಂದೂ, ತಿದ್ದಿಕೊಂಡು ಓದಬೇಕಾಗಿ ಪ್ರಾರ್ಥನೆ.]

## ಇದೇ ಲೇಖಕರ ಇನ್ನೂ ಕೆಲವು ಗ್ರಂಥಗಳು

### ಪ್ರಜಾತಂತ್ರದ ಹೆದ್ದಾರಿ.

ಟಿನಸಿ ಕಂದರದ ಯೋಜನೆಯನ್ನು ಬರಿಯ ಆರ್ಥಿಕ ದೃಷ್ಟಿಯಿಂದ ಲ್ಲದೆ ರಾಜಕೀಯ ಸಂಘಟನಾ ತತ್ತ್ವದ ದೃಷ್ಟಿಯಿಂದಲೂ ಲೇಖಕರು ಚರ್ಚಿಸಿದ್ದಾರೆ. ಇದು ಈ ಗ್ರಂಥದ ಒಂದು ಹಿರಿಮೆ.... ಸ್ವತಂತ್ರಭಾರತವು ಯೋಜನೆಗಳ ಉನ್ಮಾದದಲ್ಲಿ ಸಿಲುಕಿದೆಯಷ್ಟೆ? ಆದರೆ ಒಂದು ಯೋಜನೆ ಯಶಸ್ವಿಯಾಗಬೇಕಾದರೆ ಸರಕಾರಗಳೂ, ಜನತೆಯೂ, ತಜ್ಞರೂ ಯಾವ ರೀತಿಯಿಂದ ಕಷ್ಟನಷ್ಟಗಳಲ್ಲಿ ಸಮಭಾಗಿಗಳಾಗಿ ಸಹಕರಿಸುವುದು ಅಗತ್ಯ ಎಂಬುದನ್ನು ಶ್ರೀ। ಭಟ್ಟರು ಟಿನಸಿ ವಿವರಗಳ ವರ್ಣನೆಯಿಂದ ತೋರಿಸಿಕೊಟ್ಟಿದ್ದಾರೆ. ಹೆಚ್ಚಾಗಿ, ಜನತೆ ಮುಂದಾದರೆ ಯಾವುದೂ ಅಸಾಧ್ಯವಲ್ಲ ಎಂಬ ಉತ್ಸಾಹದ ಪಾಠವನ್ನೂ ಹೇಳಿಕೊಟ್ಟಿದ್ದಾರೆ. ಸ್ವಾತಂತ್ರ್ಯ, ರಾಷ್ಟ್ರೀಯತೆ, ಸಹಕಾರ—ಮುಂತಾದುವುಗಳ ಸರಿಯಾದ ಕಲ್ಪನೆ ಅನೇಕ ಮುಂದಾಳುಗಳಿಗೂ ಇಲ್ಲದಿರುವಾಗ ಪ್ರತಿಯೊಬ್ಬನೂ ಈ ಗ್ರಂಥವನ್ನು ಓದಿ ಲಾಭ ಪಡೆಯಬಹುದಾಗಿದೆ... ಇಂದಿನ ಸಂದರ್ಭದಲ್ಲಿ ದೇಶದ ಮುಂದಿನ ಸಮಸ್ಯೆ ಮತ್ತು ಕನ್ನಡ ಸಾಹಿತ್ಯದ ಬೆಳವಣಿಗೆ—ಇವೆರಡೂ ದೃಷ್ಟಿಗಳಿಂದ ಇದೊಂದು ಶ್ರೇಷ್ಠ ಪ್ರಕಟಣೆ ಎಂದು ಅಭಿಮಾನದಿಂದ ಹೇಳಬಹುದು.

ಶ್ರೀರಂಗ—'ವಿಚಾರವಾಣಿ'ಯಲ್ಲಿ.

ಶ್ರೀ ಭಟ್ಟರು ಇಂತಹ ಆರ್ಥಿಕ, ರಾಜಕೀಯ ಗ್ರಂಥಗಳನ್ನು ವಿಪುಲವಾಗಿ ನೀಡಲಿ.

—ಚಿತ್ರಗುಪ್ತ.

ಬೆಲೆ: **ಎರಡು ರುಪಾಯಿ.**

ಸಿಗುವ ಸ್ಥಳ: **ಲೇಖಕ, ಕುಂಜಿಬೆಟ್ಟು, ಉಡುಪಿ.**

# ಘಂಟಿಮಾರಾ

ಈ ಶತಮಾನದ ಅತ್ಯಂತ ಮರ್ಮಸ್ಪರ್ಶಿ ಕಾದಂಬರಿಗಳಲ್ಲೊಂದು.

—ಕರ್ಮವೀರ.

ಅವಮಾನದಿದಿರು, ಅನ್ಯಾಯದಿದಿರು ಯಾರೂ ತಗ್ಗಿ ನಡೆಯಬಾರದು ಎಂಬ ಧೀರವಾಣಿ ಸಿಲೋನೆಯದು.

—ಸಂಗಾತಿ.

ಅಂಥ ಕೆಚ್ಚಿನ ಲೇಖನಿಯನ್ನು ಕನ್ನಡದ ಶಾಯಿಯಲ್ಲಿ ಅದ್ದಿ ಶ್ರೀಮಾನ್ ಭಟ್ಟರು ಅನುವಾದವನ್ನು ಮೂಲಗ್ರಂಥಕ್ಕೆ ಚ್ಯುತಿ ಇಲ್ಲದಂತೆ ಮಾಡಿದ್ದಾರೆ.

—ಚಿತ್ರಗುಪ್ತ.

ಎಲ್ಲರಿಗೂ ತಿಳಿಯುವಂತೆ ಸುಲಭಶೈಲಿಯಲ್ಲಿ ಕನ್ನಡಿಸಲಾಗಿದೆ. ರಾಜಕೀಯದಲ್ಲಿ ದುಡಿಯುವವರು, ರೈತನೊಂದಿಗೆ ಕೆಲಸಮಾಡುವವರು ಎಲ್ಲರೂ ಓದಲೇ ಬೇಕಾದ ಪುಸ್ತಕ.

—ವಿಮರ್ಶಕ.

ಸಿಲೋನೆಯ ಪ್ರಖ್ಯಾತ ಕೃತಿ ಘಂಟಮಾರಾ ಕನ್ನಡಕ್ಕೆ ಅನುವಾದಗೊಂಡದ್ದು ಸಂತೋಷಕರ. ಅನುವಾದವು ಚೆನ್ನಾಗಿದೆ.

—ಭಾರತಜ್ಯೋತಿ.

ಮೂಲಗ್ರಂಥದ ವೈಶಿಷ್ಟ್ಯಗಳೆಲ್ಲ ಸಮರ್ಪಕವಾಗಿ ಕನ್ನಡಿಸಲ್ಪಟ್ಟಿರುವುದನ್ನು ನೋಡುವಾಗ ಅನುವಾದವು ಸರ್ವೋತ್ತಮವೆಂದು ಹೇಳಲು ಅಡ್ಡಿ ಇಲ್ಲ. ಅನುವಾದ ಮಾಡಿದ ಶ್ರೀ। ಭಟ್ಟರೂ, ಮಾಡಿಸಿದ ಪ್ರಕಾಶಕರೂ ಅಭಿನಂದನೀಯರು.

—ಇಂಡಿಯನ್ ಎಕ್ಸ್‌ಪ್ರೆಸ್.

## ಅವರು ಯುದ್ಧಕ್ಕೆ ಹೋಗಲಿಲ್ಲ.

ಮೂಲ ಸಾಮಗ್ರಿಯ ಆಯ್ಕೆಯ ಕೌಶಲ್ಯ, ರಸಸ್ಥಾನಗಳ ಜ್ಞಾನ–ಇವುಗಳನ್ನು ಇಲ್ಲಿ ಕಾಣಬಹುದಾಗಿದೆ.

—ಕರ್ಮವೀರ.

ಶ್ರೀ. ಭಟ್ಟರ ಕತೆಗಳಲ್ಲಿ ಎದ್ದು ಕಾಣುವ ವೈಶಿಷ್ಟ್ಯವೆಂದರೆ ಸ್ವಭಾವ ಚಿತ್ರಣ. ಕಥಾವಸ್ತುವಿಗಿಂತ ವ್ಯಕ್ತಿಗೆ ಪ್ರಾಧಾನ್ಯ. ಪಾತ್ರಗಳು ನೈಸರ್ಗಿಕವಾಗಿ ಅರಳಿದ ಹೂಗಳು. ಮಾನವ ಸಮಾಜದ ಲೋಪದೋಷಗಳನ್ನು ಕಾಣುವ ಪೃಥಕ್ಕರಣ ಭಟ್ಟರಲ್ಲಿದೆ. ಜತೆಗೆ ವಾಸ್ತವತೆಯ ಹಿನ್ನೆಲೆಯೂ ಇರುವುದು.

—ನುಡಿ.

ತಿಳಿನಗೆಯಿಂದ ಕೂಡಿದ ಮಾತುಗಳೂ, ನೈಜ ವ್ಯಕ್ತಿಚಿತ್ರಣವೂ, ಕಟುವಾದ ವಿಮರ್ಶೆಯೂ ಶ್ರೀ ಕಾರಂತರ ವಿಡಂಬನ ಶೈಲಿಯನ್ನು ನೆನಪಿಗೆ ತರುವುವು. ಎಲ್ಲ ಕತೆಗಳಲ್ಲೂ ನಾವೀನ್ಯವಿದೆ.

—ನವಯುಗ.

ಬೆಲೆ: **ಎರಡು ರುಪಾಯಿ.**

ಸಿಗುವ ಸ್ಥಳ: **ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ.**

## ಮುಂಬರುವ ಕೆಲವು ಕೃತಿಗಳು

**ಏಶಿಯದ ಸಂಪತ್ತು** (ಒಂದು ಆರ್ಥಿಕ ಅಧ್ಯಯನ)

**ಜಾರ್ಜ ಬರ್ನಾರ್ಡ ಶಾ** (ಜೀವನ ಚರಿತ್ರೆ)

**ಡಾಕ್ಟರ ಶ್ವಯಿಟ್ಸರ** (ಜೀವನ ಚರಿತ್ರೆ)

**ನಾಗರಿಕತೆ** (ಪ್ರಬಂಧ ಸಂಗ್ರಹ)



# ಶಾಸ್ತ್ರ ವಿಷಯದ ಗ್ರಂಥಗಳು

**ರಾಜ್ಯಶಾಸ್ತ್ರ – ಡಿ. ವಿ. ಗುಂಡಪ್ಪ**

ಕ್ರೌನ್ ಅ. viii+೪೭೬ ಪುಟಗಳು, ಏಳು ಚಿತ್ರಗಳು. ಬೆಲೆ: ರೂ. ೫-೦-೦
ಲೈಬ್ರೆರಿ ಪ್ರತಿ: ರೂ. ೬-೮-೦

ರಾಜ್ಯಶಾಸ್ತ್ರದ ವಿಷಯ ನಮ್ಮ ಜನಕ್ಕೆ ಹೊಸದೂ ಅಪರಿಚಿತವೂ ಆದದ್ದಾದರೂ ವಿಷಯವನ್ನು ಖಚಿತವಾಗಿಯೂ ಸ್ಪಷ್ಟವಾಗಿಯೂ ತೊಡಕಿಲ್ಲದಂತೆಯೂ, ಅನುಭವೋಕ್ತಿಗಳಿಂದ ಸ್ವಾರಸ್ಯವುಳ್ಳದ್ದಾಗಿಯೂ ಬಹುಸಾಮಾನ್ಯರಾದ ಜನರಿಗಾಗಿ ಬರೆದ ಗ್ರಂಥವಿದು. ಪ್ರಜಾಜನರಿಗೆ ರಾಜ್ಯಶಾಸ್ತ್ರದ ವಿಷಯ ತಿಳಿವಳಿಕೆಯನ್ನುಂಟು ಮಾಡಿಕೊಡಲು ಇದು ಅತ್ಯುತ್ತಮ ಗ್ರಂಥಸಾಧನ. ರಾಜ್ಯಶಾಸ್ತ್ರವನ್ನು ಕುರಿತು ಈ ಬಗೆಯ ವಿಸ್ತಾರವಾದ ಕೃತಿ ಕನ್ನಡದಲ್ಲಿ ಪ್ರಕಟವಾಗುವುದು ಇದೇ ಮೊದಲು.

★

**ಅರ್ಥಶಾಸ್ತ್ರ – ಕು. ಶಿ. ಹರಿದಾಸ ಭಟ್ಟ, ಎಂ. ಎ., ವಿದ್ವಾನ್.**

ಕ್ರೌನ್ ಅ. viii+೪೦೫ ಪುಟಗಳು, ಬೆಲೆ: ರೂ. ೫-೦-೦
ಲೈಬ್ರೆರಿ ಪ್ರತಿ ರೂ. ೬-೮-೦

ಕನ್ನಡದಲ್ಲಿ ಅರ್ಥಶಾಸ್ತ್ರದ ಮೂಲತತ್ತ್ವಗಳನ್ನು ಕುರಿತು ಮೊದಲನೆಯ ಗ್ರಂಥ. ಇದರಲ್ಲಿ ಆಧುನಿಕ ಪ್ರಪಂಚದ ಆರ್ಥಿಕ ಸುಳಿವು ಹೊಳವುಗಳನ್ನು ಸುಲಭದಲ್ಲಿ ಗ್ರಹಿಸುವಂತೆ ಸರಳ ಸುಂದರವಾದ ಶೈಲಿಯಲ್ಲಿ, ಹಲವು ನಕ್ಷೆಗಳ-ನಿದರ್ಶನಗಳ ಸಹಾಯದಿಂದ ರಸವತ್ತಾಗಿ ನಿರೂಪಿಸಲಾಗಿದೆ. ಈ ಗ್ರಂಥಕ್ಕೆ ಮದರಾಸು ವಿಶ್ವವಿದ್ಯಾನಿಲಯದ ಘನವಾದ ಪಾರಿತೋಷಕವೂ ದೊರಕಿದೆ.

★

**ಜಗತ್ತುಗಳ ಹುಟ್ಟು ಸಾವು** – ಆರ್. ಎಲ್. ನರಸಿಂಹಯ್ಯ, ಎಂ.ಎಸ್‌ಸಿ.

ಕ್ರೌನ್ ಅ. ಸುಮಾರು ೩೦೦ ಪುಟಗಳು, ಅನೇಕ ಚಿತ್ರಗಳು.

ಸದ್ಯದಲ್ಲಿಯೆ ಪ್ರಕಟವಾಗಲಿದೆ

**ಕಾವ್ಯಾಲಯ ★ ಪ್ರಕಾಶಕರು ★ ಮೈಸೂರು**

MANIPAL POWER PRESS, MANIPAL.